# ತುಳುನಾಡಿನ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಬದುಕು ಮತ್ತು ಸಾಂಸ್ಕೃತಿಕ ಚಿತ್ರಣ



**2016-17ನೇ ಸಾಲಿನ ಎಂ. ಫಿಲ್ ಪದವಿಗಾಗಿ**
**ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ ಸಾದರ ಪಡಿಸಿದ**
**ಸಂಶೋಧನಾ ಪ್ರಬಂಧ**

ರಿ.ನಂ. 161101030045


ಸಂಶೋಧಕರು :

ಬಿ. ಎ. ಲೋಕಯ್ಯ ಶಿಶಿಲ

ಮಾರ್ಗದರ್ಶಕರು :

ಡಾ| ಗಿರೀಶ್ ಭಟ್ ಎ.
ಕನ್ನಡ ಸಹಪ್ರಾಧ್ಯಾಪಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು, ಬಂಟ್ವಾಳ, ದ.ಕ.



ಕನ್ನಡ ವಿಶ್ವವಿದ್ಯಾನಿಲಯ ಹಂಪಿ
ವಿದ್ಯಾರಣ್ಯ - ೫೮೩ ೨೭೬









**2016-17ನೇ ಸಾಲಿನ ಎಂ. ಫಿಲ್ ಪದವಿಗಾಗಿ**
**ಕನ್ನಡ ವಿಶ್ವವಿದ್ಯಾನಿಲಯ, ಹಂಪಿಗೆ ಸಾದರ ಪಡಿಸಿದ**
**ಸಂಶೋಧನಾ ಪ್ರಬಂಧ**

ರಿ.ನಂ. 161101030045

ಸಂಶೋಧಕರು :

ಬಿ. ಎ. ಲೋಕಯ್ಯ ಶಿಶಿಲ



ಮಾರ್ಗದರ್ಶಕರು :

ಡಾ। ಗಿರೀಶ್ ಭಟ್ ಎ.
ಕನ್ನಡ ಸಹಪ್ರಾಧ್ಯಾಪಕರು
ಸರಕಾರಿ ಪ್ರಥಮ ದರ್ಜೆ ಕಾಲೇಜು, ಬಂಟ್ವಾಳ, ದ.ಕ.

ಕನ್ನಡ ವಿಶ್ವವಿದ್ಯಾನಿಲಯ ಹಂಪಿ
ವಿದ್ಯಾರಣ್ಯ – ೫೮೩ ೨೭೬

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನಾ ಕೇಂದ್ರ
ಬಲ್ಮಠ – ಮಂಗಳೂರು – 575 001



# ದೃಢೀಕರಣ ಪತ್ರ

ಲೋಕಯ್ಯ ಶಿಶಿಲ. ಬಿ. ಇವರು ನನ್ನ ಮಾರ್ಗದರ್ಶನದಲ್ಲಿ "ತುಳುನಾಡಿನ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಬದುಕು ಮತ್ತು ಸಾಂಸ್ಕೃತಿಕ ಸ್ವರೂಪ" ಎಂಬ ವಿಷಯದ ಕುರಿತಾಗಿ ಅಧ್ಯಯನ ಪ್ರಬಂಧವನ್ನು 2016–17ನೇ ಸಾಲಿನ ಎಂ. ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯ ಹಂಪಿಗೆ ಸಿದ್ಧಪಡಿಸಿ ಸಲ್ಲಿಸುತ್ತಿದ್ದಾರೆ.

ಈ ಪ್ರಬಂಧವನ್ನು ಈ ಮೊದಲು ಭಾಗಶಃ/ಪೂರ್ಣವಾಗಿ ಇವರ ಇತರ ಯಾವುದೇ ಪದವಿಗಾಗಲೀ, ಅಧ್ಯಯನಕ್ಕಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತೇನೆ.

ಸ್ಥಳ : ಬಂಟ್ವಾಳ

ದಿನಾಂಕ : 28–7–2017

ಡಾ। ಗಿರೀಶ್ ಭಟ್ ಎ.

ಮಾರ್ಗದರ್ಶಕರು

ಡಾ। ಗಿರೀಶ್ ಭಟ್ ಎ.
ಎಂ.ಎ. (ಕನ್ನಡ), ಪಿಎಚ್.ಡಿ., ಎಂ.ಎ. (ಇಂಗ್ಲಿಷ್)
ಸಹ ಪ್ರಾಧ್ಯಾಪಕ ಮತ್ತು ಮುಖ್ಯಸ್ಥರು, ಕನ್ನಡ ವಿಭಾಗ
ಸರಕಾರಿ ಪ್ರಥಮ ದರ್ಜೆ ಕಾಲೇಜು, ಬಂಟ್ವಾಳ
ಜೋಡುಮಾರ್ಗ – 574 219, ದಕ್ಷಿಣ ಕನ್ನಡ

# ಪ್ರಮಾಣ ಪತ್ರ

"ತುಳುನಾಡಿನ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಬದುಕು ಮತ್ತು ಸಾಂಸ್ಕೃತಿಕ ಸ್ವರೂಪ" ಎಂಬ ವಿಷಯದ ಕುರಿತಾಗಿ ಅಧ್ಯಯನ ಪ್ರಬಂಧವನ್ನು ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ 2016–17ನೇ ಸಾಲಿನ ಎಂ. ಫಿಲ್ ಪದವಿಗಾಗಿ ನಾನು ದ.ಕ. ಜಿಲ್ಲೆಯ ಬಂಟ್ವಾಳ ಸರಕಾರಿ ಪ್ರಥಮ ದರ್ಜೆ ಕಾಲೇಜಿನ ಕನ್ನಡ ಸಹಪ್ರಾಧ್ಯಾಪಕರಾದ ಡಾ। ಗಿರೀಶ್ ಭಟ್ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತೇನೆ.

ಈ ಪ್ರಬಂಧವನ್ನು ಈ ಮೊದಲು ಭಾಗಶಃ/ಪೂರ್ಣವಾಗಿ ಇವರ ಇತರ ಯಾವುದೇ ಪದವಿಗಾಗಲೀ, ಅಧ್ಯಯನಕ್ಕಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಶಿಶಿಲ, ಬೆಳ್ತಂಗಡಿ

ದಿನಾಂಕ : 28–7–2017

ತಮ್ಮ ವಿಶ್ವಾಸಿ,

**ಲೋಕಯ್ಯ ಶಿಶಿಲ ಬಿ.**

# ತುಳುನಾಡಿನ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಬದುಕು ಮತ್ತು ಸಾಂಸ್ಕೃತಿಕ ಸ್ವರೂಪ

## ಪರಿವಿಡಿ

### ಅಧ್ಯಾಯ : ೧



### ಅಧ್ಯಾಯ : ೨



### ಅಧ್ಯಾಯ : ೩

## ಅಧ್ಯಾಯ – ೪



## ಅಧ್ಯಾಯ – ೫



## ಅಧ್ಯಾಯ : ೬

## ಅಧ್ಯಾಯ – ೭

# ತುಳುನಾಡಿನ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಬದುಕು ಮತ್ತು ಸಾಂಸ್ಕೃತಿಕ ಸ್ವರೂಪ

## ಅಧ್ಯಾಯ – ೧

೧. ಪ್ರಸ್ತಾವನೆ :

೧.೨. ಪೀಠಿಕೆ

೧.೩. ವಿಷಯ ವ್ಯಾಪ್ತಿ

೧.೪. ಅಧ್ಯಯನದ ಉದ್ದೇಶ ಮತ್ತು ಮಹತ್ವ

೧.೫. ಈವರೆಗೆ ನಡೆದಿರುವ ಅಧ್ಯಯನಗಳು

### ೧. ಪ್ರಸ್ತಾವನೆ :

ಕರ್ನಾಟಕ ಪಶ್ಚಿಮ ಕರಾವಳಿ ಭಾಗದ ಪೂರ್ವದಲ್ಲಿ ಸಹ್ಯಾದ್ರಿ ಪರ್ವತ ಶ್ರೇಣಿಯಿಂದ ಮೊದಲುಗೊಂಡು ಪಶ್ಚಿಮದ ಅರಬ್ಬೀ ಸಮುದ್ರ, ದಕ್ಷಿಣದಲ್ಲಿ ಕೇರಳ ರಾಜ್ಯದ ಚಂದ್ರಗಿರಿ ನದಿ, ಉತ್ತರದಲ್ಲಿ ಹೊನ್ನಾವರ, ಗೇರುಸೊಪ್ಪೆ ಪ್ರದೇಶಗಳನ್ನೊಳಗೊಂಡಿದ್ದ ಭೂಭಾಗವನ್ನು ಪ್ರಾಚೀನ ಅಳುಪ ಅರಸರ ಕಾಲದಲ್ಲಿ "ತುಳುನಾಡು" ಎಂದು ಕರೆಯಲಾಗುತ್ತಿತ್ತು. ಪಂಚದ್ರಾವಿಡ ಭಾಷೆಗಳಲ್ಲಿ ಒಂದಾದ "ತುಳುಭಾಷೆ" ಈ ಭಾಗದ ಮಾತೃಭಾಷೆಯಾಗಿರುವುದರಿಂದ ಈ ಪ್ರದೇಶವನ್ನು ತುಳುನಾಡೆಂದು ಗುರುತಿಸಲಾಯಿತು. ಅದೇ ರೀತಿ ಭೌಗೋಳಿಕವಾಗಿಯೂ ಈ ಪ್ರದೇಶ ದಟ್ಟ ಅರಣ್ಯಗಳಿಂದಾವೃತವಾದ ತಗ್ಗು ಪ್ರದೇಶವಾದ್ದರಿಂದಲೂ ಈ ಭೂಭಾಗವನ್ನು ತಳನಾಡು, ಪಾತಾಳಲೋಕ, ನಾಗರಖಂಡ, ನಾಗಲೋಕ ಎಂದು ಮುಂತಾಗಿ ಹೆಸರಿಸಲಾಗಿದೆ. ಇಲ್ಲಿನ ಜನರು ತಮ್ಮದೇ ಆದ ವಿಶಿಷ್ಟ ಭಾಷೆ, ಸಂಸ್ಕೃತಿ, ಆರಾಧನೆ, ನಂಬಿಕೆ, ನಡವಳಿಕೆಗಳನ್ನು ಹೊಂದಿದ್ದಾರೆ.

"ಸಂಸ್ಕೃತಿ" ಎಂಬುದು ಮಾನವನ ನಂಬಿಕೆ, ನಡವಳಿಕೆ, ಆಚಾರ, ವಿಚಾರ, ಆರಾಧನೆ, ಆಚರಣೆ, ರೂಢಿ, ಸಂಪ್ರದಾಯ ಮುಂತಾದ ಜೀವನ ವಿಧಾನಗಳ ಒಟ್ಟು ಮೊತ್ತವಾಗಿದೆ. ತುಳುನಾಡಿನ ಸಂಸ್ಕೃತಿ, ವ್ಯವಸಾಯಕ್ಕೆ ಆಸರೆಯಾದ ಭೂಮಿ, ಮಣ್ಣು, ಶ್ರಮ ಮತ್ತು ಆರಾಧನಾ ಪದ್ಧತಿಯಲ್ಲಿ ಅಡಕವಾಗಿದೆ. ಹೀಗಾಗಿಯೇ ತುಳುವರು ವ್ಯವಸಾಯ, ಭೂಮಿ, ಮಣ್ಣಿನಲ್ಲಿ ದೈವತ್ವವನ್ನು ಕಂಡುಕೊಂಡರಲ್ಲದೆ, ಗತಿಸಿ ನಮ್ಮನ್ನಗಲಿದ ವೀರರನ್ನು, ಸಂಬಂಧಿಕರನ್ನು ದೈವ, ಭೂತ, ಪ್ರೇತಗಳ ಸ್ಥಾನಕ್ಕೇರಿಸಿ ಈ ಶಕ್ತಿಗಳನ್ನು ಸಂತೃಪ್ತಿಪಡಿಸಲು ಆದಿಮಾನವನ ಕಾಲದಿಂದಲೇ ರೂಢಿಯಲ್ಲಿದ್ದ ವಿವಿಧ ಆರಾಧನಾ ವಿಧಿವಿಧಾನಗಳನ್ನು ಅನುಕರಿಸತೊಡಗಿದರು.

ತುಳುನಾಡಿನಲ್ಲಿ ಮೊತ್ತ ಮೊದಲು ಆರಾಧನೆಗೊಂಡ ದೈವ "ನಾಗಬಿರ್ಮೆರ್". ತುಳುವರು ತಾವು ಬೆಳೆದ ಬೆಳೆಯನ್ನು ಕ್ರಿಮಿ, ಕೀಟಗಳಿಂದ ರಕ್ಷಣೆ ಮಾಡುವ ನಾಗರಹಾವು ಮಣ್ಣಿನ ಹುತ್ತದೊಳಗೆ ವಾಸಿಸುವುದನ್ನು ಕಂಡು ಭಯ-ಭಕ್ತಿಯಿಂದ ನಾಗನನ್ನು ದೈವ ಶಕ್ತಿಯೆಂದೂ, ಅದೇ ರೀತಿ ಅತ್ಯಂತ ಪ್ರಾಚೀನ ಕಾಲದಲ್ಲಿ ತುಳುವರನ್ನು ರಕ್ಷಣೆ ಮಾಡಿ ಗತಿಸಿದ ವೀರನನ್ನು "ಬಿರ್ಮೆರ್ ದೈವ" (ತುಳು ಭಾಷೆಯಲ್ಲಿ ಬೀರ ಎಂದರೆ ವೀರ ಎಂದರ್ಥ) ವೆಂದು ನಂಬತೊಡಗಿದರು. ನಂತರ ಈ ಎರಡೂ ಶಕ್ತಿಗಳು ಪರಸ್ಪರ ಒಂದೇ ಎಂದು ತಿಳಿದು ನಾಗ ಮತ್ತು ಬಿರ್ಮೆರ್ ದೈವವನ್ನು ಸಮೀಕರಿಸಿ "ನಾಗ ಬಿರ್ಮೆರ್"

ದೈವವನ್ನು ತುಳುನಾಡಿನ ಆದಿ ದೈವವಾಗಿ ಪರ್ವ, ಹರಕೆ ಅಗೇಲು, (ಎಡೆ ಬಡಿಸುವುದು), ನಾಗತನು, ನಾಗ ತಂಬಿಲ ಮುಂತಾದ ಆರಾಧನಾ ವಿಧಿ ವಿಧಾನಗಳ ಮೂಲಕ ಆರಾಧಿಸತೊಡಗಿದರು.

ಆದರೆ ತುಳುನಾಡಿನಲ್ಲಿ ಮೊತ್ತ ಮೊದಲು ದೈವ ಶಕ್ತಿಗಳಿಗೆ ಅಗೇಲು (ಎಡೆ ಬಡಿಸುವುದು), ಹರಕೆ, ಪರ್ವ, ತಂಬಿಲ, ಮಂಜ ಮುಂತಾದ ವಿಧಿ ವಿಧಾನಗಳಿಂದಷ್ಟೇ ನಡೆಯುತ್ತಿದ್ದ ಆರಾಧನಾ ಪದ್ಧತಿಗಳು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ತುಳುನಾಡಿಗೆ ಪ್ರವೇಶವಾದ ಬಳಿಕ ಸಂಪೂರ್ಣ ಬದಲಾಗಿ ನಿರ್ದಿಷ್ಟ ರೂಪವನ್ನು ಪಡೆದುಕೊಂಡಿತು. ತುಳುನಾಡಿನಲ್ಲಿ ನೆಲೆಕಂಡುಕೊಂಡ ಬಳಿಕ ಈ ಸಮುದಾಯ ಮೊತ್ತ ಮೊದಲ ಬಾರಿಗೆ ವಿವಿಧ ಬಣ್ಣಗಳಿಂದ ಮುಖವರ್ಣಿಕೆ ಹಾಕಿ ಮುಖವಾಡ, ಎಲೆ, ಹೂ, ತೆಂಗು–ಕಂಗಿನ ಗರಿಗಳ ಅಲಂಕಾರಗಳಿಂದ ವೇಷ ಧರಿಸಿ, ತಾವೇ ಹೆಣೆದ "ಸಂಧಿ" ಯೆಂಬ ವಿಶಿಷ್ಟ ನುಡಿಕಟ್ಟುಗಳ ಅಭಯ ನೀಡುವ ನಾಗ ಕೋಲ, ಡಕ್ಕೆ ಬಲಿ, ಪಾಣರಾಟ, ಕೋಲ, ನೇಮ, ನಡಾವಳಿಗಳಂತಹ ವಿಶಿಷ್ಟ ರೀತಿಯ ದೈವಾರಾಧನೆಗೆ ಮುಂದಾಯಿತು. ಇದರಿಂದ ಆಕರ್ಷಿತರಾದ ತುಳುವರು ಮುಂದೆ ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರನ್ನು ದೈವರಾಧನೆಯ ಪ್ರಮುಖ ವ್ಯಕ್ತಿ ಮತ್ತು ಶಕ್ತಿಗಳನ್ನಾಗಿ ನೇಮಿಸಿಕೊಂಡರು.

**೧.೨. ಹೀರಿಕೆ :**

ಕುಣಿತದ ಮೂಲಕವೂ ದೈವೀಶಕ್ತಿಗಳನ್ನು ಒಲಿಸಿಕೊಳ್ಳಬಹುದೆಂಬುದನ್ನು ಮೊತ್ತ ಮೊದಲ ಬಾರಿಗೆ ನಿರೂಪಿಸಿದ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಪ್ರಾಚೀನ ಕಾಲದಲ್ಲಿ ತುಳುನಾಡಿನಲ್ಲಿ ಸಂವಿಧಾನ, ಸರ್ಕಾರ, ಕಾನೂನು ಮುಂತಾದ ಯಾವ ವ್ಯವಸ್ಥೆಗಳೂ ರೂಪಿತವಾಗದಿದ್ದ ಕಾಲದಲ್ಲೂ, ನೇಮ ಕೋಲ, ನಡಾವಳಿಗಳಂತಹಾ ದೈವಾರಾಧನಾ ವಿಧಿ ವಿಧಾನಗಳನ್ನು ಹುಟ್ಟು ಹಾಕಿ ಸಾಮಾಜಿಕ, ಧಾರ್ಮಿಕ, ಹೆಚ್ಚೇಕೆ ರಾಜ ಪ್ರಭುತ್ವದ ದರ್ಬಾರನ್ನೂ ಸಹಾ ಪ್ರಶ್ನಿಸುತ್ತಾ ಸತ್ಯ, ಧರ್ಮ, ನ್ಯಾಯ–ನೀತಿಗೆ ತಪ್ಪಿದವರನ್ನು ಎಚ್ಚರಿಸುತ್ತಾ ಸಮಾಜ ಮತ್ತು ಸಮುದಾಯಗಳ ಮಧ್ಯೆ ಪ್ರತಿನಿಧಿಯಾಗಿ ನಿಂತು ನ್ಯಾಯಾಧೀಶನಂತೆ ಧೈರ್ಯವಾಗಿ ತೀರ್ಮಾನಗಳನ್ನು ಕೈಗೊಂಡರು. ವೈದ್ಯನಂತೆ ಮದ್ದು, ಮೂಲಿಕೆಗಳ ಚಿಕಿತ್ಸಾ ಮಾಹಿತಿ ನೀಡುತ್ತಾರೆ. ಕವಿ–ಸಾಹಿತಿಯಂತೆ ವಿಶಿಷ್ಟ ಶೈಲಿಯ ಮಾತಿನ ನುಡಿಕಟ್ಟುಗಳ ಮೂಲಕ ಅಭಯ ಕೊಡುತ್ತಾರೆ. ಸಂಗೀತಗಾರರಂತೆ "ಸಂಧಿ" ಹೇಳುತ್ತಾ ಶಾಸ್ತ್ರ ಬದ್ಧವಾಗಿ ನರ್ತಿಸುವ ಮೂಲಕವೇ ಭಕ್ತರ ಭಕ್ತಿ, ಹರಕೆಗಳನ್ನು ದೈವಕ್ಕೆ ಸಮರ್ಪಿಸುತ್ತಾ ದೈವದ ಪರವಾಗಿ ಭಕ್ತರಿಗೆ ಅಭಯ, ಆಶೀರ್ವಾದ, ಸಾಂತ್ವನ, ಎಚ್ಚರಿಕೆಗಳನ್ನು ನೀಡಿ ತುಳುನಾಡಿನ ಹಲವಾರು ಸಾಮಾಜಿಕ ಜವಾಬ್ದಾರಿಗಳನ್ನು ಪ್ರತಿನಿಧಿಸಿ ನಿರ್ದೇಶಿಸಿ ಮುನ್ನಡೆಸುವ ಹೊಣೆಗಾರಿಕೆಯನ್ನು ಪಡಕೊಂಡರು.

ಹೀಗೆ ದೈವಾರಾಧನೆಯೇ ತುಳುನಾಡ ಸಂಸ್ಕೃತಿಯ ಮೂಲವೆಂದು ನಿರೂಪಿಸುವಂತೆ ವಿಶಿಷ್ಠ ಆಚರಣಾ ಪರಂಪರೆಯನ್ನು ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಕಲೆಯ ರೂಪದಲ್ಲಿ ಅಭಿವ್ಯಕ್ತಿಗೊಳಿಸುವ ಮೂಲಕ ತುಳುನಾಡ ಸಂಸ್ಕೃತಿಗೆ ವಿಶಿಷ್ಟ ಮೆರುಗನ್ನು ನೀಡಿದರು. ಆ ಮೂಲಕ ತುಳುನಾಡಿನ ದೈವಾರಾಧನೆ ಇಡಿ ಜಗತ್ತಿನಲ್ಲೇ ಅತ್ಯಂತ ವೈಶಿಷ್ಟ ಪೂರ್ಣ ಆರಾಧನಾ ಪದ್ಧತಿಯಾಗಿ ಗುರುತಿಸಿಕೊಳ್ಳುವಂತಾಗಲು ಕಾರಣರಾದರು. ಹೀಗೆ ತಮ್ಮ ಕಲೆಗೆ ಆಶ್ರಯ–ಆಸರೆಯನ್ನರಸುತ್ತಾ ತುಳುನಾಡಿಗೆ ಪ್ರವೇಶಿಸಿದ ಮೂಲ ದ್ರಾವಿಡರಾದ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಇಲ್ಲಿ ಅತ್ಯಂತ ಪ್ರಾಚೀನ ಕಾಲದಲ್ಲೇ ನೇಮ, ಕೋಲ, ನಡಾವಳಿ, ಬಂಡಿ, ವಲಸರಿ ಮುಂತಾದ ರೀತಿಯಲ್ಲಿ ದೈವಾರಾಧನೆಗೆ ತೊಡಗಿಕೊಂಡಿದ್ದರು. ಹೀಗಾಗಿ ಈ ಜಾತಿಯವರಿಗೆ ರಾಷ್ಟ್ರಕೂಟ, ಅಳುಪ, ಹೊಯ್ಸಳ, ಬಲ್ಲಾಳ,

ಅಜಿಲ, ಬಂಗ, ಹೆಗ್ಗಡೆ ಮುಂತಾದ ಕರ್ನಾಟಕವನ್ನಾಳಿದ ಪ್ರಸಿದ್ಧ ರಾಜವಂಶಗಳು ತಮ್ಮ ಕೋಟೆ–ಕೊತ್ತಲ, ಅರಮನೆ, ಗುತ್ತು, ಬಾರಿಕೆ, ಬಸದಿ, ದೇವಸ್ಥಾನಗಳಲ್ಲಿ ದೈವಗಳನ್ನ ಪ್ರತಿಷ್ಠಾಪಿಸಿ ಅಲ್ಲಿನ ದೈವ ಭೂತಗಣಗಳಿಗೆ ಇವರ ಮೂಲಕವೇ ಕೋಲ, ನೇಮ, ನಡಾವಳಿಗಳನ್ನು ನಡೆಸಿಕೊಂಡು ಬಂದರು.

ಇಂಥಾ ರಾಜವಂಶಗಳ ಆಳ್ವಿಕೆಯ ಕಾಲದಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ದೈವಾರಾಧನೆಯ ಮೂಲಕ ರಾಜರ ರಾಜ್ಯಭಾರ, ರಾಜಧರ್ಮ, ರಾಜ್ಯಾಳ್ವಿಕೆಗೆ ಸೂಕ್ತ ನಿರ್ದೇಶನಗಳನ್ನು ನೀಡುತ್ತಿತ್ತು. ಇದರಿಂದಾಗಿ ಈ ಎಲ್ಲ ರಾಜವಂಶಗಳಿಗೂ ಈ ಜಾತಿಯವರು ಅತ್ಯಂತ ಪ್ರಿಯರಾಗಿದ್ದರು. ಹೀಗಾಗಿ ಆ ಕಾಲದಲ್ಲಿ ತುಳುನಾಡಿನಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯಕ್ಕೆ ಅಜಲು ಭೂಮಿ (ಪಾಲಿನ ಹಕ್ಕು ಇರುವ ಭೂಮಿ), ಊರು, ಗ್ರಾಮಗಳಲ್ಲಿ ದೈವಗಳಿಗೆ ನೇಮ, ಕೋಲಗಳಲ್ಲಿ ತೊಡಗಿಸಿಕೊಳ್ಳುವ ಅಧಿಕಾರ ಹಾಗೂ ಇತರೇ ಕೆಲವೊಂದು ಸೌಲಭ್ಯ, ಸವಲತ್ತು, ಮಾನ್ಯತೆಗಳು ಸಿಕ್ಕಿರುತ್ತದೆ. ಹೀಗೆ ತುಳುನಾಡಿನ ಸಂಸ್ಕೃತಿ ಮೊತ್ತ ಮೊದಲು ತುಳುನಾಡಿನ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ರೂಪಿಸಿದ ಕೋಲ, ನೇಮ, ನಡಾವಳಿಗಳಂಥ ವಿಶಿಷ್ಟ ದೈವಾರಾಧನೆಯಲ್ಲೇ ಪ್ರತಿಬಿಂಬಿತವಾಗುವುದರಿಂದ ಹಾಗೂ ತಮ್ಮ ವಿಶೇಷ ಕಲಾನೈಪುಣ್ಯತೆಯ ದೈವಾರಾಧನೆಯ ಮೂಲಕವೇ ಇಡೀ ತುಳುನಾಡಿನ ಸಮಸ್ತ ಸಮಾಜ, ಸಮುದಾಯಗಳನ್ನು ಒಟ್ಟು ಗೂಡಿಸುವ ವಿಶೇಷ ಶಕ್ತಿ ಈ ಸಮುದಾಯಕ್ಕಿರುವುದರಿಂದಲೇ ಈ ಸಮುದಾಯದ ಬದುಕು, ವೃತ್ತಿ ಮತ್ತು ಸಾಂಸ್ಕೃತಿಕ ಸ್ವರೂಪಗಳನ್ನು ವಿಶ್ಲೇಷಿಸುವುದು ಅಗತ್ಯವಾಗಿ ನಡೆಯಬೇಕಿದೆ.

**೧.೩. ವಿಷಯ ವ್ಯಾಪ್ತಿ :**

ತುಳುನಾಡಿನ ಸಮಾಜ ಮತ್ತು ಸಾಮಾಜಿಕ ಹಾಗೂ ಸಾಂಸ್ಕೃತಿಕ ರಚನೆಗಳು ಬಹುರೂಪತೆ ಪಡೆದ ಸಂಕೀರ್ಣ ವ್ಯವಸ್ಥೆಗಳಂತಾಗಿ ವೈಶಿಷ್ಟ್ಯವನ್ನು ಪಡೆದುಕೊಂಡಿದೆ. ಇದರಿಂದಾಗಿ ತುಳುನಾಡಿನ ಸಂಸ್ಕೃತಿಯೆಂದರೆ ಕೇವಲ ತುಳುಭಾಷೆ ಮಾತಾಡುವವರದ್ದೇ ಸಂಸ್ಕೃತಿಯಾಗಿರದೆ ಹಲವಾರು ಘಟಕಾಂಶಗಳ ಪ್ರಸರಣ ಸ್ವೀಕರಣ ಸ್ವರೂಪದಲ್ಲಿ ಅನನ್ಯತೆಯನ್ನು ಪಡಕೊಂಡಿದೆ. ಹೀಗಾಗಿಯೇ ತುಳುನಾಡಿನ ಸಂಸ್ಕೃತಿಯನ್ನು ತಿಳಿಯಲು ತುಳುನಾಡಿನ ಕೋಲ, ನೇಮ, ನಡಾವಳಿ, ಡಕ್ಕೆ ಬಲಿ, ಜಾತ್ರೆ, ಉತ್ಸವ, ಅಗೇಲು, ಮಂಜ, ಪರ್ವ, ತನು–ತಂಬಿಲ ಮುಂತಾದ ಆರಾಧನಾ ವಿಧಿ ವಿಧಾನಗಳನ್ನು ಆಶ್ರಯಿಸಬೇಕಾಗುತ್ತದೆ. ಅದರಲ್ಲೂ ಮುಖ್ಯವಾಗಿ ತುಳುನಾಡ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ದೈವಾರಾಧನೆಯನ್ನು ತುಳುನಾಡಿನಲ್ಲಿ ಮೊತ್ತ ಮೊದಲ ಬಾರಿಗೆ ಕೈಗೊಂಡ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಬದುಕು ಮತ್ತು ಸಾಂಸ್ಕೃತಿಕ ಸ್ವರೂಪವನ್ನು ಅಭ್ಯಸಿಸಬೇಕಾದ ಅವಶ್ಯಕತೆ ಇದೆ.

ತುಳುನಾಡ ಸಮಾಜ ತನ್ನನ್ನು ಕಟ್ಟ ಕಡೆಯ ಅಸ್ಪೃಶ್ಯ ಜನಾಂಗವೆಂದು ಬಹುದೂರ ಇಟ್ಟಿದ್ದರೂ ಸಹಾ ಇದಾವುದನ್ನು ಲೆಕ್ಕಿಸದೆ ಈ ಸಮುದಾಯ ಸೇವೆಗಾಗಿಯೇ ತನ್ನ ಜೀವನವನ್ನು ಮುಡುಪಾಗಿಟ್ಟು ಸಾಮಾಜಿಕ, ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ತನ್ನನ್ನು ತೊಡಗಿಸಿಕೊಂಡಿದೆ. ಆ ಮೂಲಕ ತುಳುನಾಡಿನಲ್ಲಿರುವ ಜಾತಿ ಹಾಗೂ ವರ್ಗ ವೈಷಮ್ಯಗಳ ನಡುವೆಯೇ ಇಡೀ ತುಳುನಾಡನ್ನೇ ತಮ್ಮ ವಿಶೇಷ ಕಲಾ ನೈಪುಣ್ಯದ ದೈವಾರಾಧನೆಯಿಂದಲೇ ಒಟ್ಟು ಗೂಡಿಸುವ ವಿಶೇಷ ಶಕ್ತಿಯನ್ನು ಈ ಸಮುದಾಯ ಮೈಗೂಡಿಸಿಕೊಂಡಿದೆ. ಹೀಗಾಗಿ ಈ ಸಮುದಾಯವನ್ನು ಕೇವಲ ಧಾರ್ಮಿಕ ದೃಷ್ಟಿಕೋನದಲ್ಲಷ್ಟೇ ನೋಡದೆ ಇಲ್ಲಿನ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಅಧಿಕಾರ, ಅಂತಸ್ತು, ಜಾತಿ ವೈಷಮ್ಯ, ವೈದಿಕ ಸಂಸ್ಕೃತಿಯ ಜೊತೆಗಿನ ಮುಖಾಮುಖಿ ಇತ್ಯಾದಿಗಳ ಬಗ್ಗೆಯೂ ವಿಶ್ಲೇಷಿಸುವ ಅಗತ್ಯವಿದೆ. ಈ

ನಿಟ್ಟಿನಲ್ಲಿ ತುಳುನಾಡ ಸಂಸ್ಕೃತಿಯ ವಾಹಕರಾಗಿ, ವಕ್ತಾರರಾಗಿ, ತುಳುನಾಡಿನ ಸಂಸ್ಕೃತಿಯ ನಿರ್ಮಾತೃಗಳೆನಿಸಿಕೊಂಡಿರುವ ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಬದುಕು ಮತ್ತು ಸಾಂಸ್ಕೃತಿಕ ಸ್ವರೂಪಗಳ ವೈಶಿಷ್ಟ್ಯಗಳು ಮತ್ತು ಅವು ತುಳುನಾಡ ಸಾಂಸ್ಕೃತಿಕ ಅನನ್ಯತೆಗೆ ಹೇಗೆ ಕಾರಣವಾಗಿದೆಯೆಂಬ ಅಂಶಗಳನ್ನು ಪ್ರತಿಬಿಂಬಿಸುವುದು ಅಗತ್ಯವಾಗಿದೆ.

ಪ್ರಾಚೀನ ಕಾಲದಿಂದಲೂ ತುಳುನಾಡಿನ ಸಾಮಾಜಿಕ ಮತ್ತು ಸಾಂಸ್ಕೃತಿಕ ವ್ಯವಸ್ಥೆ ದೈವಾರಾಧನೆ ಕೇಂದ್ರೀಕೃತವಾಗಿದ್ದ ಕಾರಣ ದೈವಾರಾಧನೆಯ ಮುಂಚೂಣಿ ನೆಲೆಯಲ್ಲಿನ ಪ್ರಮುಖರೆಂದು ಗುರುತಿಸಲ್ಪಟ್ಟಿದ್ದ ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯಕ್ಕೆ ಪ್ರತೀ ಊರು, ಗ್ರಾಮ, ದೈವಸ್ಥಾನಗಳಲ್ಲಿ ಅತ್ಯಂತ ಉನ್ನತವಾದ ಮಾನ್ಯತೆಯಿತ್ತು. ಮೂಲ ದ್ರಾವಿಡ ಜನಾಂಗದವರಾದ ಇವರು ಶ್ರೀಲಂಕಾದ ಜಾಫ್ನಾದಲ್ಲೂ ನೆಲೆಯೂರಿ ಈಗಲೂ ಅಲ್ಲಿ "ಯಕ್ಕದೆಸ, ದೆಸಮಕ್ಕಳ್" ಎಂಬ ಹೆಸರಿನೊಂದಿಗೆ ಗುರುತಿಸಿಕೊಂಡು ತುಳುನಾಡಿನ ನೇಮ, ಕೋಲ ಮುಂತಾದ ದೈವಾರಾಧನೆಯಂತೆ ಯಕ್ಕಕೋಲ ಎಂಬ ಹೆಸರಿನಲ್ಲಿ ದೈವಾರಾಧನೆಯನ್ನು ನಡೆಸುತ್ತಿದ್ದಾರೆ. ಅದೇ ರೀತಿ ಆಂಧ್ರದಲ್ಲಿ "ಕಾವಲುದೈವ"ಗಳೆಂಬ ದೈವಾರಾಧನೆಯಲ್ಲೂ ತೊಡಗಿಸಿಕೊಂಡಿದ್ದಾರೆ. ಆದರೆ ತಮಿಳುನಾಡಿನಲ್ಲಿ ಪ್ರಾಚೀನ ಕಾಲದಲ್ಲಿ ಪಾಣನ್, ಪಾಳ್ಣನ್, ಪಾಣ್‌ಮಕ್ಕಳ್ ಎಂದು ಗುರುತಿಸಿಕೊಂಡ ಇವರು ಚೋಳ, ಚೇರ, ಪಾಂಡ್ಯ ಮುಂತಾದ ಅರಸರ ಆಸ್ಥಾನಗಳಲ್ಲಿ "ಆಸ್ಥಾನ ಕಲಾವಿದ"ರ ಸ್ಥಾನಮಾನ, ಗೌರವಗಳನ್ನು ಪಡೆದುಕೊಂಡಿದ್ದ ಬಗ್ಗೆ ಅಲ್ಲಿನ ಪ್ರಾಚೀನ ಗ್ರಂಥಗಳಿಂದ ತಿಳಿದು ಬರುತ್ತದೆ.

ಆದರೆ ಚೋಳರಸರ ಆಡಳಿತ ಯುಗ ಅಂತ್ಯವಾಗುತ್ತಲೇ ಸ್ಥಿತ್ಯಂತರಕ್ಕೊಳಗಾದ ಈ ಸಮುದಾಯದ ಒಂದು ತಂಡ ಕರ್ನಾಟಕಕ್ಕೆ ಬಂದು ಶೃಂಗೇರಿಯ ಮೂಲಕ ಉಡುಪಿ ಜಿಲ್ಲೆ ಪ್ರವೇಶಿಸಿ ಉಡುಪಿ, ಕುಂದಾಪುರ ಪರಿಸರದಲ್ಲಿ ನೆಲೆ ನಿಂತು "ಪಾಣಾರ" ಪಾಣ, ಪಾಂಡ್ರು ಮುಂತಾದ ಹೆಸರುಗಳಿಂದ ಗುರುತಿಸಿಕೊಂಡರೆ, ಕೇರಳದ ಮೂಲಕ ಪ್ರವೇಶಿಸಿದ ಇನ್ನೊಂದು ತಂಡ ಪಾಲ್ಘಾಟು, ಕಾಸರಗೋಡು ಮತ್ತು ದಕ್ಷಿಣಕನ್ನಡ ಜಿಲ್ಲೆಯಲ್ಲಿ ನಲ್ಕೆ, ಅಜಿಲ, ಕೋಪಾಲರೆಂದು ಕರೆಯಿಸಿಕೊಂಡು ನೆಲೆಯೂರಿದರು. ಹೀಗೆ ನೆಲೆ ನಿಂತು ದೈವಾರಾಧನೆಯಲ್ಲಿ ತೊಡಗಿಸಿಕೊಂಡ ಈ ಸಮುದಾಯಕ್ಕೆ ಮೂಲ್ಕಿಯಲ್ಲಿ ಸಾಮಂತರು, ಕಾರ್ಕಳದಲ್ಲಿ ಬೈರವ ಅರಸು, ಪಡುಬಿದ್ರಿ ಮತ್ತು ಕಾರ್ಕಳ, ಪುತ್ತಿಗೆಯಲ್ಲಿ ಬಲ್ಲಾಳರು, ಮೂಡಬಿದಿರೆಯಲ್ಲಿ ಚೌಟ ಅರಸರು, ಏರ್ಮಾಳು ಎಲ್ಲರೂ ಸೀಮೆಗಳಲ್ಲಿ ಹೆಗ್ಗಡೆ, ವೇಣೂರು, ಅಳದಂಗಡಿಗಳಲ್ಲಿ ಅಜಿಲ ಅರಸರು ಆಶ್ರಯ ನೀಡಿದರು. ಅಲ್ಲದೆ ಈ ಅರಸರು ತಮ್ಮ ಆಡಳಿತದ ಅನುಕೂಲಕ್ಕಾಗಿ ವಿಂಗಡಿಸಲ್ಪಟ್ಟಿದ್ದ ರಾಜ್ಯ, ದೇಶ, ಮಂಡಲ, ಮಾಗಣೆ ಸೀಮೆ, ಗುತ್ತು, ಬಾರಿಕೆ, ವಾವೊ, ಪರೋಡಿ, ಬರ್ಪಣೆ ಬೂಡು, ಗ್ರಾಮ ಎಂದು ಮುಂತಾದ ವಿಭಾಗಗಳಲ್ಲಿ ಈ ಸಮುದಾಯ ದೈವಾರಾಧನೆ ಹಾಗೂ ಸಾಂಸ್ಕೃತಿಕ ಆಚರಣೆಗಳಲ್ಲಿ ಕಾರ್ಯನಿರ್ವಾಹಕರಂತೆ ತಮ್ಮ ಕರ್ತವ್ಯದಲ್ಲಿ ತೊಡಗಿಕೊಂಡರು.

ಹೀಗಾಗಿ ತುಳುನಾಡೆಂದು ಕರೆಯಲಾಗುವ ದಕ್ಷಿಣ ಕನ್ನಡ ಜಿಲ್ಲೆಯ ಸಂಸ್ಕೃತಿಯೆಂದು ಬಿಂಬಿತವಾದ ದೈವಾರಾಧನೆ ಮತ್ತು ಸಾಂಸ್ಕೃತಿಕ ಹಾಗೂ ಧಾರ್ಮಿಕ ಜಗತ್ತಿನಲ್ಲಿ ಮಹತ್ತರ ಜವಾಬ್ದಾರಿಗಳನ್ನು ಹೊತ್ತು ಅದನ್ನು ಅಷ್ಟೇ ಪ್ರಾಮಾಣಿಕವಾಗಿ ನಿರ್ವಹಿಸುವ ತುಳುನಾಡಿನ ನಲ್ಕೆ, ಅಜಿಲ ಅಥವಾ ಪಾಣಾರರರನ್ನು ಸಮುದಾಯದ ನೆಲೆಯಲ್ಲಿ ಅವರ ಬದುಕು ಮತ್ತು ಸಾಂಸ್ಕೃತಿಕ ಸ್ವರೂಪದ ಕುರಿತಾಗಿ ಅಧ್ಯಯನ ನಡೆಸುವ ಪ್ರಯತ್ನ ಮಾಡಲಾಗಿದೆ. ಇದಕ್ಕಾಗಿ ದ.ಕ.ಜಿಲ್ಲೆ, ಉಡುಪಿ ಮತ್ತು ಕಾಸರಗೋಡು. ಕೇರಳದ ಸೀಮಿತ ವ್ಯಾಪ್ತಿಯಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಮಾಹಿತಿಯನ್ನು ಸಂಗ್ರಹಿಸಿ ಅಧ್ಯಯನಕ್ಕೆ ಸಾಂದರ್ಭಿಕವಾಗಿ ಬಳಸಿಕೊಳ್ಳಲಾಗಿದೆ.

**೧.೪. ಅಧ್ಯಯನದ ಉದ್ದೇಶ ಮತ್ತು ಮಹತ್ವ :**

ರಾಜಕೀಯವಾಗಿ ತುಳುನಾಡೆಂಬ ಪ್ರತ್ಯೇಕ ರಾಜ್ಯ ಅಸ್ತಿತ್ವದಲ್ಲಿ ಇಲ್ಲದಿದ್ದರೂ ಪ್ರಾಚೀನ ಕಾಲದಿಂದ ಈವರೆಗೂ ತುಳುವರು ಭಾವನಾತ್ಮಕವಾಗಿ ಒಮ್ಮನಸ್ಸಿನಿಂದ ಕಾಸರಗೋಡು, ದ.ಕ. ಮತ್ತು ಉಡುಪಿ ಈ ಮೂರು ಜಿಲ್ಲೆಗಳನ್ನು ತುಳುನಾಡೆಂದು ಹೆಮ್ಮೆಯಿಂದ ಪರಿಭಾವಿಸಿಕೊಂಡು ಬಂದಿದ್ದಾರೆ. ತುಳುನಾಡಿನ ತುಳುವರ ಮಾತೃಭಾಷೆ ತುಳು. ಹಾಗಾಗಿ ಕಾಸರಗೋಡಿನಿಂದ ಹಿಡಿದು ಬ್ರಹ್ಮಾವರದವರೆಗೆ ತುಳುವರು ತುಳುವನ್ನೇ ಮಾತೃಭಾಷೆಯನ್ನಾಗಿ ಮಾತನಾಡುತ್ತಾರೆ. ಆದರೆ ಕುಂದಾಪುರ ವ್ಯಾಪ್ತಿಯ ತುಳುವರು ಕನ್ನಡವನ್ನು ಮಾತೃಭಾಷೆಯನ್ನಾಗಿ, ತುಳುವನ್ನು ಉಪಭಾಷೆಯಾಗಿ ಮಾತನಾಡುತ್ತಾರೆ. ತುಳುನಾಡಿನ ಸಾಂಸ್ಕೃತಿಕ, ಧಾರ್ಮಿಕ, ಸಾಂಸ್ಕೃತಿಕ ವಕ್ತಾರರಾಗಿರುವ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಕಾಸರಗೋಡಿನಿಂದ ಬ್ರಹ್ಮಾವರದವರೆಗೆ ತುಳುವನ್ನೂ, ಬ್ರಹ್ಮಾವರದಿಂದ ಕುಂದಾಪುರದವರೆಗೆ ಕನ್ನಡವನ್ನೂ ಮಾತೃಭಾಷೆಯನ್ನಾಗಿರಿಸಿಕೊಂಡಿದ್ದಾರೆ. ಪಾಣಾರ, ಪಾಂಡ್ರು, ಪಾಣ ಎಂದು ಮುಂತಾಗಿ ಗುರುತಿಸಲ್ಪಡುವ ಕುಂದಾಪುರ ಭಾಗದ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಿಗೆ ತುಳು ಭಾಷೆಯ ಅರಿವೂ ಇದೆ. ಹೀಗಾಗಿ ಅವರು ತಾವು ಕೈಗೊಳ್ಳುವ ದೈವಾರಾಧನೆಯ ಸಂದರ್ಭ ಅನಿವಾರ್ಯವಾಗಿ ತುಳು ಮಾತನಾಡಬೇಕಾದರೆ ತುಳು ಭಾಷೆಯನ್ನೇ ಮಾತನಾಡುತ್ತಾರೆ. ತುಳುನಾಡಿನ ಸಂಸ್ಕೃತಿ, ದೈವಾರಾಧನೆ ಮತ್ತು ಆಚರಣಾತ್ಮಕ ವಿಧಿವಿಧಾನಗಳ ಮೂಲಕ ಕಲಾತ್ಮಕ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತದೆ. ಹೀಗಾಗಿ ದೈವಾರಾಧನೆಯನ್ನು ಜನಪದ ಕಲೆಯೆಂದು ಗುರುತಿಸಲಾಗಿದೆಯಾದರೂ ತುಳುನಾಡಿನಲ್ಲಿ ದೈವಾರಾಧನೆ ಆರಾಧನಾ ಕಲೆಯೆಂಬ ನಂಬಿಕೆಗಷ್ಟೇ ಸೀಮಿತಗೊಳ್ಳದೆ ಅದನ್ನೂ ಮೀರಿ ಭಾವನಾತ್ಮಕವಾಗಿ ಸಮಸ್ತ ತುಳುವರ ಭಕ್ತಿ, ನಂಬಿಕೆ, ಸಾಮಾಜಿಕ ಸಂರಚನೆ ಹಾಗೂ ಬದುಕಿನ ಪ್ರತೀಕವಾಗಿ ಅನನ್ಯತೆಯನ್ನು ಪ್ರತಿಬಿಂಬಿಸುತ್ತದೆ.

ಕೇರಳ, ಕಾಸರಗೋಡು, ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಗಳಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಂತೆ ದೈವಾರಾಧನೆಯಲ್ಲಿ ತೊಡಗಿಸಿಕೊಂಡಿರುವ ಪರವ, ಪಂಬದ, ಬೆಳ್ಚಪ್ಪಾಡ, ಮಾಲವರೆಂಬ ಇತರ ಜನಾಂಗಗಳಿವೆ. ತುಳುನಾಡ ಸಂಸ್ಕೃತಿಗೆ ಇವರೆಲ್ಲರ ಕೊಡುಗೆ ಮಹತ್ತರವಾಗಿದೆ. ಆದರೆ ಇವರ ಜೊತೆ ದೈವಾರಾಧನೆ, ಆಚರಣೆ, ಆರಾಧನೆ ಹಾಗೂ ವೈವಾಹಿಕವಾಗಿ ಯಾವುದೇ ಸಂಬಂಧವಿಟ್ಟುಕೊಳ್ಳದ ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಅತ್ಯಂತ ಪ್ರಾಚೀನ ಕಾಲದಲ್ಲೇ ತುಳುನಾಡಿಗೆ ಬಂದು ಮೊತ್ತ ಮೊದಲು ತಮ್ಮ ವಿಶಿಷ್ಟ ಕಲೆ, ಜಾಣ್ಮೆ, ಸಾಮರ್ಥ್ಯಗಳ ಮೂಲಕ ದೈವಾರಾಧನೆಗೆ ವಿಶಿಷ್ಟ ಛಾಪು ಮೂಡಿಸಿದವರಾಗಿದ್ದಾರೆ. ಹೀಗೆ ಅತ್ಯಂತ ಪ್ರಾಚೀನ ಕಾಲದಿಂದಲೇ ತುಳುನಾಡಿನ ಸಾಮಾಜಿಕ, ಅಸಮಾನತೆ, ಜಾತಿ, ವರ್ಗ, ಸಮುದಾಯಗಳ ತಾರತಮ್ಯ ಅಸಮಾನತೆಗಳನ್ನು ತಾವು ಕೈಗೊಳ್ಳುವ ನೇಮ, ಕೋಲ, ನಡಾವಳಿಗಳಂತಹಾ ದೈವಾರಾಧನೆಯ ಮೂಲಕ ನಿಯಂತ್ರಿಸಿ ಇಡೀ ತುಳುನಾಡನ್ನೇ ಭಾವನಾತ್ಮವಾಗಿ ಒಟ್ಟು ಗೂಡಿಸುವ ಚಾಣಾಕ್ಷತೆಯನ್ನು ಈ ಸಮುದಾಯದವರು ಮೈಗೂಡಿಸಿಕೊಂಡವರಾಗಿದ್ದಾರೆ.

ಹೀಗೆ ಪ್ರಾಚೀನ ಕಾಲದಲ್ಲಿ ಕೆಲವೊಂದು ಆರಾಧನೆ, ಆಚರಣೆಗಳಷ್ಟೇ ಸೀಮಿತವಾಗಿದ್ದ ಈ ತುಳುನಾಡಿನಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ತಮ್ಮ ಕಲೆ ಹಾಗೂ ದೈವಾರಾಧನೆಯ ವಿಶಿಷ್ಟ ವಿಧಿ ವಿಧಾನಗಳನ್ನು ಅಳವಡಿಸುವ ಮೂಲಕ ದೈವಾರಾಧನೆಗೆ ನಿರ್ದಿಷ್ಟ ರೂಪವನ್ನು ಕೊಟ್ಟರು. ಹೀಗಾಗಿ ತುಳುನಾಡ ಸಂಸ್ಕೃತಿ ದೈವಾರಾಧನೆಯ ಮೂಲಕ ಪ್ರತಿಬಿಂಬಿತವಾಗುವಂತಹ ಹಾಗೂ ವೇಷಭೂಷಣ ಧರಿಸಿ ದೈವವಾಗಿ ಅಧಿಕಾರ, ಅಂತಸ್ತು, ವರ್ಗ, ಪಂಗಡಗಳನ್ನು

ಲೆಕ್ಕಿಸದೇ ಒಂದಷ್ಟು ಸಮಯ ಎಲ್ಲರನ್ನೂ ತನ್ನ ಮುಂದೆ ಕೈ ಮುಗಿದು ತಲೆಬಾಗಿಸಿ ನಿಲ್ಲಿಸುವ ಸಾಮರ್ಥ್ಯವಿರುವ ಈ ಸಮುದಾಯ ಬಣ್ಣ ಕಳಚಿ ವಾಸ್ತವ ಜಗತ್ತಿನ ವ್ಯಕ್ತಿಯಾದ ಬಳಿಕ ಮತ್ತೆ ಅಸ್ಪೃಶ್ಯವಾಗಿಯೇ ಗುರುತಿಸಲ್ಪಡುವುದು ವಿಪರ್ಯಾಸವೆನಿಸುತ್ತದೆ.

ಇಷ್ಟಾದರೂ ಇದಾವುದನ್ನು ಲೆಕ್ಕಿಸದೆ ಸೇವೆಗಾಗಿಯೇ ತನ್ನ ಜೀವನವನ್ನು ಮುಡಿಪಾಗಿಟ್ಟು ತಮ್ಮ ಜವಬ್ದಾರಿಯನ್ನು ನಿಷ್ಠೆಯಿಂದ ನಿರ್ವಹಿಸುವ ಈ ಸಮುದಾಯದ ಬದುಕು ಹಾಗೂ ಸಾಂಸ್ಕೃತಿಕ ಸ್ವರೂಪವನ್ನು ದಾಖಲಿಸುವುದು ಅತ್ಯಂತ ಅಗತ್ಯವಾಗಿದೆ. ಹೀಗಾಗಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯವನ್ನು ಕೇವಲ ಕಲಾವಿದ ಹಾಗೂ ಧಾರ್ಮಿಕ ರಂಗಕರ್ಮಿ ಎಂಬಿತ್ಯಾದಿ ದೃಷ್ಟಿಕೋನದಲ್ಲಷ್ಟೇ ನೋಡದೆ ಇಲ್ಲಿನ ಸಾಂಸ್ಕೃತಿಕ ಸ್ವರೂಪ, ಅಧಿಕಾರ, ಜಾತಿ, ಅಂತಸ್ತು, ಜಾತಿ ವೈಷಮ್ಯ, ವೈದಿಕ ಹಾಗೂ ಇತರ ಸಂಸ್ಕೃತಿಗಳ ಮುಖಾಮುಖಿ ಇತ್ಯಾದಿಗಳ ಬಗ್ಗೆಯೂ ವಿಶ್ಲೇಷಿಸುವುದು ಅಗತ್ಯವಾಗಿದೆ. ಈ ನಿಟ್ಟಿನಲ್ಲಿ ತುಳುನಾಡ ಸಂಸ್ಕೃತಿಯ ಸಂರಚನೆಯಲ್ಲಿ ಪ್ರಮುಖ ಜವಾಬ್ದಾರಿಯನ್ನು ಪಡೆದು ದೈವಾರಾಧನಾ ಪರಂಪರೆಗೆ ಭದ್ರ ಬುನಾದಿಯನ್ನು ಹಾಕಿ ಕೊಟ್ಟ ಈ ಸಮುದಾಯದವರ ಬದುಕು, ಸಾಮಾಜಿಕ, ಕೌಟುಂಬಿಕ, ಧಾರ್ಮಿಕ, ಆಚಾರ, ವಿಚಾರ, ರೂಢಿ, ಸಂಪ್ರದಾಯ ಆರಾಧನಾ ಪದ್ಧತಿಗಳನ್ನಲ್ಲದೆ ಅವರ ಬದುಕು ಮತ್ತು ಅವರ ಸಾಂಸ್ಕೃತಿಕ ಸ್ವರೂಪಗಳು ತುಳುನಾಡ ಸಂಸ್ಕೃತಿಯಲ್ಲಿ ಯಾವ ರೀತಿಯಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತವೆ ಎಂಬಿತ್ಯಾದಿ ಅಂಶಗಳನ್ನು ಇಲ್ಲಿ ವಿಶ್ಲೇಷಿಸುವ ಪ್ರಯತ್ನ ನಡೆಸಲಾಗಿದ್ದು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಬದುಕು ಮತ್ತು ಜೀವನ ವಿಧಾನವು ಅಧ್ಯಯನ ಯೋಗ್ಯವಾಗಿದೆ.

ಕಾಲ್ಪನಿಕವಾದ ದೈವ ಭೂತಗಳ ಕುರಿತಾಗಿ ಭಾವನೆ ಮೂಡಿಸಲು ವಿವಿಧ ವೇಷಭೂಷಣ, ಮುಖವರ್ಣಿಕೆ, ಅಲಂಕಾರಗಳ ಮೂಲಕ ಖಡ್ಗ, ಚಾಮರ, ಆಯುಧ, ದೀವಟಿಕೆಗಳನ್ನು ಹಿಡಿದುಕೊಂಡು ನಾಟ್ಯ, ನರ್ತನ, ಆವೇಶ, ಆರ್ಭಟದೊಂದಿಗೆ ನಂಬಿದ ಭಕ್ತರಿಗೆ ದೈವಶಕ್ತಿಗಳ ಪರವಾಗಿ ಅಭಯ, ಸಾಂತ್ವನ, ಎಚ್ಚರಿಕೆ, ಆದೇಶಗಳನ್ನು ನೀಡಿ ಸಾಂಸ್ಕೃತಿಕ ಸಹಬಾಳ್ವೆ, ಕೌಟುಂಬಿಕ, ಸಾಮಾಜಿಕ ಸಾಮರಸ್ಯ, ಸಮನ್ವಯತೆಗೆ ಸ್ಫೂರ್ತಿ ನೀಡುತ್ತಾ ಸಂಸ್ಕೃತಿಯ ರಕ್ಷಕರಾಗಿ, ರಾಯಭಾರಿಗಳಾಗಿ ತುಳುನಾಡಿನಲ್ಲಿ ಜವಾಬ್ದಾರಿಯಿಂದ ತಮ್ಮನ್ನು ದೈವಾರಾಧನೆಯ ವಿಧಿವಿಧಾನಗಳಲ್ಲಿ ತೊಡಗಿಸಿಕೊಂಡ ಪರಿಶಿಷ್ಟ ಜಾತಿಯೆಂದು ಗುತುತಿಸಿಕೊಂಡವರೇ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಾಗಿದ್ದಾರೆ. ಅತ್ಯಂತ ಪ್ರಾಚೀನವಾದ ಬೌದ್ಧ ಹಾಗೂ ಜೈನ ಧರ್ಮ ತುಳುನಾಡಿಗೆ ಪ್ರವೇಶವಾಗುವ ಮೊದಲೇ ತುಳುನಾಡಿನಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ದೈವಾರಾಧನೆಯಲ್ಲಿ ತೊಡಗಿಕೊಂಡಿರುವ ನಿದರ್ಶನಗಳು ಪ್ರಾಚೀನವಾದ ಪ್ರಾಕೃತ ಭಾಷೆ ಹಾಗೂ ಇನ್ನಿತರ ಭಾಷೆಯ ಗ್ರಂಥಗಳಿಂದ ತಿಳಿದು ಬರುತ್ತದೆ. ಅದೇ ರೀತಿ ಋಗ್ವೇದ ಕಾಲದಲ್ಲೇ ಈ ಸಮುದಾಯ "ಯಾಳ್" ಎಂಬ ಸಂಗೀತೋಪಕರಣವನ್ನು ತಯಾರಿಸಿ ನುಡಿಸುತ್ತಿದ್ದ ಬಗ್ಗೆ ಉಲ್ಲೇಖಗಳು ಸಿಗುತ್ತದೆ. ಹೀಗೆ ಅತ್ಯಂತ ಪ್ರಾಚೀನ ಕಾಲದಿಂದಲೇ ಈ ಸಮುದಾಯ ದೈವಾರಾಧನೆಯಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದರೆಂದು ತಿಳಿದು ಬರುತ್ತದೆ.

ಪ್ರಾಚೀನ ಕಾಲದಲ್ಲಿ ಬರಿಮೈಯಲ್ಲೇ ಇರುತ್ತಿದ್ದ ಇವರು ಕ್ರಮೇಣ ಶ್ವೇತ ವಸ್ತ್ರಾಧಾರಿಗಳಾಗಿದ್ದರು. ದೈವಾರಾಧನೆಯನ್ನು ಪವಿತ್ರ ವೃತ್ತಿಯೆಂದು ತಿಳಿದಿದ್ದ ಈ ಸಮುದಾಯ ಕಾಲಿಗೆ ಚಪ್ಪಲಿ ಹಾಕಬಾರದು, ಹಸುವಿನ ಹಾಲು ಕುಡಿಯಬಾರದು, ಹಂದಿ, ದನದ ಮಾಂಸಗಳನ್ನು ತಿನ್ನಬಾರದು ಎಂದು ಮುಂತಾಗಿ ಹಲವು ಸ್ವಯಂ ವಿಧಿ ನಿಷೇಧಗಳನ್ನು ಹೇರಿಕೊಂಡಿದ್ದರು. ಹೆಂಗಸರೂ ಸಹಾ ವಸ್ತ್ರ ಸಂಹಿತೆಯನ್ನು ಪಾಲಿಸುತ್ತಿದ್ದರು. ಬ್ರಾಹ್ಮಣರು ದೇವರ ಪೂಜೆ ಮಾಡುವಂತೆ

ತಾವೂ ದೈವಗಳ ಪೂಜೆ ಮಾಡುವವರೆಂದು ತಿಳಿದಿದ್ದರು. ಅಲ್ಲದೆ ಬ್ರಾಹ್ಮಣರೂ ಈ ಹೇಳುವ ಕವಡೆ ಜ್ಯೋತಿಷ್ಯದಂತೆ ತಾವು ಅಕ್ಕಿಯ ಮೂಲಕ ಜ್ಯೋತಿಷ್ಯವನ್ನು ಹೇಳುತ್ತಿದ್ದರು. ಅದೇ ರೀತಿ ಔಷಧಿ, ಚಿಕಿತ್ಸೆಗಳು ಇಲ್ಲದ ಕಾಲದಲ್ಲಿ ಈ ಸಮುದಾಯದವರು ನಾಟಿ ವೈದ್ಯರಾಗಿ, ಪಂಡಿತರಾಗಿ, ಔಷಧಿ ಚಿಕಿತ್ಸೆಗಳ ಮೂಲಕ ಹೆಸರುವಾಸಿಯಾಗಿದ್ದರು.

ಕ್ರಮೇಣ ಪ್ರಾಚೀನ ಕರ್ನಾಟಕ ರಾಜ್ಯದಲ್ಲಿ ರಾಜಕೀಯ ಸ್ಥಿತ್ಯಂತರಗಳು ತಲೆದೋರಿ ಅರಾಜಕತೆ ಸೃಷ್ಟಿಯಾದಾಗ ತುಳುನಾಡಿನಲ್ಲೂ ಹಿಂದೂ ಮತ್ತು ಜೈನ ಧರ್ಮಗಳೊಳಗೆ ಪ್ರತಿಸ್ಪರ್ಧೆ ಏರ್ಪಟ್ಟಿತು. ಮಾತ್ರವಲ್ಲ ಜಾತಿ ವೈಷಮ್ಯಗಳು ಹೆಚ್ಚಾಗತೊಡಗಿತು. ಹೀಗಾಗಿ ತುಳುನಾಡಿನಲ್ಲಿ ಜೈನ ಧರ್ಮದ ಪ್ರಾಬಲ್ಯ ಕ್ಷೀಣಿಸುವ ಎಲ್ಲ ಲಕ್ಷಣಗಳೂ ಕಂಡು ಬಂದವು. ಆಗ ಜೈನರ ಆಶ್ರಯದಲ್ಲಿದ್ದ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯವು ಸಹಾ ಅತಂತ್ರ ಸ್ಥಿತಿಗೆ ತಲುಪತೊಡಗಿತು. ಶಂಕರಾಚಾರ್ಯರು ಕೊನೆಗೆ ಈ ಸಮುದಾಯದ ಕೌಶಲ್ಯ, ಪ್ರಜ್ಞಾವಂತಿಕೆಯನ್ನು ತಿಳಿದು ಶೃಂಗೇರಿ ಮಠದ ಪರಿಸರದಲ್ಲಿ ಈ ಸಮುದಾಯದವರಿಗೆ ಆಶ್ರಯವನ್ನಿತ್ತರೆಂದು ಈ ಸಮುದಾಯದ ಹಿರಿಯರು ಹೇಳುತ್ತಾರೆ. ಆದರೆ ಕ್ರಮೇಣ ಅಲ್ಲಿಯೂ ಜಾತಿ ವೈಷಮ್ಯಗಳ ಕಿರುಕುಳ ಹೆಚ್ಚಾದಾಗ ಈ ಸಮುದಾಯ ಮತ್ತೆ ದ.ಕ. ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಬಂಗಾಡಿಯ ಬಂಗರಸರ ಬರಲ ಭೂಮಿ (ಹಡೀಲು ಭೂಮಿ) ಯಲ್ಲಿ ಆಶ್ರಯ ಪಡೆದರೆಂದು ತಿಳಿದು ಬರುತ್ತದೆ.

ಈ ಸಮುದಾಯ ತಾವು ಕೈಗೊಳ್ಳುವ ದೈವಾರಾಧನೆಯ ಸಂದರ್ಭ ಹೇಳುವ "ಸಂಧಿ" (ಮೌಖಿಕ ಕಥನ ಕಾವ್ಯ) ಯಲ್ಲಿ ಈಗಲೂ "ಒಚ್ಚೊತ್ತ ಗುರು ಬರಲಸಂತಾನೊ" ಅಂದರೆ ತಮಗೆ ಶೃಂಗೇರಿಶಾರದೆ ಕುಲಗುರುವಾಗಿದ್ದು ಕೊನೆಗೆ ತಾವು ಶಾಶ್ವತವಾಗಿ ನೆಲೆ ಕಂಡ ಬಂಗಾಡಿಯಲ್ಲಿ ಶೃಂಗೇರಿ ಶಾರದೆ ಗುರು ಉಳ್ಳಾಲ್ತಿ ದೈವವಾಗಿ ಅವತರಿಸಿ ಅವಳ ಕೃಪೆಯಂತೆ ಬಂಗಾಡಿಯ ಬರಲ ಭೂಮಿಯಲ್ಲಿ ಬೆಳೆದು ತಮ್ಮ ವಂಶ ವೃದ್ಧಿಯಾಯಿತೆಂದು ಪೂರ್ವದ ತಮ್ಮ ಸ್ಥಿತಿಯನ್ನು ಸ್ಮರಿಸಿಕೊಳ್ಳುತ್ತಾರೆ. ಇದಕ್ಕೆ ಪೂರಕವೆಂಬಂತೆ ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಅಕಸ್ಮಾತ್ ಬೇರೆಯವರಿಗೆ ಚಪ್ಪಲಿಯಲ್ಲಿ ಹೊಡೆದರೆ, ಅಥವಾ ಸ್ವತಃ ತಾವೇ ಚಪ್ಪಲಿಯಿಂದ ಹೊಡೆತಕ್ಕೊಳಗಾದರೆ, ದನದ ಗೊಬ್ಬರ ಹೊತ್ತರೆ, ದನ ಕರುಗಳಿಗೆ ಹಿಂಸೆ ಮಾಡಿದರೆ ಈಗಲೂ ಶೃಂಗೇರಿ ಮಠಕ್ಕೆ ತೆರಳಿ ಶೃಂಗೇರಿ ಶಾರದೆಗೆ ತಪ್ಪು ಕಾಣಿಕೆಗಳನ್ನು ಹಾಕಲೇ ಬೇಕೆಂಬ ನಿಯಮವಿದೆ. ಹೀಗೆ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ತುಳುನಾಡಿನಲ್ಲಿ ಮೊತ್ತ ಮೊದಲ ಬಾರಿಗೆ ದೈವಾರಾಧನೆಯಲ್ಲಿ ತೊಡಗಿಸಿಕೊಂಡು ತುಳುನಾಡ ಸಂಸ್ಕೃತಿಗೆ ವಿಶಿಷ್ಟ ಮೆರುಗನ್ನು ನೀಡುವ ಮೂಲಕ ತುಳುನಾಡಿನ ದೈವಾರಾಧನೆಗೆ ಇಡೀ ಜಗತ್ತಿನಲ್ಲೇ ವೈಶಿಷ್ಟ್ಯ ಬರಲು ಕಾರಣರಾಗಿದ್ದಾರೆ. ಹಾಗೆಯೇ ತುಳುನಾಡ ಸಂಸ್ಕೃತಿಯ ಸಂರಚನೆ ಮತ್ತು ಅದರ ರಕ್ಷಣೆಯಲ್ಲಿ ಪ್ರಧಾನ ಪಾತ್ರ ವಹಿಸುವ ಇವರು ತುಳುನಾಡಿನಲ್ಲಿ ತನ್ನ ಸಾಂಸ್ಕೃತಿಕ ಅನನ್ಯತೆಯಿಂದ ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದ್ದಾರೆ.

**೧.೫. ನಡೆದಿರುವ ಅಧ್ಯಯನಗಳು :**

ತುಳುನಾಡಿನ ದೈವಾರಾಧನೆ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಜಗತ್ತಿನಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಪ್ರಮುಖ ಜವಾಬ್ದಾರಿಯನ್ನು ಹೊತ್ತು ಕೊಳ್ಳುವ ಮೂಲಕ ಧಾರ್ಮಿಕ, ಸಾಮಾಜಿಕ, ದೈವಾರಾಧನೆ ಹಾಗೂ ಸಾಂಸ್ಕೃತಿಕ ಆಚರಣೆಗಳ ದಿಕ್ಸೂಚಿಯೆನಿಸಿಕೊಂಡಿದ್ದಾರೆ. ಹಾಗೆಯೇ ಆಯಾ ಸಂದರ್ಭ ಕಾಲ, ಹವಾಮಾನ, ಕೃಷಿ, ಬೇಸಾಯ, ಆಚರಣೆ, ಆರಾಧನೆಗಳಲ್ಲಿ ತಾವು ಮೊದಲು ತೊಡಗಿಕೊಂಡು ಇತರ ಸಮುದಾಯಗಳ ಜವಾಬ್ದಾರಿಯನ್ನು ನಿರ್ದೇಶಿಸುವ ಮೂಲಕ ಇವರು ತುಳುನಾಡ ಸಂಸ್ಕೃತಿಯ ನಿರ್ದೇಶಕರಂತೆಯೂ ಕಾರ್ಯನಿರ್ವಹಿಸುತ್ತಿದ್ದಾರೆ. ತುಳುನಾಡಿನಲ್ಲಿ ಮೊದಲು ದೈವಾರಾಧನಾ ಪರಂಪರೆಗೆ ಭದ್ರ ಬುನಾದಿ ಹಾಕಿ ನಿರ್ದಿಷ್ಟ ಆಚರಣಾವಿಧಿ ವಿಧಾನಗಳನ್ನು ರೂಪಿಸಿ ಆ ಮೂಲಕ ತಮ್ಮ ಸಂಸ್ಕೃತಿಯನ್ನು ತುಳು ಸಂಸ್ಕೃತಿಗೆ ಧಾರೆ ಎರೆದ ಸಮುದಾಯವೆಂದರೆ ಅದು ನಲ್ಕೆ, ಅಜಿಲ ಅಥವಾ

ಪಾಣಾರ ಸಮುದಾಯ. ಆದರೆ ಅವರು ತುಳುನಾಡಿನ ಮೂಲ ನಿವಾಸಿಗಳಾಗಿರದೆ ತಮ್ಮ ಕಲಾ ಪೋಷಣೆ, ಹಾಗೂ ಬದುಕಿನ ಆಸರೆಗಾಗಿ ಹೊರಗಿನಿಂದ ಬಂದು ತುಳುನಾಡಿನಲ್ಲಿ ನೆಲೆ ನಿಂತರು. ಆದರೂ ಇವರಲ್ಲಿನ ವಿಶೇಷ ಕಲಾ ನೈಪುಣ್ಯತೆ, ಆರಾಧನೆ, ಆಚರಣೆ, ಬುದ್ಧಿ ಚಾತುರ್ಯತೆಗಳಿಂದಲೇ ಇವರು ಇಲ್ಲಿ ವಿಶಿಷ್ಟವಾಗಿ ಗುರುತಿಸಿಕೊಳ್ಳುವಂತಾಗಿದೆ. ತುಳುನಾಡಿನ ದೈವಾರಾಧನೆಯ ಕುರಿತು ಬಹಳಷ್ಟು ಅಧ್ಯಯನಗಳು ಬಂದಿವೆ. ಇವುಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ ೧೯೨೨ ಗಣಪತಿ ರಾವ್ ಐಗಳ್ ಎಂ., ಕರ್ನಾಟಕ ಜಾನಪದ ಕಲೆಗಳು ೧೯೭೭ ಗೋ.ರು.ಚನ್ನಬಸಪ್ಪ(ಸಂ.), ಕಾಡ್ಯನಾಟ್ಯ ಪಠ್ಯ ಮತ್ತು ಪ್ರದರ್ಶನ – ೧೯೯೨ ಪ್ರೊ. ನಾವಡ, ಎ. ವಿ. ಗಾಯತ್ರಿ ನಾವಡ, ತುಳುನಾಡಿನ ಪಾಣಾರರು ೨೦೧೩ ಡಾ. ಪಾಲ್ತಾಡಿ ರಾಮಕೃಷ್ಣ ಆಚಾರ್, ತುಳು ಜಾನಪದ ಆಚರಣೆಗಳು–೧೯೯೪ ಬನ್ನಂಜೆ ಬಾಬು ಅಮೀನ್, ಭೂತಾರಾಧನೆ ಜಾನಪದೀಯ ಅಧ್ಯಯನ ೧೯೯೦ ಚಿನ್ನಪ್ಪ ಗೌಡ, ಕರಾವಳಿ ಜಾನಪದ–ಪುರುಷೋತ್ತಮ ಬಿಳಿಮಲೆ ೧೯೯೦, ತುಳು ನಾಡಿನ ಇತಿಹಾಸ – ರಮೇಶ್ ಕೆ.ವಿ. ೧೯೬೮, ಬತ್ತದ ಲೋಕ – ಸುಂದರ ಕಟಾಜೆ, ಉಳ್ಳಾಕ್ಲು ಇತಿಹಾಸಿಕತೆ, ಪ್ರಾದೇಶಿಕತೆ ಮತ್ತು ಆರಾಧನಾ ಸ್ವರೂಪ ೨೦೦೭ ಡಾ. ಪೂವಪ್ಪ ಕಣಿಯೂರು ಮುಂತಾದ ಕೃತಿಗಳು ಪ್ರಮುಖವಾದವುಗಳಾಗಿವೆ. ಇಷ್ಟಾದರೂ ಈವರೆಗೆ ನಡೆದ ಯಾವುದೇ ಅಧ್ಯಯಗಳು ಈ ಸಮುದಾಯದ ಸಾಂಸ್ಕೃತಿಕ ಅನನ್ಯತೆಯನ್ನು ಪರಿಪೂರ್ಣವಾಗಿ ದಾಖಲಿಸಿ ವಿವರಿಸಿಕೊಳ್ಳುವಲ್ಲಿ ಸಫಲವಾಗಿವೆ ಎಂದು ಹೇಳಲಾಗದು.

ಯಾವುದೇ ಒಂದು ಸಮುದಾಯ, ಸಮುದಾಯದ ಬದುಕು, ಪರಂಪರೆ, ಸಾಂಸ್ಕೃತಿಕ ಸ್ವರೂಪಗಳ ಅಧ್ಯಯನ, ಯಶಸ್ವಿಯಾಗಬೇಕಾದರೆ ಕೇವಲ ಮೇಲ್ಮೈಯನ್ನು ಮಾತ್ರ ಅವಲೋಕಿಸಿದರೆ ಸಾಲದು ಆಯಾ ಸಮುದಾಯ, ಜನಾಂಗಗಳ ಬದುಕು, ಸಂಸ್ಕಾರ, ಸಂಸ್ಕೃತಿ, ಆಚಾರ, ವಿಚಾರ, ಆರಾಧನೆ, ಆಚರಣೆ, ನಂಬಿಕೆ, ನಡವಳಿಕೆ, ರೂಢಿ, ಪದ್ಧತಿ, ಸಂಪ್ರದಾಯ ಮುಂತಾದ ಅಂಶಗಳನ್ನು ತಳಸ್ಪರ್ಶಿಯಾಗಿ ಸೂಕ್ಷ್ಮ ಹಾಗೂ ತೌಲನಿಕವಾಗಿ ಪರಿಶೀಲಿಸಬೇಕಾಗುತ್ತದೆ. ಈ ನಿಟ್ಟಿನಲ್ಲಿ ಈವರೆಗೆ ಈ ಸಮುದಾಯದ ಬದುಕು ಮತ್ತು ಸಾಂಸ್ಕೃತಿಕ ಸ್ವರೂಪಗಳನ್ನು ನೋಡದೆ ಇವರನ್ನು ಕೇವಲ ಕಲಾವಿದರೆಂಬ ಸೀಮಿತ ದೃಷ್ಟಿಕೋನದಿಂದಷ್ಟೇ ನೋಡಲಾಗಿದೆ. ಆದರೆ ಈ ಸಮುದಾಯ ಧಾರ್ಮಿಕ, ದೈವಾರಾಧನೆ ಹಾಗೂ ಕಲಾ ಜಗತ್ತನ್ನು ಮೀರಿಯೂ ಕಾಲ ಹವಾಮಾನ, ವ್ಯವಸಾಯ, ಸಮುದಾಯ, ನೀತಿ, ನಿಯಮ, ಸಂಪ್ರದಾಯ, ಕಟ್ಟುಪಾಡು ಇತ್ಯಾದಿ ವಿವಿಧ ಸಂದರ್ಭಾಂಶಗಳಲ್ಲಿ ನಿರ್ದೇಶಕತ್ವ ಶಕ್ತಿ, ಜಾಣ್ಮೆ, ಸಾಮರ್ಥ್ಯ, ನೈಪುಣ್ಯ ಜವಾಬ್ದಾರಿಗಳಿಂದ ತನ್ನನ್ನು ತಾನು ಪ್ರವರ್ತಿಸಿಕೊಂಡಿದೆ. ಮಾತ್ರವಲ್ಲ ಸಮಷ್ಟಿಚಿಂತನೆಯಲ್ಲಿ ತನ್ನನ್ನು ತೊಡಗಿಸಿಕೊಂಡಿದೆ. ಅದರಲ್ಲೂ ಮುಖ್ಯವಾಗಿ ಇತರ ಸಮಾಜದೊಂದಿಗೆ ಅನ್ಯೋನ್ಯವಾಗಿ ಬೆರೆತುಕೊಂಡರೂ ಸಹಾ ತನ್ನದೇ ಆದ ಆಸ್ಮಿಕತೆಯನ್ನು ಉಳಿಸಿಕೊಂಡು ಪ್ರತ್ಯೇಕ ಸಂಸ್ಕೃತಿಯ ಚಹರೆಗಳನ್ನು ಅಳವಡಿಸಿಕೊಂಡಿರುವುದು ಈ ಸಮುದಾಯದ ವೈಶಿಷ್ಟ್ಯವಾಗಿದೆ. ಹೀಗಾಗಿ ಈ ಜನಾಂಗದ ಬದುಕಿನ ವಿಭಿನ್ನ ನೆಲೆ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕ ಇತ್ಯಾದಿ ವಿವಿಧ ಆಯಾಮಗಳನ್ನು ಕೇಂದ್ರಿಕರಿಸಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಾಯ – ೨

**೨. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಕೌಟುಂಬಿಕ ವ್ಯವಸ್ಥೆ**

**೨.೧ ಉಡುಗೆ ತೊಡುಗೆ**

**೨.೨ ವಾಸಸ್ಥಾನ**

**೨.೩ ಮನೆ ಸ್ವರೂಪ**

**೨.೪ ಆಹಾರ ಪದ್ಧತಿ**

**೨.೫ ಕೌಟುಂಬಿಕ ವ್ಯವಸ್ಥೆ**

**೨.೬ ಗೋತ್ರ ಪದ್ಧತಿ**

**೨.೭ ಸಮುದಾಯದ ಭಾಷೆ**

**೨.೭.೧ ರಹಸ್ಯ ಭಾಷೆ ಅಥವಾ ಪಗ್‌ರ್ ಭಾಷೆ**

**೨.೭.೨ ರಹಸ್ಯ ಭಾಷೆಯ ಪದ ಪ್ರಯೋಗಗಳು**

### ೨. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಕೌಟುಂಬಿಕ ವ್ಯವಸ್ಥೆ

ಪ್ರಾಚೀನ ಕಾಲದಿಂದಲೂ ದಲ್ಲಿ ತುಳುನಾಡಿನಲ್ಲಿ ಸಂವಿಧಾನ, ಸರ್ಕಾರ, ಕಾನೂನು ಇವ್ಯಾವ ವ್ಯವಸ್ಥೆಗಳೂ ರೂಪಿತವಾಗದಿದ್ದ ಕಾಲದಲ್ಲೂ ತುಳುನಾಡಿನಲ್ಲಿ ಮೊತ್ತ ಮೊದಲು ನೇಮ, ಕೋಲ, ನಡಾವಳಿಗಳಂತಹಾ ದೈವಾರಾಧನೆಯನ್ನು ಹುಟ್ಟು ಹಾಕಿ ತಮ್ಮ ಬದುಕಿನ ಮೂಲವಾಗಿಯೂ, ಶೋಷಿತರ ಪರನಿಂತು ಸಾಮಾಜಿಕ, ಧಾರ್ಮಿಕ, ಹೆಚ್ಚೇಕೆ ರಾಜಪ್ರಭುತ್ವದ ದರ್ಬಾರನ್ನು ಪ್ರಶ್ನಿಸುತ್ತಾ, ಸತ್ಯ, ಧರ್ಮ, ನ್ಯಾಯ – ನೀತಿಗೆ ತಪ್ಪಿದವರನ್ನು ಎಚ್ಚರಿಸುತ್ತಾ ಸಮಾಜ ಮತ್ತು ಸಮುದಾಯಗಳ ಮಧ್ಯೆ ದೈವದ ಪ್ರತಿನಿಧಿಯಾಗಿ ನಿಂತು ತುಳುನಾಡಿನ ಸಮಸ್ತ ಅಧಿಕಾರ, ಅಂತಸ್ತು, ಸಮಾಜವನ್ನು ಪ್ರತಿನಿಧಿಸಿ, ನಿರ್ದೇಶಿಸಿ ಮುನ್ನಡೆಸುವ ಹೊಣೆಗಾರಿಕೆಯನ್ನು. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಹೊಂದಿದ್ದಾರೆ. ಈ ಮೂಲಕ ತುಳುನಾಡಿನಲ್ಲಿ ಪ್ರಾಚೀನ ಕಾಲದಲ್ಲಿ ಕೇವಲ ಮಂಜ (ಅಕ್ಕಿಯನ್ನು ಹುರಿದು ಕೋಳಿಯ ಸಾಂಬಾರಿನೊಂದಿಗೆ ಮಿಶ್ರ ಮಾಡಿ 'ಔಡಿ'ಯೆಂದು ಕರೆಯಲಾಗುವ ಬಾಳೆ ಎಲೆಯ ಸಣ್ಣ ಸಾಧನದಲ್ಲಿ ಕೊಡುವ ಅಗೇಲು (ಎಡೆಬಡಿಸುವುದು), ಪರ್ವ ತಂಬಿಲಗಳಿಗೆ ಸೀಮಿತವಾಗಿದ್ದ ದೈವಾರಾಧನೆಗೆ ನಿರ್ದಿಷ್ಟ ರೂಪಕೊಟ್ಟು, ತುಳುನಾಡ ಸಂಸ್ಕೃತಿಯ ಬಗ್ಗೆ ಇಡೀ ಜಗತ್ತೇ ಬೆರಗಿನಿಂದ ನೋಡುವಂತೆ ತುಳುನಾಡ ಸಂಸ್ಕೃತಿಯ ಅವಿಭಾಜ್ಯ ಅಂಗವಾದ ದೈವಾರಾಧನೆಗೆ ವಿಶಿಷ್ಟ ಮರುಗನ್ನು ನೀಡಿದ ಈ ಸಮುದಾಯ ತುಳುನಾಡ ಸಂಸ್ಕೃತಿಯ ಸಂರಚನೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದಾರೆ.

ಎಣ್ಣೆ ಕಪ್ಪು ಮೈ ಬಣ್ಣವನ್ನು ಹೊಂದಿ ಸುಂದರವಾದ ಮೈಕಟ್ಟು, ಆಕಾರ, ಗಾತ್ರದವರಾಗಿರುವ ಇವರು ಸಾಮಾನ್ಯ ಎತ್ತರವನ್ನು ಹೊಂದಿದವರಾಗಿರುತ್ತಾರೆ. ಪ್ರಾಚೀನ ಕಾಲದಲ್ಲಿ ಉದ್ದ ಕೂದಲು ಹೊಂದಿ ಜುಟ್ಟು ಕಟ್ಟಿಕೊಂಡಿರಲೇಬೇಕೆಂಬ

ನಿಯಮವಿದ್ದುದರಿಂದ ಇವರು ಉದ್ದ ಕೂದಲನ್ನು ಹೆಂಗಸರಂತೆ ಸೂಡಿ (ತುರುಬು) ಕಟ್ಟಿಕೊಳ್ಳುತ್ತಿದ್ದರು. ಪ್ರತೀ ದಿನ ಬೆಳಗ್ಗೆ ಸ್ನಾನ ಮಾಡಿ ದೈವ – ದೇವರಿಗೆ ದೀಪವಿಟ್ಟ ಬಳಿಕವೇ ಬೆಳಗ್ಗಿನ ಆಹಾರ ಸೇವಿಸುತ್ತಾರೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಊರ ಸಮಸ್ತರು ತಮಗೆ ಒಪ್ಪಿಸಿದ ಕಾರ್ಯವನ್ನು ತಪ್ಪದೆ ಜವಾಬ್ದಾರಿಯಿಂದ ಮಾಡಿ ನಿರ್ವಹಿಸುವ ನಿಷ್ಣಾತರು. ಪ್ರಾಚೀನ ಕಾಲದಿಂದಲೇ ಅನಕ್ಷರಸ್ಥ ಪರಂಪರೆಯವರಾದ ಇವರು ಯಾವತ್ತೂ ನಿಷ್ಠೆ, ಸಭ್ಯತೆ, ಸಂಯಮ, ಶಿಸ್ತನ್ನು ಮೀರುವವರಲ್ಲ. ದೈವಾರಾಧನಾ ಕಟ್ಟಳೆಯವರಾದ ಇವರು ಸಮಾಜದಲ್ಲಿ ಮಹತ್ತರ ಸ್ಥಾನಮಾನಗಳನ್ನು ಪಡೆದಿದ್ದರು. ಈ ಸಮುದಾಯ ಕ್ರಮೇಣ ಮೇಲ್ವರ್ಗದವರ ದಬ್ಬಾಳಿಕೆಗಳಿಂದಾಗಿಪ್ರಾದೇಶಿಕ ಭಿನ್ನತೆಗಳನ್ನು ಪಡೆದುಕೊಂಡು ಕೇವಲ ಅಸ್ಪೃಶ್ಯರೆಂದು ಗುರುತಿಸಿಕೊಳ್ಳುವಂತಾಯಿತು.

**೨.೧ ಉಡುಗೆ – ತೊಡುಗೆ**

ಬಿಳಿ ವಸ್ತ್ರವನ್ನೇ ಹೆಚ್ಚಾಗಿ ಬಳಸುತ್ತಿದ್ದ ಈ ಸಮುದಾಯವನ್ನು ಬಿಳಿ ಮಗ್ಗದವರು ಅಥವಾ ಬಿಳಿ ಮಡಿಯವರೆಂದು ಕರೆಯಲಾಗುತ್ತಿತ್ತು. ಅದರಲ್ಲೂ ಹೆಚ್ಚಿನ ಸಮಯ ಗಂಡಸರು ಬಿಳಿ ಪಂಚೆಯನ್ನುಟ್ಟುಕೊಂಡು ಬರಿಮೈಯ್ಯಲ್ಲೇ ಇರುತ್ತಾರೆ. ಮನೆಯಿಂದ ಹೊರಗೆ ಹೋಗುವ ವೇಳೆ ಮಾತ್ರ ಬಿಳಿಯ ಅಂಗಿ ಧರಿಸಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ದೈವಗಳಿಗೆ ನೇಮ ಕೈಗೊಳ್ಳುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ವ್ಯಕ್ತಿಗಳು ಅಂಗಿ ಧರಿಸಿಕೊಳ್ಳದೆ ಸದಾ ಬರಿಮೈಯ್ಯಲ್ಲಿರುತ್ತಿದ್ದು, ಹೆಗಲಿಗೆ ಕೆಂಪು ಶಾಲು ಹಾಕಿಕೊಳ್ಳುವುದು ರೂಢಿ. ದೈವಾರಾಧನೆ ಮತ್ತು ವಿಶೇಷ ಹಬ್ಬ ಹರಿದಿನಗಳಂದು ತಲೆಗೆ ಮುಂಡಾಸು ಕಟ್ಟಿ ಪಾಲ್ಗೊಳ್ಳುವುದು, ಹಾಗೆಯೇ ಯುವಕರು ಹೆಗಲಿಗೆ ಶಾಲನ್ನು ಹಾಕಿಕೊಳ್ಳುವ ಪದ್ಧತಿಯಿದೆ. ಸಾಮಾನ್ಯವಾಗಿ ದೈವಾರಾಧನಾ ವೃತ್ತಿಯಲ್ಲಿ ತೊಡಗಿಸಿಕೊಂಡವರು ಹೆಗಲಿಗೆ ಕೆಂಪು ಶಾಲನ್ನು ಹಾಕಿಕೊಂಡೇ ಇರುತ್ತಾರೆ. ಇದು ಅವರ ವೃತ್ತಿ ಸಂಕೇತವಾಗಿರುತ್ತದೆ.

ಗ್ರಾಮ ದೈವಗಳ ಸೇವೆ ಕೈಗೊಳ್ಳುವ ಈ ಸಮುದಾಯದ ಮುಖ್ಯಸ್ಥನಿಗೆ ಗ್ರಾಮ ದೈವಗಳ ಸಿರಿಮುಡಿ ಹೊತ್ತುಕೊಳ್ಳುವ ವ್ಯಕ್ತಿಯೆಂಬ ಗೌರವದ ಸ್ಥಾನಮಾನವಿರುತ್ತದೆ. ಹಾಗಾಗಿ ಈತನಿಗೆ ಊರ ಪ್ರಮುಖರು, ಭಕ್ತರು, ಗುತ್ತು, ಬಾರಿಕೆ, ಮಾಗಣೆ ಬೀಡಿನ ಪ್ರಮುಖರು ಸೇರಿ ಗ್ರಾಮ ಮತ್ತು ದೈವದ ಸಂಕೇತವಾಗಿ ಬಂಗಾರದ ಬಳೆ/ಕೈಕಡಗ ತೊಡಿಸುವ ಸಂಪ್ರದಾಯವಿದೆ. ಹೀಗೆ ಊರಿನ ಬಳೆ ತೊಡಿಸಿಕೊಂಡ ಆ ವ್ಯಕ್ತಿಗೆ (ವಿಶೇಷ ಜವಾಬ್ದಾರಿಯಿರುವುದರಿಂದ) ಮನೆ ಮತ್ತು ಕುಟುಂಬದ ಹುಟ್ಟು, ಸಾವಿನ ಸೂತಕವಿರುವುದಿಲ್ಲ. ಇವರು ಊರು, ಗ್ರಾಮ, ಪತ್ತಿನ ದೈವಗಳನ್ನಲ್ಲದೆ ಸಾವು, ಕೋಲ, ಕಾಲೆಕೋಲ, ಮುಂತಾದ ಇತರ ಸಣ್ಣ ದೈವಗಳ ನೇಮವನ್ನು ಕೈಗೊಳ್ಳುವಂತಿಲ್ಲ. ಪ್ರಾಚೀನ ಕಾಲದಲ್ಲಿ ದೈವಗಳಿಗೆ ನೇಮ ಕೈಗೊಳ್ಳುವ ನಲ್ಕೆ ಅಜಿಲ ಅಥವಾ ಪಾಣಾರರೆಲ್ಲರೂ ಉದ್ದ ತಲೆಗೂದಲು ಬಿಟ್ಟು ಶೆಂಡಿ (ತುರುಬು) ಕಟ್ಟಿಕೊಳ್ಳಲೇಬೇಕೆಂಬ ಹಾಗೂ ಗಡ್ಡ ಮೀಸೆ ಬಿಡಬಾರದೆಂಬ ನಿಯಮವಿತ್ತು. ಇವರು ದಿನನಿತ್ಯ ಬೆಳಗ್ಗೆ ಮತ್ತು ಸಂಜೆ ತಮ್ಮ ಕುಲದೇವರು ಮತ್ತು ಕುಲದೈವಗಳಿಗೆ ಕೈ ಮುಗಿದು ತಮ್ಮ ವೃತ್ತಿಗೆ ನಿಯಮಿತವಾಗಿ ತೊಡಗಿಕೊಳ್ಳುತ್ತಾರೆ.

ತೆಂಬರೆ ಎನ್ನುವ ಚರ್ಮ ವಾದ್ಯ ಈ ಸಮುದಾಯದ ಕುಲ ಲಾಂಛನವಾಗಿದೆ. ಈ ಜನಾಂಗದವರು ನಡೆಸುವ ನೇಮಕೋಲಗಳಿಗೆ ತೆಂಬರೆ ಅಗತ್ಯವಾಗಿ ಇರಲೇ ಬೇಕೆಂಬ ಕಡ್ಡಾಯವಿದೆ ಈ ತೆಂಬರೆಯನ್ನು ದೇವರ ಕೋಣೆಯಲ್ಲಿಡುವುದು ಸಂಪ್ರದಾಯ. ಈ ತೆಂಬರೆಯನ್ನು ಇವರು ಆರಾಧನಾ ಭಾವನೆಯಿಂದ ಪರಿಭಾವಿಸುತ್ತಾರೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಕಡ್ಡಾಯವಾಗಿ ಕಿವಿ ಚುಚ್ಚಿಕೊಳ್ಳಲೇಬೇಕೆಂಬ ನಿಯಮವಿದೆ. ನಡೆದು ಬಂದ ಕಟ್ಟಲೆಯ ಪ್ರಕಾರ

ಅಕ್ಕಸಾಲಿಗರನ್ನು ಈ ಸಮುದಾಯ ಸ್ಪರ್ಶಿಸುತ್ತಿರಲಿಲ್ಲ. ಮತ್ತು ಅಕ್ಕಸಾಲಿಗರ ಮನೆಯಲ್ಲಿ ನೀರನ್ನು ಸಹಾ ಕುಡಿಯುತ್ತಿರಲಿಲ್ಲ. ಹೀಗಾಗಿ ಕುಟುಂಬದ ಗುರಿಕಾರ/ಸೋದರ ಮಾವ ಕುಟುಂಬದ ಸಣ್ಣ ಮಕ್ಕಳಿಗೆ ಕಾಡಿನಲ್ಲಿ ಸಿಗುವ "ಮೊಡಕ್ಕಾರೆ" ಎಂಬ ಗಿಡದ ಮುಳ್ಳಿನಿಂದ ಕಿವಿ ಚುಚ್ಚುವುದು ಸಂಪ್ರದಾಯ.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಜೀವನ ಪದ್ಧತಿಯ ಆಚರಣೆಗಳಲ್ಲಿ ಗಂಡು ಮಕ್ಕಳಿಗೆ ಕಿವಿ ಚುಚ್ಚುವ ವಿಧಿ ಪ್ರಮುಖವಾದುದು. ಗಂಡು ಮಕ್ಕಳನ್ನು ಏಳು ವರ್ಷ ಪ್ರಾಯದಲ್ಲಿ ಮದುಮಗನಂತೆ ಸಿಂಗರಿಸಿ ಶಾಸ್ತ್ರೋಕ್ತವಾಗಿ ಕುಟುಂಬಸ್ಥರೆಲ್ಲ ಸೇರಿ ಕಿವಿ ಚುಚ್ಚುವ ಕ್ರಮವಿತ್ತು. ಇದನ್ನು "ಕಜಂಬುದ ಮದಿಮೆ" ಎಂದು ಕರೆಯಲಾಗುತ್ತಿತ್ತು. ದೈವದ ಸೇವೆ ಕೈಗೊಳ್ಳುವವರು ಚಿನ್ನ ಅಥವಾ ಬೆಳ್ಳಿಯ ಕೊಡಂಗೆ (ಕುಂಡಲ) ಅಥವಾ ಟಿಕ್ಕಿಯನ್ನು ಧರಿಸಿಕೊಳ್ಳುತ್ತಿದ್ದರು. ಸ್ತ್ರೀಯರು ಸಹಾ ಅಲಂಕಾರ ಪ್ರಿಯರು. ದಿನನಿತ್ಯ ತಲೆಗೆ ಎಣ್ಣೆ ಹಚ್ಚಿ, ತಲೆ ಬಾಚಿ ತುರುಬು (ಮುಡಿ) ಕಟ್ಟಿ ಹೂ ಮುಡಿದು ಹಣೆಗೆ ಕುಂಕುಮದ ಬೊಟ್ಟು, ಕೈಗೆ ಬಳೆ ಧರಿಸುತ್ತಾರೆ. ಹಿಂದಿನ ಕಾಲದಲ್ಲಿ ಈ ಸಮುದಾಯದ ಸ್ತ್ರೀಯರು ರವಿಕೆ ಹಾಕದೆ ಸೀರೆಯ ಸೆರಗನ್ನೇ ರವಿಕೆಗಿಂತಲೂ ಭದ್ರತೆಯಲ್ಲಿ ವಿಶೇಷ ರೀತಿಯಿಂದ ಮುಚ್ಚಿಕೊಳ್ಳುತ್ತಿದ್ದರು. ಸೀರೆಯನ್ನು ವಿಶಿಷ್ಟ ಶೈಲಿಯಲ್ಲಿ ಉಟ್ಟುಕೊಂಡು ಸೊಂಟದ ಮಧ್ಯೆ ಮುಂಭಾಗದಲ್ಲಿ ಸೀರೆಯ ನೆರಿಗೆಯನ್ನು ಹೊರಗೆ ಚಾಚುವಂತೆ (ಭರತನಾಟ್ಯ ಕಲಾವಿದೆಯರು ವಿಶೇಷ ರೀತಿಯಲ್ಲಿ ಉಟ್ಟುಕೊಳ್ಳುವಂತೆ) ಉಟ್ಟುಕೊಳ್ಳುತ್ತಿದ್ದರು. ಪ್ರಾಚೀನ ಕಾಲದಲ್ಲಿ ಚಿನ್ನ ಮತ್ತು ಬೆಳ್ಳಿಯ ಆಭರಣಗಳನ್ನು ಮಾಡಿಸಿಕೊಳ್ಳುವಷ್ಟು ಹಣವಂತರು ಅಲ್ಲದ ಕಾರಣಕ್ಕೆ ಈ ಸಮುದಾಯದ ಸ್ತ್ರೀಯರು ಕಿವಿಗೆ ತಾವೇ ಮಾಡಿದ ತಾಳೆ ಗರಿಯ ವಿವಿಧ ವಿನ್ಯಾಸಗಳ ಓಲೆ, ಆಕೃತಿಗಳನ್ನಲ್ಲದೆ ಮೃದು ಮರದ (ಗಿಡದ) ತಿರುಳನ್ನು ಧರಿಸಿಕೊಳ್ಳುತ್ತಿದ್ದರು. ಅದೇ ರೀತಿ ಕುತ್ತಿಗೆಗೆ ಮಣಿಸರ, ವಿವಿಧ ವಿನ್ಯಾಸಗಳ ಸರ, ಮಾಲೆಗಳನ್ನು, ವಿವಾಹಿತ ಸ್ತ್ರೀಯರು ತಾಳಿ ಇರುವ ಕರಿಮಣಿ ಸರಗಳನ್ನು ಹಾಕಿಕೊಳ್ಳುತ್ತಿದ್ದರು.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಸ್ತ್ರೀಯರು ತಮ್ಮ ಸೌಂದರ್ಯದ ಬಗ್ಗೆ ಹೆಮ್ಮೆ ಪಟ್ಟುಕೊಳ್ಳುತ್ತಾರೆ. ಕತೆಯೊಂದರ ಪ್ರಕಾರ "ವಿಶ್ವಕರ್ಮ ರಕ್ತ ಚಂದನ ಮರದಿಂದ ತಯಾರಿಸಿದ ಹೆಣ್ಣು ಗೊಂಬೆಗೆ ಈಶ್ವರ ಜೀವ ನೀಡಿ, ಹಾಡು ಮತ್ತು ಕುಣಿತ ನಿನ್ನ ವೃತ್ತಿಯಾಗಲಿ" ಎಂದು ಹರಸಿ ಭೂಲೋಕಕ್ಕೆ ಕಳುಹಿಸಿಕೊಟ್ಟ  ಪ್ರಕಾರ ಈ ಜನಾಂಗದ ಸ್ತ್ರೀಯರು ಸಂಧಿಯಂತಹಾ ಮೌಖಿಕ ಕಾವ್ಯಗಳನ್ನು ರಚಿಸಿ ಅದೇ ರೀತಿ ನೃತ್ಯ ಮಾಡುವುದಕ್ಕೂ ಸಾಧ್ಯವಾಯಿತಂತೆ. "ಶಂಕರಿ ಅಕ್ಕನ ತಾಳಿ ಬಂದಿ ಎಂಕೊರೊ ನಿಕ್ಕೊರೊ'' ಶಂಕರೀಕ್ಕನ ತಾಳಿ ನನಗೊಮ್ಮೆ-ನಿನಗೊಮ್ಮೆ ಎಂದು ಇವರೇ ರಚಿಸಿದ ಹಾಡಿನಲ್ಲಿ ತುಳುನಾಡಿನಲ್ಲಿ ಪ್ರಾಚೀನ ಕಾಲದಲ್ಲಿದ್ದ ಸೀರೆ ಮತ್ತು ಆಭರಣಗಳ ಹೆಸರು ಪರಿಚಯವಾಗುತ್ತದೆ. ಅಲಂಕಾರಗಳೊಂದಿಗೆ ಎಡಕೈಯ್ಯಲ್ಲಿ ಪಣೆಗರಿಯ ಛತ್ರಿ, ಬಲಕೈಯಲ್ಲಿ ಗೆಜ್ಜೆ ಕತ್ತಿಯನ್ನಿಡಿದುಕೊಂಡು ಧೈರ್ಯದಿಂದ ತುಳುನಾಡಿನಾದ್ಯಂತ ಈ ಸಮುದಾಯದ ಹೆಣ್ಣು ಹೆಜ್ಜೆ ಹಾಕಿ ನಡೆದಾಡುವಾಗ ಎಲ್ಲರೂ ನಿಬ್ಬೆರಗಾಗಿ ಆಕೆಯ ಧೈರ್ಯ ಮತ್ತು ಸೌಂದರ್ಯವನ್ನು ನೋಡುತ್ತಿದ್ದರು ಎಂದು ಮುಂತಾಗಿ ನಲ್ಕೆ, ಅಜಿಲ ಅಥವಾ ಪಾಣಾರ ಸ್ತ್ರೀಯರು ಸ್ವತಃ  ತಾವೇ  ಕಟ್ಟಿದ ಹಾಡುಗಳಲ್ಲಿ ಆಗಿನ ಕಾಲದ ತುಳುನಾಡಿನ ಸ್ಥಿತಿ ಗತಿ, ಸ್ತ್ರೀಯರಿಗಿದ್ದ ಗೌರವ, ಅಲಂಕಾರ, ಮಾತು, ನಡಿಗೆ, ಹಾವಭಾವ, ಪ್ರೀತಿ – ಪ್ರೇಮ ಇವೆಲ್ಲವೂ ವರ್ಣಿಸಲ್ಪಟ್ಟಿದೆ.

**೨.೨ ವಾಸಸ್ಥಾನ**

ತುಳುನಾಡಿನ ಸಾಂಸ್ಕೃತಿಕ ಜಗತ್ತಿನ ವಕ್ತಾರರಂತಾಗಿರುವ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ದ.ಕ ಜಿಲ್ಲೆ ಕಾಸರಗೋಡು ಹಾಗೂ ಉಡುಪಿ ಜಿಲ್ಲೆಯಾದ್ಯಂತ ಪ್ರತೀ ಗ್ರಾಮಗಳಲ್ಲೂ ವಾಸಿಸುತ್ತಾರೆ. ತುಳುನಾಡಿನಲ್ಲಿ ಗ್ರಾಮ ದೈವಗಳ ಸೇವೆ ಕೈಗೊಳ್ಳುವ ಈ ಸಮುದಾಯದ ವ್ಯಕ್ತಿಗಳಿಗೆ ಆಯಾಯ ಊರುಗಳಲ್ಲಿ ಪ್ರಾಚೀನ ಕಾಲದಿಂದಲೂ ಅಜಲು ಭೂಮಿ ಅಥವಾ ಉಂಬಳಿ ಭೂಮಿ ಸಿಕ್ಕಲ್ಪಟ್ಟಿತ್ತು. ಆದರೆ ಈ ಭೂಮಿ ಮೇಲ್ವರ್ಗದವರಿಗಿರುವಂತೆ ವಿಸ್ತಾರವಾದ ಭೂಮಿಯಾಗಿರದ ಕಾರಣ ಈ ಸಮುದಾಯ ಹಳ್ಳಿಯ ಒಂದು ಭಾಗದಲ್ಲೋ ಅಥವಾ ಗುಡ್ಡ ಪ್ರದೇಶದ ತಪ್ಪಲಲ್ಲೋ, ಮನೆಕಟ್ಟಿಕೊಂಡು ತಮ್ಮ ಕುಟುಂಬ ಸಂಸಾರದೊಂದಿಗೆ ವಾಸಮಾಡುತ್ತಿದ್ದರು. ಸ್ವಂತ ಜಮೀನು ಹೊಂದಿದ್ದವರು ಹಿಂದೆ ಬಹಳ ಕಡಿಮೆಯಿದ್ದು ಸರ್ಕಾರಿ ಜಮೀನಿನಲ್ಲೇ ಹೆಚ್ಚಾಗಿ ವಾಸಿಸುತ್ತಿದ್ದರು. ಪ್ರಾಚೀನ ಕಾಲದಲ್ಲಿ ದೈವಾರಾಧನೆಯ ಸೇವೆಗೆ ಈ ಸಮುದಾಯದವರಿಗೆ ನೀಡಲ್ಪಡುತ್ತಿದ್ದ ಅಜಲು ಭೂಮಿ ಅಥವಾ ಉಂಬಳಿ ಭೂಮಿ ಸಂಪೂರ್ಣ ಕೃಷಿಗೆ ಯೋಗ್ಯವಾಗಿರುತ್ತಿರಲಿಲ್ಲ. ಊರಿನ ದೈವಗಳ ಬಿಟ್ಟಿ ಚಾಕರಿ ಮಾಡಿಸಿಕೊಳ್ಳಲಷ್ಟೇ ಈ ಸಮುದಾಯದವರಿಗೆ ಉಂಬಳಿ ಭೂಮಿ, ಅಜಲು ಭೂಮಿಗಳನ್ನು ನೀಡಲಾಗುತ್ತಿತ್ತು. ಸಾಮಾನ್ಯವಾಗಿ ನೀರಿನ ಲಭ್ಯತೆ ಕಡಿಮೆ ಇರುವ ಬರಡುಗದ್ದೆ (ಬೊಟ್ಟು ಕಂಡೊ)ಗಳು ವ್ಯವಸಾಯ ಯೋಗ್ಯವಾಗದೇ ಇರುತ್ತಿದ್ದ ಕಾರಣ ಮತ್ತು ಆಗಿನ ಕಾಲದಲ್ಲಿ ದೂರದ ಊರುಗಳಿಗೆ ನಡೆದುಕೊಂಡೇ ಹೋಗಿ ದೈವದ ಸೇವೆ ಕೈಗೊಳ್ಳಬೇಕಾದ್ದರಿಂದ ಇವರು ಅನಿವಾರ್ಯವಾಗಿ ವಾರಗಟ್ಟಲೆ ಪರವೂರಿನಲ್ಲಿರಬೇಕಾಗುತ್ತಿತ್ತು. ಈ ಕಾರಣದಿಂದಾಗಿ ಈ ಸಮುದಾಯಕ್ಕೆ ಉಂಬಳಿ ಭೂಮಿ ಅಥವಾ ಅಜಲು ಭೂಮಿ ದೊರಕಿದ್ದರೂ ಕೃಷಿ ಕಾರ್ಯಗಳನ್ನು ಮಾಡುವಷ್ಟು ಸಮಯ, ಪುರುಸೊತ್ತು, ಇರುತ್ತಿರಲಿಲ್ಲ.

ಬೇಸಿಗೆ ಕಾಲವಿಡೀ ದೈವಗಳ ಕೋಲ, ನೇಮಗಳ ನಿರ್ವಹಣೆಯಲ್ಲೇ ಕಾಲಕಳೆಯುವ ಈ ಸಮುದಾಯ ಮಳೆಗಾಲದ ಕೆಲವೇ ತಿಂಗಳು ಮನೆಯಲ್ಲಿರುವುದರಿಂದ ಮಳೆಗಾಲದಲ್ಲಿ ಬೇಸಾಯದ ಕೃಷಿ ನಡೆಸಲು ಮತ್ತು ಕೃಷಿ ಸಂಬಂಧಿ ಪಶುಪಾಲನೆ ಮಾಡಲು ಸಾಧ್ಯವಾಗುತ್ತಿರಲಿಲ್ಲ. ಹೀಗಾಗಿ ತಮಗೆ ದೊರಕಿದ ಉಂಬಳಿ ಭೂಮಿ (ಅಜಲು ಭೂಮಿ) ಯನ್ನು ಇತರಿಗೆ ಗೇಣಿಗೆ ಕೊಟ್ಟು ತಾವು ಮುಟ್ಟಾಳೆ (ಅಡಿಕೆ ಮರದ ಹಾಳೆಯ ತಲೆಟೋಪಿ) ಕಟ್ಟುವ ಅಥವಾ ಗೊರಬು, ಚಾಪೆ, ತಯಾರಿ ಇತ್ಯಾದಿ ಗೃಹ ಕೈಗಾರಿಕೆಗಳಲ್ಲೇ ಜೀವನ ನಿರ್ವಹಿಸಬೇಕಾದ ಸಂದರ್ಭಗಳಿದ್ದವು. ಹೀಗಾಗಿ ಪ್ರಾಚೀನ ಕಾಲದಿಂದಲೂ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಕೃಷಿಯನ್ನೇ ಮುಖ್ಯ ಕಸುಬನ್ನಾಗಿ ನೆಚ್ಚಿಕೊಂಡಿರಲಿಲ್ಲ. ಆದರೆ ಗಮನಾರ್ಹ ಸಂಗತಿಯೆಂದರೆ ಈ ಸಮುದಾಯ ಮೂಲತಃ ಕೃಷಿಕರಲ್ಲದಿದ್ದರೂ ಸಹಾ ಕೃಷಿ ಸಂಬಂಧಿ ಸಾಂಸ್ಕೃತಿಕ ವ್ಯವಸ್ಥೆಯ ಮಾರ್ಗದರ್ಶಕರಾಗಿ, ನಿರ್ದೇಶಕರಾಗಿ ಸಂಸ್ಕೃತಿಯ ರೂವಾರಿಗಳಂತೆ ಮತ್ತು ವಕ್ತಾರರಂತಾಗಿ ಮುಂಚೂಣಿಯಲ್ಲಿರುತ್ತಿದ್ದರು.

**೨.೩ ಮನೆ ಸ್ವರೂಪ**

ಪ್ರಾಚೀನ ಕಾಲದಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಮನೆಗಳು ಮುಳಿಹುಲ್ಲಿನ ಛಾವಣಿಯ ಪುಟ್ಟ ಗುಡಿಸಲುಗಳಾಗಿದ್ದವು. ಮುಳಿ ಹುಲ್ಲು ಸಿಗದೇ ಇದ್ದರೆ ಕಾಡಿನ ದರ್ಬೆ, ಓಟೆಯ ಎಲೆ, ಬೈ ಹುಲ್ಲು, ಸೋಗೆ ಇತ್ಯಾದಿಗಳನ್ನು ಛಾವಣಿಗೆ ಹೊದಿಸುತ್ತಿದ್ದರು. ಅಡಿಕೆ ಮರದ ಅಥವಾ ಬಿದಿರಿನ ತೆಳು ಅಟ್ಟೆಯನ್ನು ಕಾಡಿನಲ್ಲಿ ಸಿಗುವ "ಮುತ್ತರ್" ಎಂಬ ಬಿಳಲು ಅಥವಾ "ಇಲ್ಲ್ ಬೂರು" ಎಂಬ ಬಿಳಲಿನ ಹೆಣೆಗೆಯಿಂದ ಮಾಡನ್ನು (ಮೇಲ್ಛಾವಣಿ)

ರಚಿಸುತ್ತಿದ್ದರು. ಇಂತಹಾ ಗುಡಿಸಲುಗಳಿಗೆ ಅಡಿಕೆ ಸೋಗೆ ಅಥವಾ ತೆಂಗಿನ ಗರಿಗಳಿಂದಲೇ ಗೋಡೆಯನ್ನು ರಚಿಸಿಕೊಳ್ಳುತ್ತಿದ್ದು ಇದಕ್ಕೆ "ಮಡೆಪು" ಎಂದು ಕರೆಯುತ್ತಾರೆ. ಹಾಗೆಯೇ ಓಟೆ ಅಥವಾ ಬಿದಿರನ್ನು ಜಜ್ಜಿ ಗೋಡೆಯನ್ನು ರಚಿಸಿಕೊಳ್ಳುತ್ತಿದ್ದರು. ಇದಕ್ಕೆ "ಅದ್ದೆಲ್" ಎನ್ನುತ್ತಾರೆ.

ಮನೆಯೊಳಗೆ ಅಡುಗೆ ಕೋಣೆ, ಕುಲದೈವ ದೇವರ ಕೋಣೆ, ದೈವದ ಬಟ್ಟೆ ಬರೆ, ಸಾಮಾಗ್ರಿಗಳನ್ನು ಇಡುವ ಕೋಣೆ, ಮತ್ತು ಮಲಗುವ ಕೋಣೆ, ಜಗಲಿಗಳಿರುತ್ತಿದ್ದವು. ಮನೆಯ ಹೆಬ್ಬಾಗಿಲ ಮುಂದೆ ಜಗಲಿಯಲ್ಲಿ ಮೆಟ್ಟಿಲುಗಳಿರುತ್ತಿದ್ದವು. ಅದೇ ರೀತಿ ಮನೆಯ ಹಿಂದೆಯೂ ಹಿಂಬಾಗಿಲು ಇರುತ್ತಿತ್ತು. ಸಾಮಾನ್ಯವಾಗಿ ಮೂರು ಕಿಟಕಿಗಳಿರುತ್ತಿದ್ದವು. ಹಾಳಾದ ಬ್ಯಾಟರಿಯ ಕಪ್ಪು ಹುಡಿ, ಚಿಮಣಿ ದೀಪವನ್ನು ಗೋಡೆಗೆ ನೇತಾಡಿಸಿ ದೀಪದ ಮೇಲ್ಭಾಗದಲ್ಲಿ ಅಡ್ಡವಾಗಿ ತಗಡನ್ನು ಇರಿಸಿದಾಗ ಸಂಗ್ರಹಗೊಂಡ ಕರಿಯನ್ನು ಸೆಗಣಿ ಜೊತೆ ಮಿಶ್ರ ಮಾಡಿ ನೆಲವನ್ನು ಸಾರಿಸಿ ಸ್ವಚ್ಛವಾಗಿಟುಕೊಳ್ಳುತ್ತಿದ್ದರು. ಇಂತಹಾ ಮನೆಗಳಿಗೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು "ಬುಡಾರೊ" (ಬಿಡಾರ) ಎಂದು ಕರೆಯುತ್ತಿದ್ದರು.

ಸಾಮಾನ್ಯವಾಗಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಜ್ಯೋತಿಷ್ಯ, ಮಂತ್ರವಾದ ವಾಸ್ತು ಶಕುನಗಳನ್ನು ಬಹಳವಾಗಿ ನಂಬುತ್ತಾರೆ. ಶಾಸ್ತ್ರ ಪ್ರಕಾರವೇ ಮನೆಯನ್ನು ನಿರ್ಮಿಸಿಕೊಳ್ಳುವ ಇವರು ದಿಕ್ಕು, ಬೆಳಕು, ಗಾಳಿ, ನೀರು, ಮುಂತಾದವುಗಳ ಆಧಾರದ ಮೇಲೆಯೇ ಬಾಗಿಲು, ಅಡುಗೆ ಕೋಣೆ, ಮಲಗುವ ಕೋಣೆ, ದೇವರ ಕೋಣೆ, ಮುಂತಾದವುಗಳನ್ನು ರಚಿಸಿಕೊಳ್ಳುತ್ತಾರೆ. ಮನೆಯ ಮುಂದೆ ಕಡ್ಡಾಯವಾಗಿ ಹಲಸಿನ ಮರ, ತೆಂಗಿನ ಮರಗಳಲ್ಲದೆ, ತುಳಸಿಕಟ್ಟೆ ಮತ್ತು ಕಾಡ ಸಂಪಿಗೆ, ಕೇಪುಳು ಹೂವಿನ ಗಿಡ ಹಾಗೂ ಔಷಧೀಯ ಗಿಡ ಮೂಲಿಕೆಗಳಿರಲೇಬೇಕೆಂಬ ನಿಯಮಗಳಿದ್ದವು. ನಾಯಿ ಮತ್ತು ಕೋಳಿಯನ್ನು ಸಾಕುವ ಈ ಸಮುದಾಯ ಇವುಗಳಿಗೆ ಮನೆ ಪಕ್ಕವೇ ಪ್ರತ್ಯೇಕ ವ್ಯವಸ್ಥೆಯನ್ನು ಮಾಡಿಕೊಳ್ಳುತ್ತಿದ್ದರು. ಮನೆಯ ದೇವರ ಕೋಣೆಯಲ್ಲಿ ಬೆತ್ತ ಅಥವಾ ಬಿದಿರಿನ ಪೆಟ್ಟಿಗೆಯಲ್ಲಿ ದೈವದ ಬಟ್ಟೆ ಬಣ್ಣಗಳನ್ನಿಡುತ್ತಿದ್ದರು. ಕುಟುಂಬದ ದೈವಗಳಿಗೆ ಹಿರಿಯ ವ್ಯಕ್ತಿಯ ಮನೆಯಲ್ಲಿ ಒಂದು ಸಣ್ಣ ದೈವದ ಗುಡಿ ಇರುತ್ತದೆ. ಪಕ್ಕದಲ್ಲೇ ಕೊರಗಜ್ಜ ದೈವದ ಕಲ್ಲು ಇರುತ್ತದೆ. ದೈವದ ಗುಡಿಯೊಳಗೆ ಬೆಳ್ಳಿಯ ತಗಡಿನ ಕಟ್ಟು ಹಾಕಲ್ಪಟ್ಟ ಬೆತ್ತ, ವಿವಿಧ ದೈವಗಳ ಮುಖವಾಡ, ಖಡ್ಗ, ಮಣಿ, ದೀಪ, ಗಂಟೆ ಇರುತ್ತದೆ.

ಈ ದೈವಗಳಿಗೆ ದಿನನಿತ್ಯ ಮನೆಮಂದಿ ಬೆಳಗ್ಗೆ ಮತ್ತು ರಾತ್ರಿ ದೀಪವಿಟ್ಟು ಕೈಮುಗಿಯುತ್ತಾರೆ. ದೈವದ ಸೇವೆ ಕೈಗೊಳ್ಳುವವರಾದ ಕಾರಣ ಮುಟ್ಟಾದವರು ಕಡ್ಡಾಯವಾಗಿ ಮೂರು ದಿನ ಮನೆಯೊಳಗೆ ಪ್ರವೇಶಿಸದೆ ಕೊಟ್ಟಿಗೆಯಲ್ಲಿರುತ್ತಾರೆ. ದೈವದ ಗುಡಿಯ ಬಳಿ ಏಳು ದಿನದ ಬಳಿಕವಷ್ಟೇ ತೆರಳುತ್ತಾರೆ. ಹಿಂದೆ ದೈವಗಳಿಗೆ ಗೊನೆ ಮುಹೂರ್ತ ನಡೆದ ಬಳಿಕ ಪ್ರಧಾನ ದೈವಗಳ ಸೇವೆ ನಡೆಸುವವರು ಮನೆಯೊಳಗೆ ಪ್ರವೇಶಿಸಿಸದೆ ದೈವಗಳ ನೇಮೋತ್ಸವಗಳ ತನಕ ಮನೆ ಪಕ್ಕದ ಕೊಟ್ಟಿಗೆಯಲ್ಲಿ ತೆಂಗಿನ ಗರಿಯಿಂದ ತಯಾರಿಸಿದ (ತೆಂಗಿನ ಮಡಲಿಂದ ತಯಾರಿಸಿದ) ತಟ್ಟಿಯ ಮೇಲೆ ಅಥವಾ ತೆಂಗಿನ ಎಳೆ ಗಿರಿಯನ್ನು ಹಾಸಿ ಅಥವಾ ಹೊಸ ಚಾಪೆಯಲ್ಲಿ ಶುದ್ಧಾಚಾರದಿಂದ ಮಲಗುವ ಸಂಪ್ರದಾಯವಿತ್ತು. ಅದೇ ರೀತಿ ಹಿಂದೆ ದೈವಗಳ ಸೇವೆ ಕೈಗೊಳ್ಳುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಹೋಟೇಲು ಮತ್ತು ಬೇರೆ ಮನೆಗಳಲ್ಲಿ ಇತರರು ಬಳಸಿದ ಲೋಟ, ತಟ್ಟೆಗಳಲ್ಲಿ, ಚಾ, ನೀರು, ಊಟ, ಮಾಡುತ್ತಿರಲಿಲ್ಲ. ಇದಕ್ಕಾಗಿ ಈ ಸಮುದಾಯದವರು ತಮ್ಮ ಚೀಲದಲ್ಲಿ ತೆಂಗಿನ ಗೆರಟೆಯನ್ನು ಹಾಕಿಕೊಂಡಿರುತ್ತಿದ್ದು, ಅದರಲ್ಲೇ ನೀರು, ಚಹಾಗಳನ್ನು ಕುಡಿಯುತ್ತಿದ್ದರಲ್ಲದೆ, ಬಾಳೆ

ಎಲೆಯಲ್ಲೇ ಊಟವನ್ನು ಮಾಡುತ್ತಿದ್ದರು. ಮನೆಯಲ್ಲೂ ಸಹಾ ಅಷ್ಟೇ ಶುದ್ಧಾಚಾರದಿಂದ ಇರುತ್ತಿದ್ದರು. ಪ್ರಾಚೀನ ಕಾಲದಲ್ಲಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಮಣ್ಣಿನ ಪಾತ್ರೆಗಳನ್ನು ಅಡುಗೆಗೆ ಬಳಸುತ್ತಿದ್ದರು. ತೆಂಗಿನಕಾಯಿಯ ಗೆರಟೆಯನ್ನು ಸ್ವತಃ ತಾವೇ ಸೌಟನ್ನಾಗಿ ತಯಾರಿಸಿ ಉಪಯೋಗಿಸುತ್ತಿದ್ದರು. ಮಣ್ಣಿನ ಪಾತ್ರೆಗಳಾದ "ಪಲ್ಲಯಿ"ಯಲ್ಲಿ ಊಟವನ್ನೂ, "ಗದ್ದಗ" ದಲ್ಲಿ ಸಾಂಬಾರನ್ನೂ ಹಾಕಿಕೊಂಡು ಊಟ ಮಾಡಿದರಷ್ಟೇ ಅವರಿಗೆ ತೃಪ್ತಿಯಾಗುತ್ತಿತ್ತು.

**೨.೪ ಆಹಾರ ಪದ್ಧತಿ**

ಪ್ರಾಚೀನ ಕಾಲದಲ್ಲಿ ದೈವದ ಸೇವೆ ಕೈಗೊಳ್ಳುವುದರಿಂದ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಕಾಲಿಗೆ ಚಪ್ಪಲಿ ಹಾಕಬಾರದು ಎಂಬ ನಿಯಮವಿತ್ತು. ಅದೇ ರೀತಿ ದನದ ಹಾಲು ಕುಡಿಯುವುದು, ಗೊಬ್ಬರ ಹೊರವುದು, ದನದ ಮಾಂಸ, ಹಂದಿ ಮಾಂಸ ತಿನ್ನುವುದು ಕಡ್ಡಾಯವಾಗಿ ನಿಷೇಧವಾಗಿತ್ತು. ಆಕಸ್ಮಾತ್ ಚರ್ಮದ ಚಪ್ಪಲಿ ಮೈ – ಕೈಗೆ ತಾಗಲ್ಪಟ್ಟರೂ ಸಹಾ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಕುಟುಂಬ ಸಮೇತರಾಗಿ ಕುಲದೈವ ಶೃಂಗೇರಿ ಶಾರದೆಯ ಸನ್ನಿಧಿಗೆ ಹೋಗಿ ತಪ್ಪು ಕಾಣಿಕೆಯನ್ನೊಪ್ಪಿಸಿ ಕ್ಷಮೆಯಾಚಿಸಿಕೊಂಡು ಬರಬೇಕೆಂಬ ಕಡ್ಡಾಯ ನಿಯಮವಿತ್ತು.

ಮಿಶ್ರಾಹಾರಿಗಳಾದ ಈ ಸಮುದಾಯ ದಿನನಿತ್ಯ ಕುಚ್ಚು ಅಕ್ಕಿಯ ಅನ್ನ, ತರಕಾರಿ, ಮೀನುಗಳನ್ನು ಆಹಾರವಾಗಿ ಬಳಸುತ್ತಾರೆ. ನೆಂಟರು ಕುಟುಂಬಸ್ಥರು ಮನೆಗೆ ಬಂದಾಗ ಕೋಳಿ ಸಾರು ಮತ್ತು ರೊಟ್ಟಿ ಮಾಡಿ ಆತಿಥ್ಯ ನೀಡುತ್ತಿದ್ದರು. ಗಾಳ ಹಾಕಿ ಮೀನು ಹಿಡಿಯುವುದು ಈ ಜನಾಂಗದವರ ಮುಖ್ಯ ಹವ್ಯಾಸವಾಗಿತ್ತು. ಅದೇ ರೀತಿ ಕಾಡಿನ ಪ್ರಾಣಿಗಳನ್ನು ತಮ್ಮ ವಿಶೇಷ ತಂತ್ರಗಾರಿಕೆಯಿಂದ ಹಿಡಿಯುವುದರಲ್ಲೂ ಇವರು ನಿಸ್ಸೀಮರು. ಹೆಚ್ಚಿನ ಸಮಯ ನಿದ್ದೆಗೆಟ್ಟು ದೈವಗಳ ಸೇವೆ ಕೈಗೊಳ್ಳಬೇಕಾಗಿರುವುದರಿಂದ ಹಾಲು ಬೆರಸದ ಚಹಾವನ್ನು ಹೆಚ್ಚಾಗಿ ಈ ಜನಾಂಗ ಇಷ್ಟ ಪಡುತ್ತಾರೆ. ಅಲ್ಲದೆ ವೀಳ್ಯ ತಿನ್ನುವುದು ಈ ಜನಾಂಗದವರಿಗೆ ಪಂಚ ಪ್ರಾಣವಾಗಿದೆ. ದೈವಗಳಿಗೆ ನೇಮ ಕೈಗೊಳ್ಳುವವರು ಆ ದಿನ ಉಪವಾಸವಿದ್ದು ಒಂದು ಹೊತ್ತಿನ ಫಲಾಹಾರವನ್ನಷ್ಟೇ ಸ್ವೀಕರಿಸುತ್ತಾರೆ.

**೨.೫ ಕೌಟುಂಬಿಕ ವ್ಯವಸ್ಥೆ**

ಪ್ರಾಚೀನ ಕಾಲದಲ್ಲಿ ದೈವದ ಸೇವೆ ಕೈಗೊಳ್ಳುವ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಮುಖ್ಯಸ್ಥರಿಗೆ ಕೆಲಸ ಕಾರ್ಯಗಳನ್ನು ನಿರ್ವಹಿಸಲು ಹೆಚ್ಚಿನ ಜನರ ಅಗತ್ಯವಿದ್ದುದರಿಂದ ಬಹುಪತ್ನಿತ್ವವನ್ನು ಹೊಂದಿರುತ್ತಿದ್ದರು. ಮಾತ್ರವಲ್ಲ ಆ ಪತ್ನಿಯರೆಲ್ಲರೂ ಒಟ್ಟಿಗೆ ಒಂದೇ ಮನೆಯಲ್ಲಿ ಅನ್ಯೋನ್ಯವಾಗಿ ವಾಸಮಾಡುತ್ತಿದ್ದರು. ಆಗಿನ ಕಾಲದಲ್ಲಿ ದೈವಾರಾಧನೆಯೇ ಪ್ರಮುಖ ವೃತ್ತಿಯಾಗಿದ್ದರಿಂದ ಈ ಜನಾಂಗದ ಸ್ತ್ರೀಪುರುಷರೆಲ್ಲರಿಗೂ ಸಂಧಿ ಹಾಡಲು ಬರುತ್ತಿತ್ತು. ಹೆಣ್ಣು ನೋಡಲು ಗಂಡಿನ ಕಡೆಯವರು ಹೋದಾಗಲೂ ಹೆಣ್ಣಿಗೆ ನೇಜಿ, ಕೊಯ್ಲು ಮತ್ತು ಸಂಧಿ ಹೇಳಲು ಬರುತ್ತಿದೆಯೇ ಎಂದು ತಿಳಿದುಕೊಂಡೇ ಮದುವೆ ಕಾರ್ಯಕ್ಕೆ ಮುಂದಾಗುತ್ತಿದ್ದರು. ಒಂದು ಮನೆಯಲ್ಲಿ ಬಹುಪತ್ನಿಯರಿದ್ದರೂ ಅವರೆಲ್ಲರೂ ಅನ್ಯೋನ್ಯವಾಗಿ ಒಂದೊಂದು ಕೆಲಸದ ಜವಾಬ್ದಾರಿಯನ್ನು ಹಂಚಿಕೊಂಡು ನಿರ್ವಹಿಸುತ್ತಿದ್ದರು. ಹಾಗೆಯೇ ಒಂದು ಮನೆಯಲ್ಲಿ ಅನೇಕ ಮಂದಿ ಸದಸ್ಯರಿದ್ದರೂ ಅವರೆಲ್ಲರೂ ಮನೆಯಲ್ಲಿ ಯಜಮಾನನ ಮಾತನ್ನು ಮೀರಿ ನಡೆದುಕೊಳ್ಳುತ್ತಿರಲಿಲ್ಲ.

ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ಕುಟುಂದ ವ್ಯವಸ್ಥೆಯಲ್ಲಿ ಮಾತೃ ಪ್ರಧಾನ ಮತ್ತು ಪಿತೃ ಪ್ರಧಾನ ವ್ಯವಸ್ಥೆಯ ಸಮ್ಮಿಳಿತವಾಗಿದೆ. ಅಂದರೆ ದೈವಗಳ ಸೇವೆ ಕೈಗೊಳ್ಳುವ ಅಧಿಕಾರ, ಹಕ್ಕು ತಂದೆಯಿಂದ ಮಗನಿಗೆ

ವಂಶಪಾರಂಪರ್ಯವಾಗಿ ಬಂದರೆ, ಕೌಟುಂಬಿಕ ಜವಾಬ್ದಾರಿ ಮಾತ್ರ ಪ್ರಧಾನ ಹಕ್ಕಿನಡಿ ಚಲಾಯಿಸಲ್ಪಡುತ್ತದೆ. ಅಂದರೆ ಮದುವೆ ಮುಂತಾದ ಕೌಟುಂಬಿಕ ಆಚರಣೆ, ಶಾಸ್ತ್ರಗಳೆಲ್ಲವೂ ತಾಯಿಯ ಗೋತ್ರವನ್ನನುಸರಿಸಿಕೊಂಡೇ ನಡೆಯುತ್ತದೆ. ಹೀಗಾಗಿ ಕೌಟುಂಬಿಕ ಜವಾಬ್ದಾರಿ ತಂದೆಗಿಂತಲೂ ತಾಯಿಯ ಅಣ್ಣ ಅಥವಾ ತಮ್ಮನ ಮೇಲೆ ಹೆಚ್ಚಾಗಿರುತ್ತದೆ. ಹೀಗಾಗಿ ಈ ಸಮುದಾಯದಲ್ಲಿ "ಮಕ್ಕಳ ಕಟ್ಟು" ಮತ್ತು "ಅಳಿಯ ಕಟ್ಟು" ಎಂಬ ಎರಡು ವ್ಯವಸ್ಥೆಗಳು ಸಂಯೋಗ ಹೊಂದಿ ಕೌಟುಂಬಿಕ ಸಂರಚನೆಯಲ್ಲಿ ಪ್ರಮುಖ ಪಾತ್ರವಹಿಸುತ್ತವೆ.

ತಂದೆ, ತಾಯಿ, ಮಕ್ಕಳು ಒಂದೇ ಮನೆಯಲ್ಲಿ ವಾಸಿಸುತ್ತಾ ಮಕ್ಕಳು ತಂದೆ ದೈವ ಕಟ್ಟುವ ವೇಳೆ ಆತನಿಗೆ ಸಹಾಯ ಮಾಡುತ್ತಾರೆ. ಮತ್ತು ತಂದೆಯ ಜೊತೆಯ ಸಣ್ಣ ಸಣ್ಣ ದೈವಗಳಿಗೆ ನೇಮ ಕೈಗೊಳ್ಳುತ್ತಾರೆ. ಆದರೆ ತಂದೆ ಜೀವಂತ ಇರುವಾಗ ಮತ್ತು ಊರವರು ಜವಾಬ್ದಾರಿ ಹೊರಿಸದೆ ದೊಡ್ಡ ದೈವಗಳನ್ನು ಮಕ್ಕಳು ಕಟ್ಟುವ ಕ್ರಮವಿಲ್ಲ. ತಂದೆ ಮೃತ ಪಟ್ಟ ಬಳಿಕ ಮಕ್ಕಳು ತಂದೆ ಕಟ್ಟುತ್ತಿದ್ದ ದೈವದ ಸೇವೆಯನ್ನು ಗ್ರಾಮಸ್ಥರ ಒಪ್ಪಿಗೆಯೊಂದಿಗೆ ಮುಂದುವರಿಸುತ್ತಾರೆ ಹಾಗೂ ದೈವಾರಾಧನಾ ವೃತ್ತಿಯನ್ನು ತಮ್ಮಲ್ಲೇ ಪರಸ್ಪರ ಹಂಚಿಕೊಂಡು ಅನ್ಯೋನ್ಯವಾಗಿ ನಿರ್ವಹಿಸುತ್ತಾರೆ. ಗುರು ಹಿರಿಯರಿಗೆ ಗೌರವ–ಸ್ಥಾನ–ಮಾನಗಳನ್ನು ಕೊಡುವ ಗುಣ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯಕ್ಕೆ ರಕ್ತಗತವಾಗಿ ಬಂದಿರುತ್ತದೆ. ಹಾಗಾಗಿ ಗುರು–ಹಿರಿಯರ ಮಾತನ್ನು ಮೀರದೆ ವಿಧೇಯರಾಗೇ ನಡೆದುಕೊಳ್ಳುತ್ತಾರೆ. ಕುಟುಂಬದೊಳಗೆ ಏನಾದರೂ ಕಲಹಗಳು ನಡೆದರೆ ಕುಟುಂಬದ ಮಾಗಣೆ ಗುರಿಕಾರನಾಗಿರುವ ಸೋದರ ಮಾವನಿಗೆ (ತಾಯಿಯ ಅಣ್ಣ ಅಥವಾ ತಮ್ಮ) ಕುಟುಂಬದ ತಪ್ಪು ಒಪ್ಪುಗಳನ್ನು ತಿದ್ದುವ ಜವಾಬ್ದಾರಿ ಇರುವುದರಿಂದ ಸೋದರ ಮಾವನ ಮಧ್ಯಸ್ಥಿಕೆಯಲ್ಲಿ ತೀರ್ಮಾನ, ರಾಜಿ, ಸಂಧಾನಗಳನ್ನು ಕೈಗೊಳ್ಳಲಾಗುತ್ತದೆ. ಹಿಂದೆ ಕುಟುಂಬದಲ್ಲಿ ಘೋರ ಅಪರಾಧವನ್ನೇನಾದರೂ ವ್ಯಕ್ತಿ ನಡೆಸಿದರೆ ಆತನನ್ನು ಕುಟುಂಬ ಮತ್ತು ಜಾತಿಯಿಂದ ಹೊರಗಿಡುವ (ಬಹಿಷ್ಕಾರ ಹಾಕುವ) ಪದ್ಧತಿಯಿತ್ತು.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದಲ್ಲಿ ಸ್ತ್ರೀಯರಿಗೆ ಪ್ರಾಧಾನ್ಯತೆ ಕೊಡುವ ಕ್ರಮ ಅತ್ಯಂತ ಪ್ರಾಚೀನ ಕಾಲದಿಂದಲೇ ರೂಢಿಯಲ್ಲಿತ್ತು. ಹಾಗಾಗಿ ಎಲ್ಲ ಸಮುದಾಯಗಳಲ್ಲೂ ಸ್ತ್ರೀಯರು ಎಲ್ಲದಕ್ಕೂ ನಿಷಿದ್ಧರು ಎಂದು ಪ್ರತಿಪಾದಿಸಲ್ಪಟ್ಟಿದ್ದ ಆ ಪ್ರಾಚೀನ ಕಾಲದಲ್ಲೂ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಮಾತ್ರ ತಾವು ನಿರಕ್ಷರಕುಕ್ಷಿಗಳಾಗಿದ್ದರೂ ಈ ಸಮುದಾಯದ ಸ್ತ್ರೀಯರನ್ನು ದೈವಾರಾಧನೆಯಂತಹಾ ಮಹತ್ವದ ವ್ಯವಸ್ಥೆಯಲ್ಲಿ ಸಂಧಿ ಹಾಡಲು ಮಾದಿರ, ಚೆನ್ನು, ಜಾಲಾಟ ಕುಣಿತದಂತಹಾ ಮನೋರಂಜನೆ ನೀಡಲು ಧೈರ್ಯವಾಗಿ ತೊಡಗಿಸಿಕೊಳ್ಳುವಂತೆ ಪ್ರೇರಣೆ ನೀಡಿರುವುದು ಆ ಸಮುದಾಯದ ಹೆಚ್ಚುಗಾರಿಕೆಯೆಂದೇ ಹೇಳಬಹುದು.

ಅದೇ ರೀತಿ ಗುರುವಿಲ್ಲದೆ ವಿದ್ಯೆ ಕಲಿಯುವ ಸಮುದಾಯವಿದ್ದರೆ ಅದು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಮಾತ್ರವಾಗಿದೆ. ಇತರ ಕಲೆಗಳಂತೆ ದೈವಾರಾಧನಾ ಕಲೆಗಳನ್ನು ನಿಶ್ಚಿತವಾಗಿ ತರಬೇತಿಗೊಳಿಸುವ ಸಂಪ್ರದಾಯ ದೈವಾರಾಧನೆಯಲ್ಲಿಲ್ಲ. ದೈವಗಳ ನೇಮ, ಕೋಲ, ನಡಾವಳಿ, ವಲಸರಿ ನಡೆಯುವ ಸ್ಥಳಗಳೇ ಈ ಸಮುದಾಯದ ತರಬೇತಿ ನೀಡುವ ಮತ್ತು ತರಬೇತಿ ಪಡೆಯುವ ತಾಣಗಳಾಗಿದ್ದು ಇಲ್ಲಿ ಹಿರಿಯರಿಂದ ನಡೆಯುವ ಕೋಲ, ನೇಮಗಳನ್ನು ನೋಡಿ ತಿಳಿದು ಅನುಕರಣಾ ಕಲಿಕೆಯ ಮೂಲಕವೇ ಕಿರಿಯರು ಕಲಿಯುತ್ತಾರೆ. ಈ ಕುರಿತು ಹಿರಿಯರು ಕಿರಿಯರಿಗೆ ಆಯಾ ಸಂದರ್ಭಗಳಲ್ಲಿ ಸೂಕ್ತ ನಿರ್ದೇಶನ, ಸೂಚನೆ ಸಲಹೆಗಳನ್ನು ಕೊಡುತ್ತಾರೆ.

**೨.೬ ಗೋತ್ರ ಪದ್ಧತಿ.**

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಮದುವೆಯಲ್ಲಿ ಗೋತ್ರ ಪದ್ಧತಿ ಬಹಳಷ್ಟು ಪ್ರಾಮುಖ್ಯತೆ ಮತ್ತು ಪ್ರಾಧಾನ್ಯತೆಯನ್ನು ಪಡೆದುಕೊಂಡಿದೆ. ಅದರಲ್ಲೂ ಮುಖ್ಯವಾಗಿ ಈ ಸಮುದಾಯದಲ್ಲಿ ತಾಯಿಯ ಗೋತ್ರವೇ ತಮ್ಮ ಮಕ್ಕಳಿಗೆ ಪ್ರಧಾನವಾಗಿರುತ್ತದೆ. ತುಳುವಿನಲ್ಲಿ ಇದನ್ನು "ಬರಿ" ಎಂದು ಕರೆಯುವರು. ತಾಯಿಯ ಗೋತ್ರದ ಆಧಾರದಲ್ಲೇ ತಮ್ಮ ಮಕ್ಕಳಿಗೆ ಮದುವೆ ನಿರ್ಧಾರವಾಗುತ್ತದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಅತೀ ಪ್ರಾಚೀನ ಕಾಲದಲ್ಲೇ ಸ್ತ್ರೀಯರಿಗೆ ಪ್ರಾಧಾನ್ಯತೆ ಕೊಟ್ಟು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯನ್ನು ಅನುಸರಿಸುತ್ತಿದ್ದರಿಂದಲೇ ಕುಟುಂಬದಲ್ಲಿ ತಾಯಿ ಮತ್ತು ಸ್ತ್ರೀಯನ್ನು ಅತ್ಯಂತ ಪೂಜ್ಯ ಭಾವನೆಯಿಂದ ಕಾಣಲ್ಪಡುವಂತಾಗಿದೆ. ತಾಯಿಯ ಗೋತ್ರವೇ ಮಕ್ಕಳೂ ಹೊಂದುವಂತಾಗಲು ಇದೂ ಸಹಾ ಪ್ರಮುಖ ಕಾರಣವಾಗಿದೆ.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಲ್ಲಿ ಪ್ರಾಚೀನ ಕಾಲದಿಂದಲೂ 16 ಗೋತ್ರಗಳಿವೆ. ಈ ಗೋತ್ರಗಳ ಹೆಸರು ಸಾಮಾನ್ಯವಾಗಿ ಎಲ್ಲಾ ಕಡೇ ಒಂದೇ ಆಗಿರುತ್ತದೆ. ಕೆಲವರು ೧೬ಕ್ಕಿಂತ ಹೆಚ್ಚು ಗೋತ್ರಗಳನ್ನು ಗುರುತಿಸಿದ್ದಾರೆ. ಆದರೆ ವಾಸ್ತವಿಕವಾಗಿ ಈ ಸಮುದಾಯದಲ್ಲಿರುವ 16 ಗೋತ್ರಗಳ ಪೈಕಿ ಕೆಲವೊಂದು ಗೋತ್ರಗಳನ್ನು ಬೇರೆ ಬೇರೆ ಸ್ಥಳಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಕರೆಯುವುದರಿಂದ 16ಕ್ಕಿಂತ ಹೆಚ್ಚು ಗೋತ್ರಗಳಿವೆಯೆಂದು ಕೆಲವರು ತಿಳಿಯುವಂತಾಗಿದೆ. ಈ ಸಮುದಾಯದ ಗೋತ್ರಗಳ ಹೆಸರು ಈ ರೀತಿಯಾಗಿರುತ್ತದೆ.

೧. ಸೋಮಣ್ಣ ಬರಿ
೨. ಬಂಗೇರ ಬರಿ
೩. ಕಿನ್ನೆರೆ ಬರಿ (ಕಿರೋಡಿಯನ್ ಬರಿ)
೪. ಅರಸನ್ನ ಬರಿ
೫. ಸಾಲ್ಯಾನ್ ಬರಿ (ಸಾಲ್ಯೆರ ಬರಿ)
೬. ಕಂಬೇರ ಬರಿ (ಕರ್ಕೇರ ಬರಿ)
೭. ಬಳಸಣ್ಣ ಬರಿ (ಬನ್ನಾಯ ಬರಿ)
೮. ಪುಲ್ಲೆಟ್ಟೆ ಬರಿ
೯. ಮುಂಡೆರಣ್ಣ ಬರಿ
೧೦. ಗುಂಡಣ್ಣ ಬರಿ
೧೧. ಉಪ್ಪಣ್ಣ ಬರಿ
೧೨. ಅಮ್ಮಣ್ಣ ಬರಿ
೧೩. ಬೊಳ್ಳೆರಣ್ಣ ಬರಿ
೧೪. ಕುಂಡಣ್ಣ ಬರಿ
೧೫. ನಂದೆರ ಬರಿ
೧೬. ಪೆರ್ಬಣ್ಣ ಬರಿ

ತುಳುವಿನಲ್ಲಿ ಬರಿ ಎಂದರೆ "ಹತ್ತಿರ" ಅಥವಾ "ಭಾಗ" ಎಂದರ್ಥ. ಗೋತ್ರ ಎಂಬ ಶಬ್ದವೂ "ಮೂಲ" ಮತ್ತು "ಹತ್ತಿರ" ಎಂಬ ಅರ್ಥವನ್ನು ಹೊಂದಿದೆ. ಕುಟುಂಬ ವ್ಯವಸ್ಥೆಯಲ್ಲಿ ಯಾವ ಕುಟುಂಬಕ್ಕೆ ಯಾವ ಕುಟುಂಬ ಹತ್ತಿರದ

ಸಂಬಂಧವನ್ನು ಹೊಂದಿದೆ ಅಥವಾ ಕುಟುಂಬದ ಮೂಲ ಯಾವುದು ಎಂಬುದನ್ನು ಗುರುತಿಸುವುದಕ್ಕಾಗಿಯೇ ಈ ಗೋತ್ರ ಅಥವಾ "ಬರಿ" ಪದ್ಧತಿಯನ್ನು ಅನುಸರಿಸಲಾಗುತ್ತದೆ. ಹೀಗಾಗಿ ನಿಶ್ಚಿತ ಬರಿ ಅಥವಾ ಗೋತ್ರ ಹೊಂದಿದ ಕುಟುಂಬಗಳು ಅದೇ ಬರಿ ಅಥವಾ ಗೋತ್ರ ಹೊಂದಿದ ಕುಟುಂಬಗಳೊಡನೆ ವೈವಾಹಿಕ ಸಂಬಂಧವನ್ನು ಹೊಂದುವುದನ್ನು "ಕೂಡ ಬರಿ" ಎನ್ನುತ್ತಾರೆ ಇದು ನಿಷಿದ್ಧವೆಂಬ ಕಟ್ಟಳೆಯಿದೆ. ಈ ರೀತಿಯ ವ್ಯವಸ್ಥೆಯನ್ನು ಪ್ರಾಚೀನರು ಮಾಡಿಕೊಂಡಿರಲು ವೈಜ್ಞಾನಿಕ ಕಾರಣವೂ, ಹೊಸ ಕೌಟುಂಬಿಕ ಸಂಬಂಧ ವೃದ್ಧಿಯ ಕಾರಣಗಳೂ ಇದ್ದವು. ಒಂದೇ ಬರಿ ಅಥವಾ ಗೋತ್ರದ ವ್ಯಕ್ತಿಗಳಲ್ಲಿ ಒಂದೇ ರಕ್ತ ಸಂಬಂಧವಿರುವುದರಿಂದ, ಒಂದೇ ರಕ್ತ ಸಂಬಂಧವಿರುವ ದಂಪತಿಗಳಿಗೆ ಹುಟ್ಟುವ ಮಕ್ಕಳ ಆರೋಗ್ಯ ಉತ್ತಮವಾಗಿರುವುದಿಲ್ಲವೆಂಬ ವೈಜ್ಞಾನಿಕ ಕಾರಣಗಳ ಹಿನ್ನಲೆ, ಅದೇ ರೀತಿ ಒಂದೇ ಬರಿ ಅಥವಾ ಗೋತ್ರದವರೊಡನೆ ವೈವಾಹಿಕ ಸಂಬಂಧ ಬೆಳೆಸಿದರೆ ಆ ಸಂಬಂಧಗಳು ಪರಸ್ಪರ ಸೀಮಿತ ವ್ಯಾಪ್ತಿಯೊಳಗೆ ಮಾತ್ರ ನಡೆಯುವುದರಿಂದ ವೈಶಾಲ್ಯ ಸಂಬಂಧಗಳಿಗೆ ಅವಕಾಶವಿರುವುದಿಲ್ಲ. ಹಾಗಾಗಿ ಒಂದೇ ಬರಿ ಅಥವಾ ಗೋತ್ರದವರು ಅದೇ ಬರಿ ಅಥವಾ ಗೋತ್ರದವರೊಡನ ವೈವಾಹಿಕ ಸಂಬಂಧವನ್ನು ಬೆಳೆಸುವ ಬದಲು ಹೊಸ ಸಂಬಂಧ ವೃದ್ಧಿಗಾಗಿ ಇತರ ಬರಿ ಅಥವಾ ಗೋತ್ರದವರ ಸಂಬಂಧ ಬೆಳೆಸುವುದನ್ನು ಕಟ್ಟಳೆಯನ್ನಾಗಿಸಿಕೊಂಡರು.

ಬಯಲು ಸೀಮೆ (ಘಟ್ಟ ಪ್ರದೇಶಗಳಲ್ಲಿ) ಗಳಲ್ಲಿರುವಂತೆ ತಂಗಿ ಅಥವಾ ಅಕ್ಕನ ಮಗಳನ್ನು ಅಕ್ಕನ ಅಣ್ಣ ಅಥವಾ ತಮ್ಮ (ಮಾವ) ಮದುವೆಯಾಗುವ ಕ್ರಮ ತುಳುನಾಡಿನಲ್ಲಿ ನಿಷಿದ್ಧವಾಗಿದೆ. ಆದರೆ ಸಹೋದರ ಸಹೋದರಿಯರ ಮಕ್ಕಳ ನಡುವೆ ವೈವಾಹಿಕ ಸಂಬಂಧಗಳೇರ್ಪಡುತ್ತವೆ. ಇದನ್ನು "ಸೋದರ ಸಂಬಂಧ"ವೆನ್ನಲಾಗುತ್ತವೆ. ಅಕ್ಕನ ಮಗಳನ್ನೂ ತಮ್ಮ ಅಥವಾ ಅಣ್ಣ ಮದುವೆಯಾಗುವ ಕ್ರಮ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದಲ್ಲಿ ನಿಷಿದ್ಧವಾಗಿದ್ದು ತಾಯಿಯ ಅಣ್ಣ ಅಥವಾ ತಮ್ಮ ಸೋದರ ಮಾವನಾಗಿರುವುದರಿಂದ ಕುಟುಂಬದಲ್ಲಿ ಆತನಿಗೆ ಮಹತ್ವದ ಸ್ಥಾನಮಾನ ಮತ್ತು ಮಹತ್ತರ ಜವಾಬ್ದಾರಿಯಿದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮಾಜದವರಲ್ಲಿ ಸೋದರ ಮಾವನಿಗೆ ಇಡೀ ಕುಟುಂಬಕ್ಕೊಬ್ಬ ಹತ್ತು ಮಾಗಣೆಯ ಗುರಿಕ್ಕಾರನೆಂಬ ಗೌರವವಿದ್ದು ಈತ ಹುಟ್ಟಿನಿಂದ ಸಾವಿನವರೆಗೂ ಆ ಕುಟುಂಬದಲ್ಲಿ ಮುಂದೆ ನಿಂತು ಎಲ್ಲಾ ಮುಖ್ಯ ಕೆಲಸ ಕಾರ್ಯಗಳನ್ನು ನಿರ್ದೇಶಿಸುತ್ತಾನೆ.

**೨.೭ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಭಾಷೆ**

ದಕ್ಷಿಣ ಕನ್ನಡ ಜಿಲೆಯಲ್ಲಿ ದೈವಾರಾಧನೆಯ ವೇಳೆ ಹಾಡಲ್ಪಡುವ ಮೌಖಿಕ ಕಥನ ಕಾವ್ಯವನ್ನು "ಸಂಧಿ" ಎಂದು ಕರೆಯಲಾಗುತ್ತದೆ. ಆದರೆ ಉಡುಪಿಯ ಕಡೆ ಇದನ್ನು "ಬೀರ ಹಾಡುವುದು" ಎಂದೂ, ಕುಂದಾಪುರದ ಕಡೆ "ಹೊಗಳಿಕೆ ಹಾಡು" ಎಂದೂ ಕರೆಯಲಾಗುತ್ತದೆ. ಪ್ರಾಚೀನ ಕಾಲದಲ್ಲಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಓದು ಬರಹ ಇಲ್ಲದಿದ್ದರೂ ಹಲವು ಭಾಷೆಯನ್ನು ಬಲ್ಲವರಾಗಿದ್ದರು. ದೈವಾರಾಧನೆಯ ಸಂದರ್ಭದಲ್ಲೂ ಅಥವಾ ದೈನಂದಿನ ಜೀವನದಲ್ಲೂ ಈ ಸಮುದಾಯ ವಿಶಿಷ್ಟ ಶೈಲಿಯ ಮಾತುಗಾರಿಗೆ ಹೆಸರುವಾಸಿಯಾದವರು. ಇವರಾಡುವ ಪ್ರತೀ ಮಾತಿಗೊಂದು ಒಕ್ಕಣೆಯಿರುತ್ತದೆ. ಜನರ ಮನಸ್ಸನ್ನು ತಕ್ಷಣ ಸೂಕ್ಷ್ಮವಾಗಿ ಅರಿತುಕೊಂಡು ಆಯಾ ಜನರ ಮನಸ್ಸು, ಭಾವನೆ, ಪರಿಸ್ಥಿತಿ, ಸನ್ನಿವೇಶ, ಸಂದರ್ಭಗಳಿಗೆ ತಕ್ಕಂತೆ ಯಾರಿಗೂ ನೋವಾಗದಂತೆ ಹಿತ – ಮಿತ – ಮೃದು – ನಯ ವಿನಯ ವಿಧೇಯತೆಯಿಂದ ಮಾತನಾಡುವ ಮನಶಾಸ್ತ್ರೀಯ ಕಲೆ ಇವರಿಗೆ ರಕ್ತಗತವಾಗಿ ಬಂದಿರುತ್ತದೆ. ಓದು ಬರಹವಿರುವ ಪಂಡಿತ – ಸಾಹಿತಿಗಳನ್ನು ಮೀರಿಸುವ ಲಯ, ಗೇಯ, ಕಾವ್ಯಾತ್ಮಕ, ಶೈಲಿಯ ಪದಗಳು ಇವರ ಸ್ಮೃತಿ ಪಟಲಗಳಿಂದ ಕ್ಷಣಾ

ಮಾತ್ರದಿಂದ ನಿಂತಲ್ಲೇ ಸರಾಗವಾಗಿ ಒಡಮೂಡಿ ವಿಶಿಷ್ಟ ಶೈಲಿಯ ಮಾತುಗಾರಿಕೆ, ಹಾಡು ಕಟ್ಟುವಿಕೆಗಳ ಮೂಲಕ ಹೊರ ಹೊಮ್ಮುತ್ತದೆ. ಹೀಗಾಗಿ ಇವರಾಡುವ ಮಾತಿನಲ್ಲಿ ಅದೆಷ್ಟೋ ನಯ – ನಾಜೂಕಿನ ಶಬ್ದಗಳು ಸೂಕ್ತಿಗಳು ಪದಗಳು, ವಾಕ್ಯಗಳು, ನುಡಿಗಟ್ಟು, ಗಾದೆ, ಪ್ರಾಸ, ವ್ಯಂಗ್ಯ, ಶ್ಲೇಷೆ, ಉಕ್ತಿಚಮತ್ಕಾರಗಳು, ದ್ವಂದ್ವಾರ್ಥಗಳು, ಗೂಡಾರ್ಥಗಳು ಹೇರಳವಾಗಿ ಬಳಕೆಯಾಗುತ್ತವೆ. ಇಂಥಹಾ ಹೊಸ ಶಬ್ದ ಪದ, ಮಾತುಗಳನ್ನು ಸೃಷ್ಟಿಸಿ ವಿಶಿಷ್ಟ ಶೈಲಿಯಲ್ಲಿ ಮಾತನಾಡುವ ಕಲೆ ಪ್ರಾಪ್ತವಾದುದರಿಂದಲೇ ಈ ಜನಾಂಗ " ಶಬ್ದ ಬ್ರಹ್ಮ" ರೆನಿಸಿಕೊಂಡಿದ್ದಾರೆ.

**೨.೭.೧ ರಹಸ್ಯ ಭಾಷೆ ಅಥವಾ ಪಗ್‌ರ್ ಭಾಷೆ**

ಅತ್ಯಂತ ಪ್ರಾಚೀನ ಕಾಲದಿಂದಲೂ ತುಳುನಾಡಿನ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಲ್ಲಿ ಗೂಢಾರ್ಥವಿರುವ ರಹಸ್ಯ ಭಾಷೆಯೊಂದು ಅಸ್ತಿತ್ವದಲ್ಲಿತ್ತು. ಆ ಭಾಷೆ ಕೂಡಾ ಅನಿವಾರ್ಯ ಸಂದರ್ಭಗಳಲ್ಲಿ ಈ ಸಮುದಾಯದ ವ್ಯಕ್ತಿಗಳೊಳಗೆ ಮಾತ್ರ ಪರಸ್ಪರ ಬಳಕೆಯಲ್ಲಿದೆ. ದೈವಾರಾಧನೆಯನ್ನು ಕೈಗೊಳ್ಳುವ ಇತರ ಯಾವುದೇ ಸಮುದಾಯಗಳಲ್ಲಿ ರೂಢಿಯಲ್ಲಿರದ ಈ ನಿಗೂಢ ಭಾಷೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಲ್ಲಿ ಮಾತ್ರ ಅಸ್ತಿತ್ವದಲ್ಲಿರುವುದು ಈ ಸಮುದಾಯದವರ ಸೃಜನಾತ್ಮಕತೆಗೆ ಸಾಕ್ಷಿಯಾಗಿದೆ. ತುಳು ಮಾತನಾಡುವುದರ ಜೊತೆಯಲ್ಲೇ ನಡು ನಡುವೆ ವಾಚ್ಯ ಸೂಚ್ಯ ದ್ವಂದ್ವ, ಗೂಢಾರ್ಥ, ವಕ್ರೋಕ್ತಿ, ಶ್ಲೇಷೆ ವ್ಯಂಗ್ಯಾರ್ಥಗಳಿರುವ ಅತ್ಯಂತ ವಿಶಿಷ್ಟವೆನಿಸುವ ಈ ಬಾಷೆ ತಮ್ಮ ಸ್ವರಕ್ಷಣೆ, ಸ್ವಬೇಡಿಕೆ, ಸ್ವಪೂರೈಕೆಗಳನ್ನು ಈಡೇರಿಸಿಕೊಳ್ಳಲಷ್ಟೇ ಈ ಸಮುದಾಯ ಪರಸ್ಪರ ತಮ್ಮೊಳಗೆ ಸಂವಹನ ಮಾಧ್ಯಮವನ್ನಾಗಿ ಬಳಸಿಕೊಳ್ಳುತ್ತದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಮಾತ್ರ ಮಾತನಾಡುವ ಮತ್ತು ಈ ಸಮುದಾಯದವರಿಗೆ ಮಾತ್ರವಷ್ಟೇ ಅರ್ಥವಾಗುವ ಈ ವಿಶಿಷ್ಟ ಮತ್ತು ವಿಚಿತ್ರ ಭಾಷೆಗೆ "ಪಗ್‌ರ್ ಭಾಷೆ" ಎಂದು ಹೆಸರು. ಈ ಪಗ್‌ರ್ ಭಾಷೆ ಈ ಸಮುದಾಯದ ಬಹುತೇಕರಿಗೆ ತಿಳಿದಿರುತ್ತದೆ.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಈ ಭಾಷೆಯ ಬಗ್ಗೆ ಈಗಾಗಲೇ ಕೆಲವು ವಿದ್ವಾಂಸರು ಸಾಕಷ್ಟು ಅಧ್ಯಯನ ಸಂಶೋಧನೆ, ವಿಮರ್ಶೆಗಳನ್ನು ನಡೆಸಿದ್ದಾರೆ. ಆದರೆ ಇವರು ನಡೆಸಿದ ಸಂಶೋಧನೆಯಲ್ಲಿ ಉಲ್ಲೇಖಿಸಲ್ಪಟ್ಟ ಮತ್ತು ಹೆಸರಿಸಲ್ಪಟ್ಟ ಕೆಲವೊಂದು ಶಬ್ದಗಳು ಅಪಭ್ರಂಶಗೊಂಡಿವೆ. ಮಾತ್ರವಲ್ಲ ಈ ಪಗ್‌ರ್ ಭಾಷೆಯಲ್ಲಿ ಪ್ರಾದೇಶಿಕ ವ್ಯತ್ಯಾಸವಿರುವುದನ್ನು ಅವರು ಗುರುತಿಸಿರುವುದಿಲ್ಲ. ಆದರೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೇ ಸೃಷ್ಟಿಸಿದ ಈ ಭಾಷೆಯು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವನ್ನು ಪಡೆದುಕೊಂಡಿದೆ. ಈ ರೀತಿಯ ವ್ಯತ್ಯಾಸಗಳಿಗೆ ಅನ್ಯ ಭಾಷಾ ಸ್ವೀಕರಣವೇ ಮುಖ್ಯ ಕಾರಣವಾಗಿವೆ. ಪಗ್‌ರ್ ಭಾಷೆ ತಮಿಳು, ಮಲಯಾಳಂ, ತೊದ, ಕೋತ, ಕನ್ನಡ, ಕೊಡವ, ಸಂಸ್ಕೃತ, ಮರಾಠಿ, ಇರುಳ, ಕೊರಗ, ತುಳು, ತೆಲುಗು, ಗೊಂಡಿ, ಕೊಂಡ, ಕುಇ, ಕುವಿ, ಕುಬಿ, ತೆಂಗು, ಉಂಡ, ಹಿಂದಿ, ಕೋಲಾಮಿ, ನಾಯ್ಕಿ, ಪರ್ಜಿ, ಗದಬ, ಕುರುಖ್, ಮಾಲ್ತೋ, ಬ್ರಾಹೂಈ, ಕಡಪ, ಕುರುಬ, ಕಾಡ, ಬೆಳಾರಿ, ಜರಯ್, ಮುಂತಾದ ಭಾಷೆಗಳ ಪದಗಳನ್ನು ಹೊಂದಿರುವುದಾದರೂ ಈ ಎಲ್ಲಾ ಭಾಷೆಗಳಿಗಿಂತಲೂ ಅತೀ ವಿಶಿಷ್ಟವೆನಿಸಿದೆ. ಈ ಸಮುದಾಯದವರ ಈ ಪಗ್‌ರ್ ಭಾಷೆಯ ವೈಖರಿಯನ್ನು ನೋಡಿದರೆ ಈ ಭಾಷೆ ಈಗ ಬಳಕೆಯಲ್ಲಿರುವಂತೆ ವಾಕ್ಯದ ಮಧ್ಯೆ ಮಾತ್ರ ಪ್ರಯೋಗಿಸುವ ಕೇವಲ ಭಾಗಶಃ ಸೂಚ್ಯ ಪದಗಳಷ್ಟೇ ಆಗಿರದೆ ಪ್ರಾಚೀನ ಕಾಲದಲ್ಲಿ ಸಂಪೂರ್ಣ ವಾಕ್ಯವೇ ಪಗ್‌ರ್ ಭಾಷೆಯಲ್ಲೇ ಬಳಕೆಯಲ್ಲಿದ್ದಿರಬಹುದು. ನಂತರ ಮುಂದೆ ಕ್ರಮೇಣ ಈ ಭಾಷೆಯ ಬಳಕೆ ಕಡಿಮೆಯಾದ ಕಾರಣ ಈಗ ಬಳಕೆಯಲ್ಲಿರುವಂತೆ ವಾಕ್ಯದ ಮಧ್ಯೆ ಮಾತ್ರ ಸೂಚ್ಯ ಪದಗಳಾಗಿ ಬಳಕೆಗೆ ಬಂದಿರುವ ಸಾಧ್ಯಗಳಿವೆ. ಏಕೆಂದರೆ

ಯಾವುದೇ ಪದಗಳಾಗಲೀ ಶಬ್ದಗಳಾಗಲೀ ಅದು ಸೂಚ್ಯ, ಗೂಢಾರ್ಥ, ವಾಚ್ಯವಾಗಿ ಬಳಕೆಯಲ್ಲಿರಬೇಕಾದರೆ ಅದು ಅದಕ್ಕಿಂತ ಎಷ್ಟೋ ವರ್ಷಗಳ ಹಿಂದೆಯೇ ಪರಿಪೂರ್ಣವಾಗಿ ಸಂವಹನಮಾಧ್ಯಮವಾಗಿ ಬಳಕೆಯಲ್ಲಿರದ ಹೊರತು ತಾನಾಗಿಯೇ ಇದ್ದಕ್ಕಿದ್ದಂತೆ ಸೃಷ್ಟಿಯಾಗಲು ಸಾಧ್ಯವಿಲ್ಲ. ಹಾಗಾಗಿ "ಪಗ್‌ರ್ ಭಾಷೆ" ಹಿಂದೆ ಸಂಪೂರ್ಣ ವ್ಯವಹಾರಿಕ ಭಾಷೆಯಾಗಿ ಬಳಕೆಯಲ್ಲಿರಬಹುದಾದ ಸಾಧ್ಯತೆಗಳು ಹೆಚ್ಚೆಂದು ತೋರುತ್ತದೆ.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ರಹಸ್ಯ ಭಾಷೆ (ಪಗ್‌ರ್) ಭಾಷೆಯ ಕೆಲವು ಪದ ಪ್ರಯೋಗಗಳು

**೨.೭.೨. ಪಗ್‌ರ್ ಭಾಷೆಯ ಪದ ಪ್ರಯೋಗಗಳು**

| ಪದ | | ಅರ್ಥ |
|---|---|---|
| ದಾಂಚ್ | – | ಹೋಗುವುದು |
| ದೀಂಕ್ | – | ನೋಡುವುದು |
| ಪದ್ದ್ | – | ತೆಗೆದುಕೊಳ್ಳುವುದು |
| ಪದ್ದೊನು | – | ಇರುವುದು, ಇರು |
| ಎದುಂಬು | – | ಮಾತನಾಡು, ಹೇಳುವುದು |
| ಅಜಿರವು | – | ಕೊಡುವುದು |
| ಅಜಿರವೊನು | – | ತೆಗೆದುಕೊಳ್ಳು, ಕೊಂಡುಕೊಳ್ಳು |
| ಕಾಚ್ | – | ತಿನ್ನುವುದು |
| ಕಲ್ತರ್ | – | ಬರುವುದು |
| ಮಾಂಗವು | – | ಮಾಡುವುದು |
| ಮಾಂಗಜೆ | – | ಕೊಲ್ಲುವುದು |
| ಬಾಯ್ನಿಗಿರ್ | – | ಬೊಬ್ಬಿಡುವುದು, ಜೋರಾಗಿ ಮಾತನಾಡುವುದು |

**ಹೆಸರು ಸೂಚಕ ಪದಗಳು**

| ಪದಗಳು | | ಅರ್ಥ |
|---|---|---|
| ಇತ್ತಿಲ್ | – | ವ್ಯಕ್ತಿ, ಮನುಷ್ಯ |
| ಬಂದಯಿ | – | ಹೆಣ್ಣು, ಹೆಂಗಸು |
| ಕುದ್ದಯಿ | – | ಗಂಡಸು |
| ಪೋರೆದಿ | – | ಹೆಂಗಸು |
| ನಗಟ್ಟ್ | – | ಸ್ವಲ್ಪ |
| ಪಿಲ್ಯೆ | – | ಗಂಡ |
| ಪಿಲೆತ್ತಿ | – | ಹೆಂಡತಿ |
| ನಗಲ್ತ್ | – | ಕಳ್ಳತನ |
| ಅವುಂಡಿ | – | ಕಳ್ಳತನ |
| ಕರ್‌ಂಬೆಲ್ | – | ಕೆಳಗೆ |
| ಕದ್‌ಂಬೆಲ್(ಕದ್ಬೆಂಲ್) | – | ಪೆಟ್ಟು, ಹೊಡೆತ |
| ಪೊಲಿಪ್ಪ | – | ಪೆಟ್ಟು, ಹೊಡೆತ |

| | | |
|---|---|---|
| ಬಜಪ್ಪ | – | ವೀಳ್ಯದೆಲೆ, ಬೆಟ್ಟಲ, – ವೀಳ್ಯದೆಲೆ |
| ಕಾನೆರ್ಪ | – | ಅಡಿಕೆ |
| ನರಿಪ್ಪ | – | ತೆಂಗಿನಕಾಯಿ |
| ಮುಂಗಲ್ | – | ತೆಂಗಿನಕಾಯಿ |
| ಕರ್‌ಪದ(ಕರ್ಪದ) | – | ಕತ್ತಿ ಚೂರಿ |
| ಪರಮುದ | – | ಹಾವು |
| ಉತ್ಯೊದ (ಉತ್ಯವ) | – | ದೊಡ್ಡ, ಹೆಚ್ಚು |
| ಮೆನ್ವ | – | ಕಣ್ಣು |
| ಮೆನ್ವು | – | ಬೆಳಕು, ಬೆಂಕಿ |
| ಅಗ್ಗಿ | – | ಬೆಂಕಿ |
| ಮುಡೆಪ್ಪ | – | ಮೊಲೆ |
| ಕೈಮರ್ಚೆಲ್ | – | ಮೊಲೆ |
| ಪುಡೆಪ್ಪ | – | ಗೆರಸೆ |
| ಆಪಯಿ | – | ಆ ಕಡೆ, ಅಲ್ಲಿ |
| ಈಪಯಿ | – | ಈ ಕಡೆ, ಇಲ್ಲಿ |
| ನಗ | – | ನೋಡು, ಎಚ್ಚರಿಕೆ, ಜಾಗ್ರತೆ |

## ಅಧ್ಯಾಯ – 3

**೩. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಜೀವನಾವರ್ತನದ ಆಚರಣೆಗಳು ಮತ್ತು ಸಾಂಸ್ಕೃತಿಕ ಸ್ವರೂಪಗಳು**



---

### ೩. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಜೀವನಾವರ್ತ ಆಚರಣೆಗಳು ಮತ್ತು ಸಾಂಸ್ಕೃತಿಕ ಸ್ವರೂಪಗಳು

"ಆವರ್ತನ" ಎಂದರೆ ಕ್ರಮಾನುಗತವಾದ ಅನುಕ್ರಮ ಸರಣಿ, ಕ್ರಮವಾಗಿ ಸುತ್ತುವುದು, ರೂಢಿಸಲಟ್ಟ ಜೀವನ ವಿಧಾನ, ವಿಧಿ – ವಿಧಾನಗಳ ಸರಪಣಿ ಎಂಬರ್ಥವಿದೆ. ಮನುಷ್ಯ ತನ್ನ ಹುಟ್ಟಿನಿಂದ ಸಾವಿನವರೆಗಿನ ಬದುಕಿನಲ್ಲಿ ಬೇರೆ ಬೇರೆ ಹಂತಗಳಲ್ಲಿ ಆಚರಣಾತ್ಮಕವಾಗಿ ರೂಢಿಸಿಕೊಂಡಿರುವ ರೂಢಿ, ಸಂಪ್ರದಾಯ ವಿಧಿ ವಿಧಾನಗಳೇ ಜೀವನಾವರ್ತ ಅಥವಾ ಜೀವನಾವರ್ತನ ಆಚರಣೆಗಳಾಗಿವೆ. ಶಾಸ್ತ್ರೋಸ್ತ ವಿಧಿ ವಿಧಾನ, ದೈವ ದೇವರ ನಂಬಿಕೆ, ವಿಧಿ–ನಿಷೇಧಗಳ, ಕಾನೂನು ಕಟ್ಟಲೆಗಳ ಮತ್ತು ರೂಢಿ ಸಂಪ್ರದಾಯಗಳ ಹಿನ್ನಲೆಯಲ್ಲೇ ಜೀವನವರ್ತನ ಆಚರಣೆಗಳು ನಡೆಯಲ್ಪಡುವುದರಿಂದ ಇದು ಜೀವನ ವಿಧಾನವೂ, ಸಂಸ್ಕಾರ – ಸಂಸ್ಕೃತಿಯೂ, ಜೀವನ ಪದ್ಧತಿಯೂ ಆಗಿರುತ್ತದೆ. ಹಾಗಾಗಿ ಸಾಮಾಜಿಕ ಮತ್ತು ಕೌಟುಂಬಿಕ ವ್ಯವಸ್ಥೆಯಲ್ಲಿ ಈ ಜೀವನಾವರ್ತ ಆಚರಣೆಗೆ ಬಹಳಷ್ಟು ಮಹತ್ವವಿದೆ.

ತುಳುನಾಡಿನಲ್ಲಿ ಪ್ರತಿಯೊಂದು ಜಾತಿ, ಸಮುದಾಯಗಳೂ ತಮ್ಮದೇ ರೀತಿಯ ಜೀವನಾವರ್ತನ ಆಚರಣೆಗಳನ್ನು ಆಚರಿಸಿಕೊಂಡು ಬರುತ್ತವೆ. ವೈದಿಕರು ದೇವರನ್ನು ಮುಂದಿಟ್ಟು ಶಾಸ್ತ್ರೋಕ್ತವಾಗಿ ಮಂತ್ರ, ತಂತ್ರಾದಿಗಳನ್ನು ಪಠಿಸುತ್ತಾ

ಹೋಮ ಹವನಗಳ ಮೂಲಕ ಜೀವನಾವರ್ತನದ ವಿಧಿ – ವಿಧಾನಗಳನ್ನು ಆಚರಿಸಿದರೆ, ವೈದಿಕೇತರರು ದೈವಗಳ ಜೊತೆ ದೇವರನ್ನು ಪೂಜಿಸಿ ಜನಪದ ಶೈಲಿಯಲ್ಲಿ ಆಚರಿಸುತ್ತಾರೆ. ತುಳುನಾಡ ಸಂಸ್ಕೃತಿಯ ರಾಯಭಾರಿಗಳೆನಿಸಿದ ನಲ್ಕೆ, ಅಜಿಲ (ಪಾಣಾರ) ಸಮುದಾಯದವರೂ ಸಹಾ ಜೀವನಾವರ್ತನ ಆಚರಣೆಗಳಿಗೆ ಬಹಳಷ್ಟು ಪ್ರಾಮುಖ್ಯತೆಯನ್ನು ಕೊಡುತ್ತಾರೆ. ಆದರೆ ಎಲ್ಲದರಲ್ಲೂ ವಿಶಿಷ್ಟತೆಯನ್ನು ಹೊಂದಿರುವ ಈ ಸಮುದಾಯ ಇತರ ಸಮುದಾಯಗಳಿಗಿಂತ ತೀರಾ ಭಿನ್ನ ಮತ್ತು ವಿಶಿಷ್ಟ್ಯತೆಯನ್ನು ಪಡೆದುಕೊಂಡಿದೆ. ಈ ಸಮುದಾಯದಲ್ಲಿನ ಆಯಾ ಕುಟುಂಬದ ಸೋದರ ಮಾವ ಅಥವಾ ಮಾಗಣೆ ಗುರಿಕಾರನ ನೇತೃತ್ವದಲ್ಲಿ ಶಾಸ್ತ್ರಬದ್ಧವಾಗಿ ಜೀವನಾವರ್ತನ ಆಚರಣೆಗಳು ಮತ್ತು ವಿಧಿ ವಿಧಾನಗಳು ನಡೆಯುತ್ತವೆ. ಗಮನಾರ್ಹ ಸಂಗತಿಯೇನೆಂದರೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ದವರ ಜೀವನಾವರ್ತನ ಆಚರಣೆ, ವಿಧಿ ವಿಧಾನ, ರೂಢಿ, ಸಂಪ್ರದಾಯಗಳ ಹಿನ್ನಲೆಯಲ್ಲೇ ಈ ಸಮುದಾಯ ಸೃಷ್ಟಿಸಿದ ಸಂಧಿ, ಹಾಡು, ಕವಿತೆಗಳು ಪ್ರತಿಬಿಂಬಿತಗೊಂಡಿರುವುದರಿಂದ ಇವರ ಸಂಧಿ, ಹಾಡು, ಉರಲ್, ಕವಿತೆಗಳಲ್ಲಿ ಈ ಸಮುದಾಯದ ಜೀವನಾವರ್ತನ ಆಚರಣೆಗಳ ಸ್ಪಷ್ಟ ಚಿತ್ರಣಗೋಚರಿಸುತ್ತದೆ. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಜೀವನಾವರ್ತನ ಆಚರಣೆಗಳು ಈ ಕೆಳಗಿನಂತಿವೆ.

೧. ಸೀಮಂತ (ಬಯಕೆ)

೨. ಹೆರಿಗೆ ಶಾಸ್ತ್ರ

೩. ಅಮೆ ಸೂತಕ ಕಳೆಯುವ ಶಾಸ್ತ್ರ

೪. ಮಗುವನ್ನು ತೊಟ್ಟಿಲಿಗೆ ಹಾಕುವ ಶಾಸ್ತ್ರ (ಮಗವಿಗೆ ಹೆಸರಿಡುವ ಶಾಸ್ತ್ರ)

೫. ನಲ್ವತ್ತನೇ ಸ್ನಾನದ ಶಾಸ್ತ್ರ

೬. ಕಜಂಬು, ಮದುವೆ ಶಾಸ್ತ್ರ (ಚೌರ ಶಾಸ್ತ್ರ ಅಥವಾ ಕಿವಿ ಚುಚ್ಚುವ ಶಾಸ್ತ್ರ)

೭. ಋತುಮತಿ ಶಾಸ್ತ್ರ (ಮದಿಮಲಾಯಿ ಮದಿಮೆ, ಮುಳ್ಳು ಮೊಟ್ಟೆ ಮದಿಮೆ, ಕರಪತ್ತವುನೆ)

೮. ಮದುವೆ ಶಾಸ್ತ್ರ

೯. ಉತ್ತರ ಕ್ರಿಯೆ (ಮರಣ ಶಾಸ್ತ್ರ)

**೩.೧ ಸೀಮಂತ ಶಾಸ್ತ್ರ (ಬಯಕೆ)**

ಬಯಕೆ ಎಂದರೆ ಕನ್ನಡದಲ್ಲಿ "ಆಸೆ" ಎಂದರ್ಥ. ತುಳುನಾಡಿನಲ್ಲಿ "ಬಾಯಕೆ" ಎಂದರೆ "ಭರ್ತಿ", ಅಥವಾ "ತುಂಬು" ಎಂಬರ್ಥವಿದೆ. ಗರ್ಭಿಣಿಯರಿಗೆ ತಮ್ಮ ಹಸಿವಿನ ಜೊತೆಗೆ ತನ್ನ ಗರ್ಭದಲ್ಲಿರುವ ಮಗುವಿನ ಹಸಿವನ್ನೂನೀಗಿಸಿಕೊಳ್ಳಬೇಕಾಗಿದ್ದರಿಂದ ಗರ್ಭಿಣಿ ಹೆಣ್ಣಿಗೆ ಹಸಿವು ಮತ್ತು ಆಸೆ ಹೆಚ್ಚಾಗಿರುತ್ತದೆ. ಅದಕ್ಕಾಗಿ ಗರ್ಭಿಣಿಯರಿಗೆ ಏನನ್ನಾದರೂ ತಿಂದು ಹಸಿವೆಯಿಂದ ಸಂತೃಪ್ತಿಗೊಳ್ಳಬೇಕೆಂಬ ಹಂಬಲವಿರುವುದು ಸಹಜವಾಗಿರುತ್ತದೆ. ಕಡು ಬಡತನವಿದ್ದ ಪ್ರಾಚೀನ ಕಾಲದಲ್ಲಿ ಆಹಾರ, ತಿಂಡಿ, ತಿನಿಸು, ಅಮೂಲ್ಯ ವಸ್ತುಗಳ ಲಭ್ಯತೆ ಕಡಿಮೆ ಇದ್ದ ಕಾರಣ ಮತ್ತು ಬಡತನದಿಂದಾಗಿ ಇಂತಹಾ ಆಹಾರ ತಿಂಡಿ, ತಿನಿಸು, ಅಮೂಲ್ಯ ವಸ್ತುಗಳನ್ನು ಪಡೆದುಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅದರಲ್ಲೂ ಆಸ್ಪತ್ರೆ, ಶಸ್ತ್ರ ಚಿಕಿತ್ಸೆಗಳಂತಹಾ ಆಧುನಿಕ ಸೌಲಭ್ಯಗಳೇನೆಂಬುದರ ಕಲ್ಪನೆಯೇ ಇರದಿದ್ದ ಆ ಕಾಲದಲ್ಲಿ ಗರ್ಭಿಣಿ ಹೆಣ್ಣು ಈಗಿನ ಹಾಗೆ ಆರಾಮವಾಗಿ ಹೆರಿಗೆಯಾಗುವುದಕ್ಕಿಂತ ಬದುಕಿ ಉಳಿಯುವುದೇ ಅಪರೂಪವಾಗಿತ್ತು. ಹಾಗಾಗಿ ಆ ಕಾಲದಲ್ಲಿ ಹೆಣ್ಣು

ಗರ್ಭಿಣಿಯಾಗಿ ಹೆತ್ತು ಬದುಕುಳಿದರೆ ಆಕೆಗೆ ಪುನರ್ಜನ್ಮ ಪಡೆದಂತೆ. ಇದಕ್ಕಾಗಿಯೇ ಪ್ರಾಚೀನ ಕಾಲದಲ್ಲಿ ಗರ್ಭಿಣಿ ಹೆಣ್ಣಿನ ಆಸೆಗಳನ್ನು ಪೂರೈಸಲು ಆಕೆಯ ಗಂಡನ ಮನೆಯಲ್ಲಿ ಆಕೆಯ ತಂದೆ ತಾಯಿ, ಪತಿ ಹಾಗೂ ಸಂಬಂಧಿಕರು ಸೇರಿ ಗರ್ಭಿಣಿಗೆ ಸೀಮಂತ ಅಥವಾ ಬಯಕೆ ಬಡಿಸುವ ಶಾಸ್ತ್ರವನ್ನು ಕೈಗೊಳ್ಳುವ ಪದ್ಧತಿ ರೂಢಿಗೆ ಬಂದಿತು. ಗರ್ಭಿಣಿಗೆ ಏಳು ತಿಂಗಳು ಎಂಬುವುದು ಒಂದು ಪ್ರಮುಖವಾದ ಹಂತವಾಗಿದ್ದು ಈ ಹಂತದಲ್ಲಿ ಮಗುವಿನ ಬೆಳವಣಿಗೆ ಹೆಚ್ಚಾಗಿ ಆಗಿ ಮಗು ಗರ್ಭದೊಳಗೆ ಚಲಿಸುವುದರಿಂದ ಪ್ರಸವದ ಪ್ರಕ್ರಿಯೆ ಆರಂಭವಾಗುತ್ತದೆ. ಇದಕ್ಕಾಗಿಯೇ ಗರ್ಭಿಣಿಗೆ ಏಳೇ ತಿಂಗಳಲ್ಲಿ ಬಯಕೆ (ಸೀಮಾಂತ) ಬಡಿಸುವ ಪದ್ಧತಿ ಚಾಲ್ತಿಗೆ ಬಂತು.

ಬಯಕೆ ಬಡಿಸುವ ದಿನದ ಮುಹೂರ್ತವನ್ನು ಗರ್ಭಿಣಿಯ ಗಂಡನ ಮನೆಯವರು ಮತ್ತು ಹೆಣ್ಣಿನ ಮನೆಯವರೂ ಸೇರಿ ನಿರ್ಧರಿಸಿ ಎರಡೂ ಕುಟುಂಬಗಳ ಸದಸ್ಯರಿಗೆ ತಿಳಿಸುತ್ತಾರೆ. ಆ ದಿನ ಗಂಡನ ಮನೆಯವರು, ಹೆಣ್ಣಿನ ಮನೆಯವರು ಮತ್ತು ನೆಂಟರಿಷ್ಟರು, ಹೂ ಹಿಂಗಾರ ಮತ್ತು ತಿಂಡಿಗಳನ್ನು ತಂದು ಮೊದಲು ದೈವಗಳಿಗೆ ಅಗೇಲು ಬಡಿಸಿ ಕೈ ಮುಗಿದು ದೇವರಿಗೂ ಪ್ರಾರ್ಥಿಸಿ ಬಳಿಕ ಗರ್ಭಿಣಿ ಹೆಣ್ಣನ್ನು ಸಿಂಗರಿಸಿ ಮುತ್ತೈದೆಯರು ಕರೆದುಕೊಂಡು ಬಂದು ಚಾಪೆಯಲ್ಲಿ ಕುಳ್ಳಿರಿಸುತ್ತಾರೆ. ಜೊತೆಗೆ ಗಂಡನನ್ನು ಮತ್ತು ಒಂದು ಹೆಣ್ಣು ಮಗುವನ್ನು ಸಹಾ ಪಕ್ಕದಲ್ಲಿ ಕುಳ್ಳಿರಿಸಿ ಕುಟುಂಬದ ಗುರಿಕಾರ (ಮಾಗಣೆ ಗುರಿಕಾರ) ನ ಪತ್ನಿ ಮೊದಲು ಸೇರಿರುವ ಕುಟುಂಬಸ್ಥರಲ್ಲಿ "ಸರ್ವೆರೆಡಲಾ ಬಯಕೆ ಬಳಸರೆ ಅನುವು ಕೇನುವೊ" (ಸರ್ವರಲ್ಲು ಬಯಕೆ ಬಡಿಸಲು ಅನುಮತಿ ಕೇಳುತ್ತೇವೆ). ಎಂದು ಗಟ್ಟಿಯಾಗಿ ಹೇಳಿದಾಗ ಎಲ್ಲರೂ "ದೇವೆರಪ್ಪಣೆ" ಎಂದು ಒಪ್ಪಿಗೆ ಸೂಚಿಸುತ್ತಾರೆ. ಆಗ ಮೊದಲು ಗರ್ಭಿಣಿ ಹೆಣ್ಣಿನ ತಂದೆ ತಾಯಿ ಅಥವಾ ಸೋದರ ಮಾವ (ಮಾಗಣೆ ಗುರಿಕಾರ) ನ ಹೆಂಡತಿಯೇ ಬಯಕೆ ಬಡಿಸಿ ಬಳಿಕ ಗರ್ಭಿಣಿಯ ತಲೆಗೆ ಗರಿಕೆ ಹುಲ್ಲಿನಿಂದ ತೆಂಗಿನ ಎಣ್ಣೆ ಹಚ್ಚಿ ಇತರರು ಕ್ರಮ ಪ್ರಕಾರವಾಗಿ ಗರ್ಭಿಣಿ ಹೆಣ್ಣಿನ ಮುಂದೆ ಇರಿಸಿದ ಗೆರಸೆಗೆ ತಾವು ತಂದಿರುವ ತಿಂಡಿಗಳನ್ನು ಬಡಿಸುತ್ತಾರೆ. ಎಲ್ಲರೂ ಬಡಿಸಿದ ಬಳಿಕ ಮಾಗಣೆ ಗುರಿಕಾರನ ಪತ್ನಿ "ಸರ್ವೆಡರಲಾ ಬಯಕೆ ತಿನರೆ ಅನುವು ಕೇನೊನುವೊ" (ಸರ್ವರಲ್ಲೂ ಬಯಕೆ ತಿನ್ನಲು ಅನುಮತಿ ಕೇಳುತ್ತೇವೆ) ಎಂದು ಒಪ್ಪಿಗೆ ಕೇಳಿದಾಗ "ದೇವೆರಪ್ಪಣೆ" ಎಂದು ಎಲ್ಲರೂ ಹೇಳುತ್ತಾರೆ. ಆಗ ಮೊದಲು ಗಂಡ ಗರ್ಭಿಣಿ ಹೆಣ್ಣಿಗೆ ತಿಂಡಿಯನ್ನು ತಿನ್ನಿಸುತ್ತಾನೆ. ಬಳಿಕ ಆಕೆ ತನ್ನ ಪಕ್ಕ ಕುಳಿತಿರುವ ಹೆಣ್ಣು ಮಗುವಿಗೆ ತಿನ್ನಿಸುತ್ತಾಳೆ. ನಂತರ ಆಕೆ ತನಗೆ ಸಾಕೆನಿಸುವಷ್ಟು ತಿಂದು ಮಿಕ್ಕುಳಿದುದನ್ನು ಅಲ್ಲೇ ಬಿಟ್ಟಾಗ ಇತರ ಸ್ತ್ರೀಯರು ಆಕೆಯನ್ನು ಕೈಯಲ್ಲಿ ಹಿಡಿದು ಎಬ್ಬಿಸಿ ಕರೆ ತಂದು ಕೈ ತೊಳೆದು ಕುಳ್ಳಿರಿಸುತ್ತಾರೆ.

ಇದಾದ ಬಳಿಕವೇ ಸೇರಿದ ಸಭೆಗೆ ಊಟ ಕೊಡಲಾಗುತ್ತದೆ. ಎಲ್ಲರೂ ಊಟ ಮುಗಿಸಿದ ಬಳಿಕ ಮಾಗಣೆ ಗುರಿಕಾರನ ನೇತೃತ್ವದಲ್ಲಿ ಗರ್ಭಿಣಿ ಹೆಣ್ಣನ್ನು ಗಂಡನ ಮನೆಯ ಮುಂಭಾಗದ ತುಳಸೀ ಕಟ್ಟೆಯ ಎದುರು ನಿಲ್ಲಿಸಿ ಸೇರಿದ ಕುಟುಂಬಸ್ಥರು, ಮತ್ತು ಮನೆ ಮಂದಿ, ಸಭೆ ದೈವಗಳಿಗೆ ಕೈ ಮುಗಿದು ಒಂದು ಹೇಂಟೆ ಕೋಳಿಗೆ ಬೆಳ್ತಿಗೆ ಅಕ್ಕಿಯನ್ನು ಗರ್ಭಿಣಿಯಿಂದ ತಿನ್ನಿಸಿ ಆಕೆಯ ತಲೆಗೆ ಮೂರು ಸುತ್ತು ನೀವಳಿಸಿ ಬಿಟ್ಟು ಬಿಡಲಾಗುತ್ತದೆ. ಬಳಿಕ ಈ ಹೇಂಟೆ ಕೋಳಿಯನ್ನು ಕೊಲ್ಲದೆ ಚೆನ್ನಾಗಿ ಸಾಕಲಾಗುತ್ತದೆ. ಇದಾದ ನಂತರ ಬಯಕೆ ಬಡಿಸಿ ಮಿಕ್ಕಿ ಉಳಿದಿದ್ದ ತಿಂಡಿಯ ಪೊಟ್ಟಣಗಳ ಜೊತೆ ಕರಿಮೆಣಸು, ಓಲೆಬೆಲ್ಲ, ಕಾಳಜೀರಿಗೆ, ಮುಂತಾದ ವಸ್ತುಗಳನ್ನು ಗರ್ಭಿಣಿ ಹೆಣ್ಣಿಗೆ ಮತ್ತು ತಿಂಡಿ ತಿನಿಸಗಳನ್ನು ಕುಟುಂಬಸ್ಥರಿಗೂ ಕಟ್ಟಿ ಕೊಟ್ಟು ಆಕೆಯ ತಂದೆ ತಾಯಿಗಳ ಜೊತೆಗೆ ತವರು ಮನೆಗೆ ಕಳುಹಿಸುತ್ತಾರೆ. ಹೆಣ್ಣಿನ ಬದುಕಿನಲ್ಲಿ ಬಯಕೆ ಬಡಿಸುವುದೆಂಬುದು ಒಂದು ಸಲ ಮಾತ್ರವಾದ ಕಾರಣ ಈ ಬಯಕೆ ಅಥವಾ ಸೀಮಂತಕ್ಕೆ ಬಹಳ ಪವಿತ್ರ

ಸ್ಥಾನಮಾನವಿದೆ. ಬಯಕೆ ಶಾಸ್ತ್ರದ ಪ್ರಾಮುಖ್ಯತೆಯನ್ನು ಉಳಿಸುವುದಕ್ಕಾಗಿಯೇ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೇ ಕಟ್ಟಿ ಹಾಡುವ ಬಯಕೆ ಶಾಸ್ತ್ರದ ಸಂಧಿಯಲ್ಲಿ ಬಯಕೆ ಶಾಸ್ತ್ರದ ವರ್ಣಣೆಯಿದ್ದು ಇದರಿಂದ ತುಳುನಾಡಿನಲ್ಲಿ ಬಯಕೆ ಶಾಸ್ತ್ರ ಹೇಗೆ ನಡೆಯುತ್ತಿತ್ತು ಮತ್ತು ಬಯಕೆ ಶಾಸ್ತ್ರದ ಮಹತ್ವವೇನೆಂಬುದನ್ನು ತಿಳಿಯಬಹುದಾಗಿದೆ.

**೩.೨ ಹೆರಿಗೆ ಶಾಸ್ತ್ರ**

ಪ್ರಾಚೀನ ಕಾಲದಿಂದಲೇ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ನಾಟಿ ವೈದ್ಯ ಪದ್ಧತಿಯ ಚಿಕಿತ್ಸೆ, ಜ್ಯೋತಿಷ್ಯ, ಮಂತ್ರವಾದ ಮುಂತಾದ ವೃತ್ತಿಗಳಲ್ಲಿ ಪರಿಣತಿಯನ್ನು ಪಡೆದಿದ್ದರಿಂದ ಈ ಸಮುದಾಯದ ಬಹುತೇಕ ಸ್ತ್ರೀಯರು ನಿರಾತಂಕವಾಗಿ ಹೆರಿಗೆ ಮಾಡಿಸುವ ಸೂಲಗಿತ್ತಿ ವೃತ್ತಿಯಲ್ಲಿ ಎತ್ತಿದ ಕೈಗಳಾಗಿದ್ದರು. ಹಾಗಾಗಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಗರ್ಭಿಣಿ ಸ್ತ್ರೀಯರನ್ನು ಈ ಸಮುದಾಯದ ಪರಿಣತ ಸೂಲಗಿತ್ತಿಯರೇ ಹೆರಿಗೆ ಮಾಡಿಸುತ್ತಿದ್ದರು. ಹೆರಿಗೆ ಮಾಡಿಸುವ ವಿಧಾನದಲ್ಲಿ ಬಹಳಷ್ಟು ತಿಳುವಳಿಕೆ ಪಡೆದಿದ್ದ ಈ ಸಮುದಾಯದ ಸೂಲಗಿತ್ತಿಯರು ಗರ್ಭವೇ ಧರಿಸದಿದ್ದ ಹೆಣ್ಣುಗಳಿಗೆ ಗರ್ಭ ನಿಲ್ಲಲು ಮತ್ತು ಗರ್ಭ ಬೆಳೆಯಲು ಹಾಗೂ ಬೆಳೆದ ಗರ್ಭ ಯಾವುದೇ ತೊಡಕಿಲ್ಲದೆ ಪ್ರಸವವಾಗಲು ಔಷಧಿಗಳನ್ನು ಕೊಡುತ್ತಿದ್ದರು. ಅಲ್ಲದೆ ಇವರು ಆಸ್ಪತ್ರೆ, ವೈದ್ಯರು, ಮತ್ತು ವೈಜ್ಞಾನಿಕ ಅನುಕೂಲತೆಗಳು ಇಲ್ಲದ ಆ ಕಾಲದಲ್ಲೂ ಆಯಾ ಗರ್ಭಿಣಿಯರು ಹೆರಿಗೆಯಾಗುವ ತಿಂಗಳು ಸಮಯ ಮತ್ತು ಹುಟ್ಟುವ ಮಕ್ಕಳು "ಅವಳಿ ಜವಳಿಗಳೋ, ಗಂಡೋ ಅಥವಾ ಹೆಣ್ಣೋ ಎಂದು ಮುಂತಾಗಿ ಕರಾರುವಕ್ಕಾಗಿ ಮುಂಚಿತವಾಗಿ ಹೇಳುವಷ್ಟು ಪರಿಣತರಾಗಿದ್ದರು. ಈ ಸಮುದಾಯದ ಸೂಲಗಿತ್ತಿಯರು ಮಾಡಿಸುವ ಹೆರಿಗೆಯೂ ಅಷ್ಟೇ ನಯ–ನಾಜೂಕಿನದ್ದಾಗಿದ್ದು, ಗರ್ಭಿಣಿ ಹೆಣ್ಣಿನ ಪ್ರಸವವನ್ನು ಯಾವುದೇ ನೋವು, ಊನ, ರಕ್ತಸ್ರಾವದ ತೊಂದರೆ, ಅಂಗ ವೈಕಲ್ಯದ ತೊಂದರೆ ಇಲ್ಲದಂತೆ ಮಾಡಿಸುತ್ತಿದ್ದರು. ಹೀಗಾಗಿಯೇ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಲ್ಲಿ ಪ್ರಾಚೀನ ಕಾಲದಲ್ಲೂ ಗರ್ಭಿಣಿಯರು ಗರ್ಭಾವಸ್ಥೆಯಲ್ಲಾಗಲೀ, ಹೆರಿಗೆಯ ಸಂದರ್ಭದಲ್ಲಾಗಲೀ ಮರಣವನ್ನಪ್ಪುತ್ತಿದ್ದ ಮತ್ತು ಹುಟ್ಟಿದ ಮಕ್ಕಳು ಅಂಗವೈಕಲ್ಯಕ್ಕೊಳಗಾಗುತ್ತಿದ್ದ ಪ್ರಮಾಣ ಅತ್ಯಲ್ಪವಾಗಿತ್ತು. ಇಂದಿಗೂ ಸಹಾ ಈ ಸಮುದಾಯದವರಲ್ಲಿ ಅಂಗವೈಕಲ್ಯತೆ ಕಡಿಮೆ ಪ್ರಮಾಣದಲ್ಲಿರಲು ಈ ಸಮುದಾಯ ಗರ್ಭಿಣಿ ಹೆಣ್ಣಿನ ಆರಂಭಿಕ ಹಂತದಿಂದ ಹೆರಿಗೆಯವರೆಗೆ ತಾವು ಪ್ರಾಚೀನ ಕಾಲದಿಂದಲೇ ಅನುಸರಿಸಿಕೊಂಡು ಬಂದಿದ್ದ ನಾಟಿ ಔಷಧಿ ಹಾಗೂ ಚಿಕಿತ್ಸಾ ವಿಧಿ – ವಿಧಾನಗಳನ್ನು ಇಂದಿಗೂ ಸಹಾ ರೂಢಿಸಿಕೊಂಡಿರುವುದೇ ಪ್ರಮುಖ ಕಾರಣವೆನ್ನಲಾಗುತ್ತಿದೆ.

ಹೆರಿಗೆ ಮಾಡಿಸಿದ ಬಳಿಕ ಮಗುವನ್ನು ಶುಭ್ರವಾದ ಮತ್ತು ಅಗಲವಾದ ಅಡಿಕೆ ಹಾಳೆಯಲ್ಲಿ ಮಲಗಿಸುತ್ತಾರೆ. ನಂತರ ತೆಳು ಹಗ್ಗ ಅಥವಾ ನೂಲಿನಿಂದ ಹೊಕ್ಕಳು ಬಳ್ಳಿಯನ್ನು ಕಟ್ಟಿ ಕತ್ತರಿಸಿ ಕಾಸರಕನ ಮರದ ತೆಳು ಎಲೆ ಅಥವಾ ಬೀಜವನ್ನು ಸುಟ್ಟು ಹೊನ್ನೆ ಮರದ ಎಣ್ಣೆಯಲ್ಲಿ ಕಾಯಿಸಿ ಹದ ಮಾಡಿ ಹೊಕ್ಕಳ ಬಳ್ಳಿಯ ಗಾಯಕ್ಕೆ ಹಚ್ಚುತ್ತಾರೆ. ಅಥವಾ ಬಾಣಂತಿ ಮಲಗಿದ ಮುಂಡೋವು ಗರಿಯ ಚಾಪೆಯ ಒಂದು ಸಣ್ಣ ಗರಿಯನ್ನು ಸುಟ್ಟು ಭಸ್ಮ ಮಾಡಿ ಆ ಗಾಯಕ್ಕೆ ಹಾಕುತ್ತಿದ್ದರು. ನಂತರ ತುಂಡಾದ ಹೊಕ್ಕಳ ಬಳ್ಳಿಯನ್ನು ಕಾಸರಕನ ಮರದ ಬುಡದಲ್ಲಿ ಗುಂಡಿ ಅಗೆದು ಹಾಕುತ್ತಿದ್ದರು. ಇದನ್ನು "ಅಮೆ ಗುಂಡಿ" ಎನ್ನಲಾಗುತ್ತಿತ್ತು. ಹೆರಿಗೆಯಾದ ತಕ್ಷಣ ಬಾಣಂತಿ ಮತ್ತು ಮಗುವಿಗೆ ಸ್ನಾನ ಮಾಡಿಸಿ ಹೊಟ್ಟೆಗೆ ಬಿಗಿಯಾಗಿ ಬಟ್ಟೆ ಸುತ್ತಿ ಕಾಳ ಜೀರಿಗೆ ಕಷಾಯ ಕುಡಿಸುತ್ತಾರೆ. ನಂತರ ಸುಮಾರು ೪೦ ದಿನಗಳವರೆಗೆ ಬಾಣಂತಿಗೆ ಎಲ್ಲ ಬಗೆಯ ಸೊಪ್ಪಿನ ಚಿಗುರಿಗೆ ಬೇರೆ ಬೇರೆ ಹಳ್ಳಿ ಮದ್ದನ್ನು ಸೇರಿಸಿ ಗುದ್ದಿ ಬೇಯಿಸಿ ತಿನ್ನಿಸಲಾಗುತ್ತದೆ. ಇದಾದ ಬಳಿಕ

ಹೆರಿಗೆಯಾದ ಮನೆಯ ಮೆಟ್ಟಿಲಿನ ಮೇಲೆ, ಮನೆಯ ಮಾಡು ಮತ್ತು ಬಾಣಂತಿ ಹಾಗೂ ಮಗುವನ್ನು ಸ್ನಾನ ಮಾಡಿಸುವ ಬಚ್ಚಲು ಕೋಣೆಯ ಮಾಡಿಗೆ ಕಾಸರಕನ ಮರದ ಗೆಲ್ಲು, ನೆಕ್ಕಿ ಗಿಡದ ಗೆಲ್ಲು ಮತ್ತು ಹಿಡಿಸೂಡಿಕಡ್ಡಿಗಳನ್ನು ಇರಿಸುತ್ತಾರೆ. ಅದೇ ರೀತಿ ಬಾಣಂತಿ ಮತ್ತು ಮಗು ಮಲಗುವ ಚಾಪೆಯ ಅಡಿಭಾಗದಲ್ಲಿ ಕಾಸರನ ಗೆಲ್ಲು, ಹಿಡಿಸೂಡಿಕಡ್ಡಿ, ಮಸಿ, ಮೂರು ಕಾಸರನ ಎಲೆಯಲ್ಲಿ ಮಂತ್ರಿಸಿದ ಭಸ್ಮ, ಗೆಜ್ಜೆ ಕತ್ತಿ (ಪ್ರಾಚೀನ ಕಾಲದಲ್ಲಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಹೆಂಗಸರಲ್ಲಿ ಮೂರು ಗೆಜ್ಜೆ ಇರುವ "ಗೆಜ್ಜೆ ಕತ್ತಿ" ಇರಲೇಬೇಕೆಂಬ ಶಾಸ್ತ್ರವಿತ್ತು) ಇತ್ಯಾದಿಗಳನ್ನಿಡುವ ಸಂಪ್ರದಾಯವಿತ್ತು. ಆದರೆ ಈಗ ಗೆಜ್ಜೆಕತ್ತಿಯ ಬಳಕೆ ಇಲ್ಲದ ಕಾರಣ ಸಣ್ಣಕತ್ತಿಯನ್ನಿಡಲಾಗುತ್ತದೆ. ಸೋಂಕು, ಸನ್ನಿ, ಕಾಳೆ, ಪಿಶಾಚಿಗಳ ಬಾಧೆ ಬಾಣಂತಿ ಮತ್ತು ಮಗುವಿಗೆ ತಟ್ಟಬಾರದೆಂದು ಈ ರೀತಿಯ ಕ್ರಮಗಳನ್ನು ಅನುಸರಿಸಲಾಗುತ್ತದೆ.

ಹೆರಿಗೆಯಾದ ಕೋಣೆ ಮತ್ತು ಬಾಣಂತಿ ಹಾಗೂ ಮಗು ಇರುವ ಕೋಣೆ ಸಾಮಾನ್ಯವಾಗಿ ಕತ್ತಲೆ ಕೋಣೆಯಾಗಿರುತ್ತಿತ್ತು. ಏಕೆಂದರೆ ಕತ್ತಲೆಕೋಣೆಯಲ್ಲಿ ನೊಣಗಳ ಉಪಟಳ ಹೆಚ್ಚುತ್ತಿರಲಿಲ್ಲವಾದ ಕಾರಣ ಮತ್ತು ಈ ಕೋಣೆ ಬೆಚ್ಚಗಿರುತ್ತಿದ್ದ ಕಾರಣ ಹೆರಿಗೆ ಕೋಣೆ ಕತ್ತಲಾಗಿರುತ್ತಿತ್ತು. ಹೆರಿಗೆಯಾದ ಬಳಿಕ ಈ ಮನೆಯನ್ನು ಸೂತಕದ ಮನೆಯೆಂದು ಪರಿಗಣಿಸಲಾಗುತ್ತಿದ್ದರಿಂದ ಮಗುವಿಗೆ "ಅಮೆ" ಶಾಸ್ತ್ರ ಆಗುವಲ್ಲಿಯವರೆಗೆ ಯಾರೂ "ಆ ಮನೆಯೊಳಕ್ಕೆ ಪ್ರವೇಶಿಸುವುದು ನಿಷಿದ್ಧವಾಗಿದೆ. ಹೆರಿಗೆಯಾದ ಬಳಿಕ ಬಾಣಂತಿಯನ್ನು ಹೆಚ್ಚು ಬಿಸಿಯಾದ ನೀರಿನಿಂದ ಸ್ನಾನ ಮಾಡಿಸುತ್ತಾರೆ. ಅದೇ ರೀತಿ ಮಗುವನ್ನೂ ಸಹಾ ಹದ ಬಿಸಿ ನೀರಿನಿಂದ ಸ್ನಾನ ಮಾಡಿಸಿ ಬಾಣಂತಿಯ ದೇಹದಲ್ಲಿದ್ದ ನಂಜು ಕಫ, ಶೀತ, ವಿಷಕಾರೀ ಅಂಶಗಳು ಹಾಲಿನ ಮೂಲಕ ಮಗುವಿನ ದೇಹಕ್ಕೆ ಸೇರಬಾರದೆಂಬ ಕಾರಣಕ್ಕೆ ಬಾಣಂತಿಗೆ ಸ್ನಾನ ಮಾಡಿಸಿದ ತಕ್ಷಣ ಕಾಳಜೀರಿಗೆಯ ಕಷಾಯವನ್ನು ಕುಡಿಸಲಾಗುತ್ತದೆ. ನಂತರ ಬಾಣಂತಿಯ ಹೊಟ್ಟೆಯ ಸುತ್ತ ಬಟ್ಟೆಯನ್ನೂ ಕಟ್ಟಲಾಗುತ್ತದೆ. ನಂತರ ಕಾಸರಕನ ಎಲೆ, ಕಮ್ಯುನಿಷ್ಟ್, ಮತ್ತು ನಾಚಿಕೆಗಿಡದ ಎಲೆಗಳನ್ನು ಬಿಟ್ಟು ಉಳಿದ ಎಲ್ಲಾ ಕಾಡಿನ ಸೊಪ್ಪುಗಳ ಚಿಗುರನ್ನು ಇತರ ಬೇರು ಮದ್ದಿನೊಂದಿಗೆ ಬೇಯಿಸಿ "ಪಲ್ಲೊಡಿ" ಎಂಬ ಹೆಸರಿನ ಹಳ್ಳಿ ಮದ್ದನ್ನು ಬಾಣಂತಿಗೆ ಸುಮಾರು 40 ದಿನಗಳ ಕಾಲ ಕೊಡಲಾಗುತ್ತದೆ.

ಅದೇ ರೀತಿ ಓಲೆಬೆಲ್ಲ, ಜೀರಿಗೆ, ಬೆಳ್ಳುಳ್ಳಿ, ಕಾಳುಮೆಣಸು, ಕೊತ್ತಂಬರಿ, ಇತ್ಯಾದಿಗಳ ಮಿಶ್ರಣವನ್ನು ಚೆನ್ನಾಗಿ ಪುಡಿಮಾಡಿ ನಂತರ ಉಂಡೆಮಾಡಿ "ಪೆದ್ಮೊಲ್ತಿ ಮರ್ದ್" (ಬಾಣಂತಿ ಮದ್ದು) ಎಂಬ ಹಳ್ಳಿ ಮದ್ದನ್ನೂ ಬಾಣಂತಿಗೆ ಕೊಡಲಾಗುತ್ತದೆ. ಬಾಣಂತಿಯನ್ನು ಸ್ನಾನ ಮಾಡಿಸಲು ಅಥವಾ ಹೊರಗೆಲ್ಲೂ ಒಬ್ಬಳನ್ನೇ ಕಳಿಸುವ ಕ್ರಮವಿಲ್ಲ. ಅದರಬದಲು ಸೀರೆಯ ಸೆರಗನ್ನು ಮುಸುಕು ಹಾಕಿಸಿ ಆಕೆಯ ಕೈಯ್ಯಲ್ಲೊಂದು ಕತ್ತಿ (ಪ್ರಾಚೀನ ಕಾಲದಲ್ಲಿ ಗೆಜ್ಜೆ ಕತ್ತಿಯಿರುತ್ತಿತ್ತು)ಯನ್ನು ಕೊಡಲಾಗುತ್ತದೆ. ಇದನ್ನು "ಅಮೆಕತ್ತಿ" ಅಥವಾ "ಪೆದ್ಮೊಲ್ತಿ ಕತ್ತಿ" ಎಂದು ಕರೆಯಲಾಗುತ್ತದೆ. ಹೀಗೆ 40 ದಿನಗಳವರೆಗೆ ಬಾಣಂತಿ ಮತ್ತು ಮಗುವಿನ ಚಾಕರಿ, ಆರೈಕೆ ಮಾಡಲು ಯಾರಾದರೊಬ್ಬರು ಆಕೆಯೊಂದಿಗೆ ಕಾಯುತ್ತಲೇ ಇರುತ್ತಾರೆ. ಎಳೆ ಮಗುವನ್ನು ಸ್ನಾನ ಮಾಡಿಸುವಾಗ ಬಹಳ ಜಾಗ್ರತೆ ವಹಿಸಬೇಕಾದ್ದರಿಂದ ಅನುಭವ ಇರುವ ಯಾರಾದರೂ ಹಿರಿಯರೇ ಎಣ್ಣೆ ತಿಕ್ಕಿ ಸ್ನಾನ ಮಾಡಿಸುತ್ತಾರೆ. ಇದಕ್ಕಾಗಿ "ಒರಂಕಚಿಪ್ಪಿ" (ದೊಡ್ಡ ಗಾತ್ರದ ಮೂರು ಕಣ್ಣುಗಳಿರುವ ತೆಂಗಿನಗೆರಟೆಯಾಗಿದ್ದು, ಅಡಿಭಾಗದಲ್ಲಿ ಒಂದು ಕಣ್ಣಿಗೆ ಸಣ್ಣ ತೂತು ಮಾಡಲಾಗುತ್ತದೆ. ಈ ತೂತಿನ, ಮೂಲಕ) ಯ ಮೂಲಕ ಬಿಸಿ ನೀರನ್ನು ಮಗುವಿನ ಮೇಲೆ ಎರೆಯಲಾಗುತ್ತದೆ. ಮಗು ಹುಟ್ಟಿದ ತಕ್ಷಣ ಮಗುವಿನ ಮೂಗಿನಿಂದ ಸೂಲಗಿತ್ತಿಯರು ತಮ್ಮ ಬಾಯಿಯ ಮೂಲಕ ಲೋಳೆಯಂತಹ ದ್ರವವನ್ನು ಎಳೆದು ತೆಗೆಯುತ್ತಾರೆ. ಈಗಲೂ ಹೆಚ್ಚಾಗಿ ಇದನ್ನು ಹಿರಿಯರು

ಮಾಡುತ್ತಿದ್ದು ಮುಂದೆ ಮಗುವಿನ ಶ್ವಾಸಕೋಶದಲ್ಲಿ ಕಫ ಸಂಗ್ರಹವಾಗಿ ಅಸ್ತಮ, ಉಬ್ಬಸ ಮುಂತಾದ ಸಮಸ್ಯೆಗಳು ಬರದಂತೆ ಈ ರೀತಿಯ ಕ್ರಮವನ್ನು ಅನುಸರಿಸಲಾಗುತ್ತಿದೆ. ಬಾಣಂತಿ ಮತ್ತು ಮಗುವಿಗೆ ಕುಲೆ (ಅಕಸ್ಮತ್ತಾಗಿ ಮೃತಪಟ್ಟ ಆತ್ಮ) ಗಾಳಿ ಸೋಂಕು, ನೀರಕನ್ನಿ, ಕಾಲೆ, ದೃಷ್ಟಿ ಮುಂತಾದ ಬಾಧೆಗಳು ಹೆಚ್ಚಾಗಿ ಕಾಡುತ್ತವೆ ಎಂಬ ನಂಬಿಕೆ ಈ ಸಮುದಾಯದಲ್ಲಿರುವುದರಿಂದ ಇವುಗಳ ತೊಂದರೆಯಿಂದ ಪಾರಾಗಲು ಮಗು ಮತ್ತು ಬಾಣಂತಿಯನ್ನು ಸ್ನಾನಕ್ಕೆ ಅಥವಾ ಹೊರಗೆ ಕರೆದುಕೊಂಡು ಹೋಗುವಾಗ ಬಾಣಂತಿಯು ಸದಾ ತಲೆಗೆ ಬಟ್ಟೆ ಕಟ್ಟಿಕೊಂಡು ಅಥವಾ ಮುಸುಕು ಹಾಕಿಕೊಂಡು ಕೈಯ್ಯಲ್ಲಿ ಒಂದು ಸಣ್ಣ ಕತ್ತಿಯನ್ನು ಹಿಡಿದುಕೊಂಡಿರುತ್ತಾಳೆ. ಪ್ರಾಚೀನ ಕಾಲದಲ್ಲಿ ಈ ಕತ್ತಿಗೆ ಗೆಜ್ಜೆ ಕತ್ತಿ ಅಥವಾ "ಅಮೆ ಕತ್ತಿ" ಅಥವಾ "ಪರ್ಕತ್ತಿ" ಎಂದು ಕರೆಯಲಾಗುತ್ತಿತ್ತು. ವಿದ್ಯುತ್ ಇಲ್ಲದಿದ್ದ ಪ್ರಾಚೀನ ಕಾಲದಲ್ಲಿ "ಅಲ್ಂಬುಡೋ" ಎಂಬ ಗಿಡದ ಎಣ್ಣೆ ತೆಗೆದು ಬಾಣಂತಿ ಮತ್ತು ಮಗು ಮಲಗುವ ಕೋಣೆಯಲ್ಲಿ ರಾತ್ರಿ ಸದಾ ಹೊತ್ತು ದೀಪವನ್ನು ಉರಿಸಿಡುತ್ತಿದ್ದರು.

**೩.೩ ಅಮೆ ಸೂತಕ ತೆಗೆಯುವ ಕ್ರಮ**

"ಅಮೆ ಸೂತಕ" ತೆಗೆಯುವುದು ಎಂದರೆ ತುಳುವಿನಲ್ಲಿ "ಮಗು ಹುಟ್ಟಿರುವುದರ ಕಶ್ಮಲ ತೆಗೆಯುವುದು" ಅಥವಾ "ಶುದ್ಧವಾಗುವುದು" ಎಂಬ ಅರ್ಥವಿದೆ. ಅಂದರೆ ಮಗು ಹುಟ್ಟಿ ವೃದ್ಧಿಯಾಗಿರುವುದರ ಸೂತಕ ತೆಗೆಯುವುದಾಗಿದೆ. ಇದನ್ನು "ಪುರ್ದುಕಳೆಯುವುದು" ಎಂತಲೂ ಕರೆಯುತ್ತಾರೆ. ಮಗು ಹೆತ್ತ 5,7,11 ನೇ ದಿನದಲ್ಲಿ ಈ ಅಮೆ ತೆಗೆಯುವ ಶಾಸ್ತ್ರವನ್ನು ಮಾಡುತ್ತಾರೆ. ಆ ದಿನ ಮನೆಯನ್ನು ಗುಡಿಸಿ, ಸಗಣಿಯಿಂದ ಸಾರಿಸಿ ಸ್ವಚ್ಚಗೊಳಿಸಲಾಗುತ್ತದೆ. ಆನಂತರ ಕುಟುಂಬದ ಸೋದರ ಮಾವ ಅಥವಾ ಕುಟುಂಬದ ಮಾಗಣೆ ಗುರಿಕಾರ ದೇವಸ್ಥಾನದಿಂದ ಅಥವಾ ಬ್ರಾಹ್ಮಣರು ಕೊಟ್ಟ ತೀರ್ಥವನ್ನು ತಂದು ಮನೆಯ ಸುತ್ತ ಹಾಗೂ ಬಚ್ಚಲು ಕೋಣೆ ಬಾಣಂತಿ ಮತ್ತು ಮಗು ಮಲಗುವ ಕೋಣೆ, ಬಾವಿ, ಮುಂತಾದ ಕಡೆ ಸಿಂಪಡಿಸಿ ಶುದ್ಧಗೊಳಿಸಿ ನಂತರ ಬಾಣಂತಿ, ಮಗು, ಹಾಗೂ ಮನೆಮಂದಿಗೆ ತೀರ್ಥಪ್ರಸಾದವಾಗಿ ಕೊಡುತ್ತಾನೆ. ಇದಾದ ಬಳಿಕ ಮಗುವನ್ನು ಶುಭ್ರವಾದ ಹಸಿಹಾಳೆ ಅಥವಾ ಮುಂಡೋವು ಗರಿಯಲ್ಲಿ ಮಾಡಲ್ಪಟ್ಟ ಸಣ್ಣ ಚಾಪೆ (ಅಮೆ ತಕ್ಕಣದಲ್ಲಿ) ಯಲ್ಲಿ ಮಲಗಿಸಿ ಅಡಿಭಾಗದಲ್ಲಿ ಕಾಸರಕನ ಮರದ ಚಿಗುರು, ಮಸಿ, ಕಬ್ಬಿಣದ ತುಂಡು, ಹಿಡಿಸೂಡಿ ಕಡ್ಡಿಗಳನ್ನು ಇಟ್ಟು ಮನೆಮಂದಿಯ ಸಹಿತ ಸೇರಿದವರೆಲ್ಲರೂ ಮಧ್ಯಾಹ್ನ ವಿಶೇಷ ಊಟ ಮಾಡುತ್ತಾರೆ.

**೩.೪ ತೊಟ್ಟಿಲಿಗೆ ಹಾಕಿ ಹೆಸರಿಡುವ ಕ್ರಮ (ಬಾಲೆ ತೊಟ್ಟಿಲ್)**

ಮಗು ಹೆತ್ತ ಹದಿನೇಳನೇ ದಿನದಲ್ಲಿ ಮಗುವನ್ನು ತೊಟ್ಟಿಲಿಗೆ ಹಾಕಿ ಹೆಸರಿಡುವ ಕ್ರಮವಿದೆ. ತೊಟ್ಟಿಲನ್ನು ಸಾಮಾನ್ಯವಾಗಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೇ ಕಾಡಿನ ಬಿಳಲು ಕಾಡಬಳ್ಳಿ, ಬಿದಿರು, ಬೆತ್ತಗಳಿಂದ ಸುಂದರವಾಗಿ ನೆಯ್ದು ತಯಾರಿಸುತ್ತಾರೆ. ಆ ದಿನ ಮೊದಲು ತೊಟ್ಟಿಲಿನ ಮೇಲ್ಭಾಗ, ತೊಟ್ಟಿಲಿನ ಹಗ್ಗ ಮತ್ತು ಮನೆಯ ಸುತ್ತಲೂ ಔಷಧೀಯ ಸಸ್ಯವಾದ ಚೆನ್ನೆ ಬಳ್ಳಿ (ಚೆನ್ನೆರ ಬಿಳಲು, ಚೆನರಾ ಬಳ್ಳಿ)ಯನ್ನು ಕಟ್ಟಲಾಗುತ್ತದೆ. ಬಳಿಕ ಬಾಣಂತಿಯನ್ನು ಮೊದಲು 5 ರಿಂದ 7 ಹೆಂಗಸರು ಬಚ್ಚಲು ಮನೆಗೆ ಕರೆತಂದು ಸ್ನಾನ ಮಾಡಿಸುತ್ತಾರೆ. ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗದಲ್ಲಿ ತೊಟ್ಟಿಲಿಗೆ ಹಾಕುವ ದಿನವೇ ಸಾಮಾನ್ಯವಾಗಿ 40 ನೇ ಸ್ನಾನ ಮಾಡಿಸುವ ಕ್ರಮವಿದೆ. ಮಗುವನ್ನು ತೊಟ್ಟಿಲಿಗೆ ಹಾಕುವ ಮೊದಲು 5 ರಿಂದ 7 ಹೆಂಗಸರು 40 ಕೊಡಪಾನ ನೀರನ್ನು ಬಾಣಂತಿ ಮೇಲೆ ಹೊಯ್ಯುತ್ತಾರೆ. ಒಂದು ವೇಳೆ ಹೆಂಗಸರ ಸಂಖ್ಯೆ ಕಡಿಮೆಯಿದ್ದರೆ ಬಿದಿರು ಅಥವಾ ಬೆತ್ತದಿಂದ ಮಾಡಿದ ತುಳುವಿನಲ್ಲಿ "ಕಂಚಿತಡ್ಪೆ" ಎಂದು ಕರೆಯಲಾಗುವ ಸಣ್ಣ ಬುಟ್ಟಿಯೊಳಗೆ ನೀರನ್ನು ಹಾಕಿ ಬಾಣಂತಿಯ ತಲೆಯ ಮೇಲೆ ಹಿಡಿದು ನೀರನ್ನು ಬಾಣಂತಿಯ

ಮೇಲೆ ಸುರಿಯಲಾಗುತ್ತದೆ. ಇದರಲ್ಲೂ ಹೆಣ್ಣು ಮಗುವಾದರೆ, 39ನೇ ದಿವಸದಲ್ಲಿ, ಗಂಡು ಮಗುವಾದರೆ 40 ನೇ ದಿವಸದಲ್ಲೂ ಈ ಕ್ರಮವನ್ನು ಮಾಡಲಾಗುತ್ತದೆ. ನಂತರ ಮಗುವನ್ನು ಸ್ನಾನ ಮಾಡಿಸಿ ಬಾಣಂತಿಯನ್ನು ಸಿಂಗರಿಸುತ್ತಾರೆ. ಅಷ್ಟರೊಳಗೆ ಮಾಡಿನ ಪಕ್ಕಾಸು ಅಥವಾ ಅಟ್ಟದ ಕಂಬಕ್ಕೆ ಕಟ್ಟಲಾಗುವ ತೊಟ್ಟಿಲಿಗೆ ಮುಂಡೋವು ಗರಿ (ತುಳುವಿನಲ್ಲಿ ಇದನ್ನು ಮುಂಡೋವುದ ಒಲಿ ಎಂದು ಕರೆಯಲಾಗುತ್ತದೆ.) ಯಿಂದ ತಯಾರಿಸಲಾದ ಸಣ್ಣ ಚಾಪೆ (ತಕ್ಕಣೊ) ಯನ್ನು ಹಾಸಿ ಅದರ ಮೇಲೆ ಮಗುವಿನ ತಲೆ ಆಚೀಚೆ ಹೊರಳಾಡದಂತೆ ಮಾಡಿದ ಮೆತ್ತನೆ ಬಟ್ಟೆಯ ತಲೆಶಿಂಬೆಯನ್ನಿಟ್ಟು ಅದರ ಮೇಲೆ ಮೆತ್ತನೆಯ ಬಟ್ಟೆ ಹಾಸಿ ತೊಟ್ಟಲಿಗೆ ಧೂಪದ ಹೊಗೆ ಇಟ್ಟು ಪಂಚಗವ್ಯ (ತೀರ್ಥ) ಸಿಂಪಡಿಸುತ್ತಾರೆ. ಅದೇ ರೀತಿ ಸೋದರ ಮಾವ ಅಥವಾ ಮಾಗಣೆ ಗುರಿಕಾರ ಬಾಣಂತಿ ಮತ್ತು ಮಗುವಿಗೂ ತೀರ್ಥವನ್ನು ಸಿಂಪಡಿಸಿ ಕುಡಿಯಲು ಕೊಡುತ್ತಾನೆ. ನಂತರ ಸೇರಿದ ನೆಂಟರಿಷ್ಟರೆಲ್ಲರಿಗೂ ತೀರ್ಥಕೊಟ್ಟು ಮನೆಯ ಸುತ್ತಲೂ ಸಿಂಪಡಿಸಿ ಶುದ್ಧಗೊಳಿಸಲಾಗುತ್ತದೆ.

ನಂತರ 5 ರಿಂದ 7 ಜನ ಹೆಂಗಸರು ಬಾಣಂತಿಯ ಜೊತೆ ಆ ದಿನ ಮಾಡಿದ ವಿಶೇಷ ಅಡುಗೆಯನ್ನು ಬಾಳೆ ಎಲೆಗೆ ಹಾಕಿ ಗಂಧ ಮತ್ತು ದೀಪದೊಂದಿಗೆ ಬಚ್ಚಲು ಕೋಣೆಗೆ ಬರುತ್ತಾರೆ. ನಂತರ ಬಿಸಿನೀರು ಕಾಯಿಸುವ ಪಾತ್ರೆಗೆ ತೀರ್ಥವನ್ನು ಸಿಂಪಡಿಸಿ ಅದರ ಮುಂದೆ ಬಾಳೆ ಎಲೆಯಲ್ಲಿ ಬಡಿಸಿದ್ದ ಆಹಾರವನ್ನಿಟ್ಟು ಹಣತೆ ದೀಪವನ್ನು ಉರಿಸಿ ಬಿಸಿನೀರ ಪಾತ್ರೆಗೆ ಗಂಧ ಬಳಿದು ಬಾಣಂತಿ ಸಹಿತ ಹೆಂಗಸರೆಲ್ಲರೂ ಅಕ್ಕಿಯನ್ನು ಬಿಸಿನೀರ ಪಾತ್ರೆಯೊಳಕ್ಕೆ ಹಾಕಿ ಕೈ ಮುಗಿದು ಬರುತ್ತಾರೆ. ಬಾಣಂತಿ ಮತ್ತು ಮಗುವನ್ನು ಸ್ನಾನ ಮಾಡಿಸಲು ಉಪಯೋಗಿಸಿದ ಬಿಸಿನೀರ ಪಾತ್ರೆಯನ್ನು ಪೂಜಿಸುವುದು ಈ ಕ್ರಮದ ಉದ್ದೇಶವಾಗಿದೆ. ಇದಾದ ನಂತರ ಶುದ್ಧ ಮಾಡಲ್ಪಟ್ಟ ತೊಟ್ಟಲಿಗೆ ಹಿರಿಯ ಅಜ್ಜಿಯಂದಿರು, ಹೆಂಗಸರು ಮಗುವಿನ ಸಹಿತ ಮೂರು ಸುತ್ತು ಬಂದು ಪೂರ್ವ ಭಾಗಕ್ಕೆ ತಲೆ ಇರುವಂತೆ ಮಗುವನ್ನು ಮಲಗಿಸಿದಾಗ ಗುರಿಕಾರ ಅಥವಾ ಮಗುವಿನ ಅಜ್ಜ ಮಗುವಿನ ಸೊಂಟಕ್ಕೆ ಪಟ್ಟೆ ನೂಲು ಅಥವಾ ಬೆಳ್ಳಿಯ ನೂಲನ್ನು ಕಟ್ಟುತ್ತಾನೆ. ಬಳಿಕ ತಾಯಿ ಮಗುವಿನ ಹೆಸರನ್ನು ಹೇಳುತ್ತಾಳೆ. ಆಗಲೇ ಸೇರಿದ್ದ ಹೆಂಗಸರು ಜೋಗುಳ ಹಾಡುತ್ತಾರೆ. ಆಗ ಮಗುವಿನ ತಂದೆ ಬಾಣಂತಿ ಸಾಕಿದ ಅತ್ತೆಯ ಪಾದ ಮುಟ್ಟಿ ನಮಸ್ಕರಿಸಿ ಉಡುಗೊರೆ ನೀಡುತ್ತಾನೆ. ಆಗ ಬಂದಿದ್ದ ನೆಂಟರಿಷ್ಟರೂ ಸಹಾ ಮಗುವಿನ ಕೈಯಲ್ಲಿ ಹಣ ಅಥವಾ ಉಡುಗೊರೆಗಳನ್ನು ನೀಡುತ್ತಾರೆ. ಬಳಿಕ ದೈವಗಳಿಗೆ ಅಗೇಲು ಬಡಿಸಿ ಮಗು ಮತ್ತು ಬಾಣಂತಿಯ ಆರೋಗ್ಯವನ್ನು ಕಾಪಡಬೇಕೆಂದು ಪ್ರಾರ್ಥಿಸಿ ಆ ದಿನ ವಿಶೇಷವಾಗಿ ಮಾಡಿದ ಅಡುಗೆಯನ್ನು ನೆಂಟರಿಷ್ಟರಿಗೆ ಬಡಿಸುತ್ತಾರೆ. ಮಗು ಜನಿಸಿದ ದಿವಸದಿಂದ ಮಗುವನ್ನು ತೊಟ್ಟಿಲಿಗೆ ಹಾಕುವವರೆಗೆ ಬಾಣಂತಿ ತಲೆ ಬಾಚುವುದಾಗಲೀ, ಹೂಮುಡಿಯುವುದಾಗಲೀ, ಹಣೆಗೆ ಕುಂಕುಮವಿಟ್ಟುಕೊಳ್ಳುವುದಾಗಲೀ ಯಾವುದಕ್ಕೂ ನಿಷೇಧವಿರುತ್ತದೆ. ಹೀಗಾಗಿ ಮಗುವನ್ನು ತೊಟ್ಟಿಲಿಗೆ ಹಾಕುವ ದಿವಸವೇ ಈಕೆ ತಲೆಗೆ ಎಣ್ಣೆ ಹಚ್ಚಿ, ತಲೆಬಾಚಿ, ಹೂ ಮುಡಿದು, ಕುಂಕುಮ ಹಚ್ಚಿ ಶೃಂಗಾರಗೊಳ್ಳುವುದರಿಂದ ತೊಟ್ಟಿಲಿಗೆ ಹಾಕುವ ಶಾಸ್ತ್ರಕ್ಕೆ ಹೆಚ್ಚಿನ ಮಹತ್ವವಿದೆ.

ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಲ್ಲಿ ಸಾಮಾನ್ಯವಾಗಿ ಮಗುವನ್ನು ತೊಟ್ಟಿಲಿಗೆ ಹಾಕುವ ದಿನದಂದೇ ಮಗುವಿಗೆ ಅನ್ನ ಕೊಡುವ ಕ್ರಮವನ್ನು ಮಾಡುತ್ತಾರೆ. ಮಗುವಿನ ಅನ್ನ ಪ್ರಾಶನದ ದಿನ ಮಗುವಿಗೆ ಕುಟುಂಬದ ಹಿರಿಯರು ಅಥವಾ ಮಗುವಿನ ಅಜ್ಜ ಅಥವಾ ಅಜ್ಜಿ ಅನ್ನವನ್ನೂ ತಿನ್ನಿಸುವ ಕ್ರಮವಿದೆ ಅಥವಾ ನೆಂಟರಿಷ್ಟರು ಎಲ್ಲರೂ ಊಟಕ್ಕೆ ಕುಳಿತಾಗ ತಾಯಿ ಮಗುವನ್ನೆತ್ತಿಕೊಂಡು ಊಟಕ್ಕೆ ಕುಳಿತವರ ಬಳಿಗೆ ಬರುತ್ತಾಳೆ. ಆಗ ಊಟಕ್ಕೆ

ಕುಳಿತವರೆಲ್ಲರೂ ಆ ಮಗುವಿಗೆ ಒಂದೊಂದು ಅನ್ನದ ಅಗುಳನ್ನು ಕಿವುಚಿ ಮಗುವಿನ ಬಾಯಿಯೊಳಗೆ ಅಥವಾ ಪಾಯಸವನ್ನು ತಿನ್ನಿಸುತ್ತಾರೆ.

**೩.೫ ಕಜಂಬು ಮದುವೆ (ಕಿವಿ ಚುಚ್ಚುವ ಶಾಸ್ತ್ರ)**

ತುಳುವಿನಲ್ಲಿ "ಕಜಂಬು" ಎಂದರೆ ಗಂಡು ಮಗವಿಗೆ ಮೊದಲ ಬಾರಿ ಕೂದಲು ಕತ್ತರಿಸಿ ಮದುಮಗನಂತೆ ಸಿಂಗರಿಸಿ ಶಾಸ್ತ್ರೋಕ್ತ ವಿಧಿ – ವಿಧಾನಗಳ ಮೂಲಕ ಸ್ನಾನ ಮಾಡಿಸಿ ಕಿವಿ ಚುಚ್ಚುವ ಕ್ರಮವಾಗಿದೆ. ಬ್ರಾಹ್ಮಣ, ವಿಶ್ವಕರ್ಮದಲ್ಲಿ ಗಂಡು ಮಗುವಿಗೆ ಮೊದಲು ಜನಿವಾರ ತೊಡಿಸುವ ಕ್ರಮವಿದೆ. ತುಳುವಿನಲ್ಲಿ ಇದನ್ನು "ನೂಲ ಮದಿಮೆ" ಅಥವಾ ಉಪನಯನ ಎಂದು ಕರೆಯಲಾಗುತ್ತದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯವರು ದೈವಗಳಿಗೆ ನೇಮ ಕೋಲಗಳನ್ನು ನಡೆಸಬೇಕಾದ್ದರಿಂದ ಬ್ರಾಹ್ಮಣ, ವಿಶ್ವಕರ್ಮದಲ್ಲಿ ಉಪನಯನವಿದ್ದಂತೆ ಪ್ರಾಚೀನಕಾಲದಿಂದಲೂ ಈ ಸಮುದಾಯದವರಲ್ಲಿ ಕಜಂಬು ಮದುವೆಗೆ ಬಹಳಷ್ಟು ಮಹತ್ವವಿದೆ. ಪ್ರಾಚೀನ ಕಾಲದಲ್ಲಿ ಕಜಂಬು ಮದುವೆಯಾಗದಿದ್ದವರು ಗ್ರಾಮ ದೈವದ ನೇಮವನ್ನು ಕೈಗೊಳ್ಳಬಾರದೆಂಬ ಕಡ್ಡಾಯ ನಿಯಮವೂ ಇತ್ತು.

ಗಂಡು ಮಗುವಿಗೆ 7 ವರ್ಷವಾಗುವಷ್ಟರಲ್ಲಿ ಕಜಂಬು ಮದುವೆಗೆ ದಿನ ನಿಶ್ಚಯ ಮಾಡಿ ಸಂಬಂಧಿಕರು, ನೆಂಟರಿಷ್ಟರಿಗೆ ತಿಳಿಯಪಡಿಸುತ್ತಾರೆ. ಆ ದಿನ ನೆಂಟರಿಷ್ಟರ ಸೇರಿಕೆಯಲ್ಲಿ ಮಗುವಿನ ಸೋದರ ಮಾವ ಅಥವಾ ಕುಟುಂಬದ ಮಾಗಣೆ ಗುರಿಕಾರ ಮೊದಲು ಬಾಳೆಯೆಲೆಯ ತುದಿಯಲ್ಲಿ ಅಕ್ಕಿ, ತೆಂಗಿನಕಾಯಿ, ಎಲೆಅಡಿಕೆ , ಒಂದುಕಾಲು ರೂಪಾಯಿ ಮತ್ತು ಹಣತೆಯನ್ನು ತುಳಸೀಕಟ್ಟೆಯ ಮುಂದೆ ಇಡಲಾಗುತ್ತದೆ. ಇದನ್ನು ಗಣಪತಿ ಸ್ತುತಿಗೆ ಎಂದು ಕರೆಯುತ್ತಾರೆ. ನಂತರ ಕಜಂಬು ಮದುವೆಯಾಗುವ ಮಗುವನ್ನು ಮುಂದೆ ನಿಲ್ಲಿಸಿ ಮೊದಲು ಗಣಪತಿದೇವರಿಗೆ ಕೈಮುಗಿದು ಬಳಿಕ ತಮ್ಮ ಕುಲ ದೈವಗಳಿಗೆ ಕೈ ಮುಗಿದು ಕಜಂಬು ಶಾಸ್ತ್ರಕ್ಕೆ ಅನುಗ್ರಹ ಬೇಡುತ್ತಾರೆ. ನಂತರ ಮಗುವನ್ನು ಹಿರಿಯರ ಪಾದ ಹಿಡಿಸಿ ಆಶೀರ್ವಾದ ಪಡೆಯಿಸಿಕೊಂಡು ಸೋದರಮಾವ ಅಥವಾ ಮಾಗಣೆಗುರಿಕಾರ ಮಣೆಯ ಮೇಲೆ ಮಗುವನ್ನು ಕುಳ್ಳಿರಿಸಿ ಶಾಸ್ತ್ರೋಕ್ತವಾಗಿ ಮಗುವಿನ ತಲೆ ಕೂದಲು ಮತ್ತು ಕೆನ್ನೆಯ ಮೇಲೆ ಮುಟ್ಟಿಸಿ ಬಳಿಕ, ಸ್ನಾನ ಮಾಡಿಸಿ ನಂತರ ಮತ್ತೆ ಮಣೆಯ ಮೇಲೆ ಕೂರಿಸಿ ಎರಡೂ ಕಿವಿಗಳಿಗೆ ಗಂಧದಿಂದ ಗುರುತು ಮಾಡಿಕೊಂಡು, ಗುರುತು ಮಾಡಲ್ಪಟ್ಟ ಕಿವಿಯ ಭಾಗಕ್ಕೆ ಕಾಡಿನಲ್ಲಿ ಸಿಗುವ "ಕಾಟ್‌ಕಾರೆ" ಅಥವಾ "ಮಡಕ್ಕಾರೆ" ಎಂಬ ಗಿಡದ ಮುಳ್ಳಿನಿಂದ ಚುಚ್ಚುತ್ತಾರೆ. ನಂತರ ಆ ಭಾಗಕ್ಕೆ ನುಣುಪಾದ ಗಿಡದ ಒಣಗಿದ ತಿರುಳನ್ನು ಕಡ್ಡಿಯಂತೆ ಮಾಡಿ ಇಟ್ಟು ಗಂಧವನ್ನು ಹಚ್ಚುತ್ತಾರೆ. ಅಥವಾ ಬೆಳ್ಳಿ ಅಥವಾ ಬಂಗಾರದ ಆಭರಣವನ್ನಿಡುತ್ತಾರೆ. ಹಿಂದೆಲ್ಲಾ ಈ ರೀತಿಯ ಕ್ರಮಗಳನ್ನು ಅನುಸರಿಸುತ್ತಿದ್ದರೆ, ಈಗ ಕಬ್ಬಿಣದ ಚೂಪಾದ ಸೂಜಿ ಅಥವಾ ಕಬ್ಬಿಣದ ಮುಳ್ಳಿನಿಂದ ಚುಚ್ಚುತ್ತಾರೆ. ನಂತರ ಮಗುವನ್ನು ಮಣೆಯಿಂದ ಎಬ್ಬಿಸಿ ಸೇರಿದ್ದ ನೆಂಟರಿಷ್ಟರನ್ನು ಊಟ ಉಪಚಾರಗಳಿಂದ ಸತ್ಕರಿಸುತ್ತಾರೆ.

**೩.೬ ಋತುಮತಿ ಶಾಸ್ತ್ರ :**

ಹದಿಹರೆಯದಲ್ಲಿ ಹೆಣ್ಣು ಮಕ್ಕಳು ಮೊದಲ ಬಾರಿಗೆ ಋತುಮತಿಯಾಗುವುದಕ್ಕೆ ತುಳುನಾಡಿನಲ್ಲಿ ಬಹಳ ಮಹತ್ವವಿದೆ. ತುಳುವಿನಲ್ಲಿ ಇದನ್ನು "ಮದಿಮಲಾಯಿ ಮದಿಮೆ" ಎಂದು ಕರೆಯುತ್ತಾರೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಪ್ರಾಚೀನ ಕಾಲದಲ್ಲಿ ಹೆಣ್ಣು ಮಕ್ಕಳು ಮೊದಲು ಋತುಮತಿಯಾಗುವುದನ್ನು "ಮುಳ್ಳುಮೊಟ್ಟೆ ಮದಿಮೆ", "ಮುದರೊಟ್ಟೆ ಮದಿಮೆ" ಎಂದೇ ಕರೆಯುತ್ತಿದ್ದರು.

ಬಾಲಕಿಯಾಗಿದ್ದ ಹೆಣ್ಣು ಮಗು ಮೊದಲ ಬಾರಿಗೆ ಋತುಮತಿಯಾಗಿ ಹೆಣ್ಣಿನ ಸ್ಥಾನಮಾನವನ್ನು ಪಡೆಯುವ ಹಂತ ಇದಾಗಿರುವುದರಿಂದ ತುಳುನಾಡಿನಲ್ಲಿ ಮೊದಲು ಋತುಮಾತಿಯಾದ ಹೆಣ್ಣು ಮಕ್ಕಳನ್ನು ಶಾಸ್ತ್ರೋಕ್ತ ವಿಧಿ – ವಿಧಾನಗಳ ಮೂಲಕ ಶುದ್ಧಾಚಾರಗೊಳಿಸುವ ಕ್ರಮವನ್ನು ಸಾಂಪ್ರದಾಯಿಕವಾಗಿ ಅನುಸರಿಸಲಾಗುತ್ತಿದೆ. ಪ್ರಾಚೀನ ಕಾಲದಲ್ಲಿ ತುಳುನಾಡಿನಲ್ಲಿ ಹೆಣ್ಣು ಮಕ್ಕಳಿಗೆ ಬಾಲ್ಯವಿವಾಹ ಪದ್ಧತಿ ರೂಢಿಯಲ್ಲಿತ್ತು ಈ ಪದ್ಧತಿಯ ಪ್ರಕಾರ ಆಯಾ ಸಮುದಾಯಗಳಲ್ಲಿ ತೊಟ್ಟಿಲಿನಲ್ಲಿರುವ ಹೆಣ್ಣು ಮತ್ತು ಗಂಡು ಮಗುವಿಗೇ ಮದುವೆ ಮಾಡಿಸುತ್ತಿದ್ದರು.

ಹೆಣ್ಣು ಮಗುವನ್ನು ತೊಟ್ಟಿಲಿಗೆ ಹಾಕುವ ದಿನ ಆ ಹೆಣ್ಣು ಮಗುವಿನ ಸೋದರ ಮಾವನಿಗೆ ಗಂಡು ಮಗುವಿದ್ದರೆ ಅಥವಾ ಸಂಬಂಧಿಕರೊಳಗೆ ಗಂಡು ಮಗು ಹುಟ್ಟಿದ್ದ ಮನೆಯವರು ತೊಟ್ಟಿಲಿನಲ್ಲಿರುವ ಹೆಣ್ಣುಮಗುವಿನ ತಂದೆ – ತಾಯಿಗಳಿಗೆ ಎಲ್ಲರ ಸಮ್ಮುಖದಲ್ಲಿ ಸೀರೆ, ವೀಳ್ಯ, ಕೊಟ್ಟು ತಮ್ಮ ಗಂಡು ಮಗುವಿಗೆ ಆ ಹೆಣ್ಣು ಮಗುವನ್ನು ಕೊಡುವಂತೆ ನಿಗದಿ ಪಡಿಸುವ ಕ್ರಮವಿತ್ತು. ಕೆಲವು ಸಮಯಗಳ ನಂತರ ಅಂದರೆ ಆ ಹೆಣ್ಣು ಮಗು ಋತುಮತಿಯಾಗುವ ಮೊದಲು ನಿಗದಿಯಾದ ಬಾಲಕನಿಗೆ ಮದುವೆ ಮಾಡಿಸುವ ಕ್ರಮವಿತ್ತು. ಆದರೆ ಆ ಹೆಣ್ಣು ಋತುಮತಿಯಾಗುವವರೆಗೆ ಆಕೆಯ ತಾಯಿಯ ಮನೆಯಲ್ಲೇ ಇರಬಹುದಾಗಿತ್ತಲ್ಲದೆ ಋತುಮತಿಯಾದ ನಂತರ ಗಂಡನ ಮನೆಗೆ ಬರುವ ಕ್ರಮವಿತ್ತು. ಅಥವಾ ಒಂದು ವೇಳೆ ಋತುಮತಿಯಾಗುವ ಮೊದಲೇ ಮದುವೆಯಾಗಿ ಗಂಡನ ಮನೆಯಲ್ಲಿದ್ದರೂ ಋತುಮತಿಯಾದ ಬಳಿಕವಷ್ಟೇ ಆಕೆ ಗಂಡನ ಜೊತೆ ಸಂಪರ್ಕ ಹೊಂದಬೇಕೆಂಬ ನಿಯಮವಿತ್ತು. ಹೀಗಾಗಿ ಆಗಿನ ಕಾಲದಲ್ಲಿ ಹೆಣ್ಣು ಋತುಮತಿಯಾಗುವುದಕ್ಕೆ ಮತ್ತು ಋತುಮತಿ ಆದ ಬಳಿಕ ನಡೆಸುವ ಶಾಸ್ತ್ರಬದ್ಧ ಋತುಶಾಂತಿಗೆ ಅಷ್ಟು ಪ್ರಾಮುಖ್ಯತೆ ಬರಲು ಇದುವೇ ಪ್ರಮುಖ ಕಾರಣವಾಗಿತ್ತು.

**೩.೬.೧ ಋತುಮತಿ ಶಾಸ್ತ್ರದ ವಿಧಿ ವಿಧಾನ**

ಹೆಣ್ಣು ಋತುಮತಿಯಾದ ವಿಚಾರ ತಿಳಿದು ಆಕೆಯನ್ನು ಮನೆಯಿಂದ ಹೊರಗೆ ಯಾರಿಗೂ ಕಾಣಿಸದಂತೆ ಕೊಟ್ಟಿಗೆ, ಬಚ್ಚಲು ಮನೆಯ ಬದಿಯಲ್ಲಿ, ಅಥವಾ ಮನೆಯ ಹತ್ತಿರದ ಮರದ ಬುಡದಲ್ಲಿ ತಾತ್ಕಾಲಿಕವಾಗಿ ಜೋಪಡಿಯಲ್ಲಿ ಕುಳ್ಳಿರಿಸಿ ನಂತರ ಸೋದರ ಮಾವ, ಮಾಗಣೆ ಗುರಿಕಾರ, ಮತ್ತು ಸ್ಥಳೀಯ ಸಂಬಂಧಿಗಳಿಗೆ ಸುದ್ದಿ ಮುಟ್ಟಿಸಲಾಗುತ್ತದೆ. ನಂತರ ಮನೆಯ ಮುಂದೆ ವೃತ್ತಕಾರದಲ್ಲಿ ಅಥವಾ ಚೌಕಕಾರವಾಗಿ ಸೆಗಣಿ ಸಾರಿಸಿ 5 ಅಥವಾ 7 ತೆಂಗಿನಗರಿಯನ್ನು ವೃತ್ತಕಾರವಾಗಿ ಸುತ್ತಿ ಅದರ ಮೇಲೆ 5 ಅಥವಾ 7 ಕಲಶವಿಟ್ಟು ನಾಲ್ಕು ಅಥವಾ ಎರಡು ತೆಂಗಿನಕಾಯಿಯ ನಾರನ್ನು ಒಂದಕ್ಕೊಂದು ಗಂಟು ಹಾಕಿ ಸೆಗಣಿ ಸಾರಿಸಿದ ನೆಲದ ಮಧ್ಯದಲ್ಲಿಡುತ್ತಾರೆ. ಅಥವಾ ಒನಕೆಯನ್ನು ಇಡುತ್ತಾರೆ. ನಂತರ ಗಂಟು ಹಾಕಲ್ಪಟ್ಟ ತೆಂಗಿನಕಾಯಿ ಅಥವಾ ಒನಕೆಯ ಮೇಲೆ ಋತುಮತಿಯಾದ ಹುಡುಗಿಯನ್ನು ಕುಳ್ಳಿರಿಸಲಾಗುತ್ತದೆ. ಆಗ ಬಂದಿದ್ದ ಸಂಬಂಧಿಕರ ಪೈಕಿ 5 ಅಥವಾ 7 ಜನ ಬೇರೆ ಬೇರೆ ಗೋತ್ರದ (ಬರಿಯ) ಮುತ್ತೈದೆ ಹೆಂಗಸರು ಆ ಹುಡುಗಿಯ ತಲೆಯ ಮೇಲೆ ವೀಳ್ಯದೆಲೆ ತುದಿಯಿಂದ ಅಥವಾ ಗರಿಕೆ ಹುಲ್ಲಿನಿಂದ ತೆಂಗಿನ ಕಾಯಿಯ ಹಾಲು, ಎಣ್ಣೆ. ಸೀಗೆ, ಅರಸಿನ ಹಾಕಿ ಕಲಶದ ನೀರನ್ನು ಎರೆಯುತ್ತಾರೆ. ಇದನ್ನು ತುಳುವಿನಲ್ಲಿ "ಪಿಲೆ ಕಳೆಪುನು" (ಪಿಲೆಕಳೆಯುವುದು) ಎನ್ನುತ್ತಾರೆ. ಬಳಿಕ ಸ್ನಾನ ಮಾಡಿಸಿ ಮನೆಯ ಹೊರಗೆಯೇ (ಪ್ರತ್ಯೇಕಸ್ಥಳದಲ್ಲಿ) ಮೂರು ದಿವಸ ಕುಳ್ಳಿರಿಸುತ್ತಾರೆ.

ಇದರ ನಂತರ ಮೂರನೇ ದಿವಸ ಮಣ್ಣಿನ ಮಡಕೆ ಹಿಡಿಸುವ ಅದೇ ರೀತಿ ತೆಂಗಿನ ಮರ ಮತ್ತು ಹಲಸಿನ ಮರ ಹೀಗೆ ಒಟ್ಟು 3 ಅಥವಾ 5 ಮರಗಳನ್ನು ಹಿಡಿಸುವ ಶಾಸ್ತ್ರವಿದೆ. ಹೀಗಾಗಿ ತುಳುವಿನಲ್ಲಿ ಇದನ್ನು "ಕರಪತ್ತವುನು" (ಮಣ್ಣಿನ

ಮಡಕೆ ಹಿಡಿಸುವ ಶಾಸ್ತ್ರ) ಎಂದು ಕರೆಯಲಾಗುತ್ತಿದೆ. ಆ ದಿನ ಬೆಳಗ್ಗೆ ಹಿಂದಿನ ರಾತ್ರಿ ಮೆಂತೆ ಹಾಗೂ ಬೆಳ್ತಿಗೆ ಅಕ್ಕಿ ಮತ್ತು ತೆಂಗಿನಕಾಯಿಯನ್ನು ಅರೆದು ಮಾಡಿದ್ದ "ಮೆಂತೆಯ ಮಣ್ಣಿ" ಯನ್ನು ಋತುಮತಿಯಾದ ಹೆಣ್ಣಿಗೆ ಚಹಾದ ಜೊತೆ ಉಪಹಾರವಾಗಿ ಬರಿಹೊಟ್ಟೆಗೆ ಕೊಡಲಾಗುತ್ತದೆ. ಬಳಿಕ ನೆಂಟರಿಷ್ಟರು ಸೇರಿದ ಬಳಿಕ ಋತುಮತಿಯಾದ ಹೆಣ್ಣನ್ನು ಸೆಗಣಿಯಿಂದ ಸಾರಿಸಲಾದ ಅಂಗಳದಲ್ಲಿ ಒನಕೆ ಅಥವಾ ನಾರೆಬ್ಬಿಸಿ ಒಂದಕ್ಕೊಂದು ಕಟ್ಟಿದ ತೆಂಗಿನಕಾಯಿಯ ಮೇಲೆ ಕುಳ್ಳಿರಿಸಿ ಬೇರೆ ಬೇರೆ ಗೋತ್ರದ (ಬರಿಯ) 5 ಅಥವಾ 7 ಜನ ಮುತ್ತೈದೆಯರು ಆಕೆಯ ತಲೆಗೆ ಎಣ್ಣೆ, ಸೀಗೆ, ತೆಂಗಿನ ಅಥವಾ ದನದ ಹಾಲನ್ನು ಗರಿಕೆ ಅಥವಾ ವೀಳ್ಯದೆಲೆಯಿಂದ ಹಾಕಿ ಕಲಶದಲ್ಲಿ ನೀರೆಯುತ್ತಾರೆ. ನಂತರ ಈಕೆಯನ್ನು ಎಬ್ಬಿಸಿ ಬಲ ಕಾಲು ಮೊದಲಿಟ್ಟು ಸೆಗಣಿ ಸಾರಿಸಿದ್ದ ಅಂಗಳದಲ್ಲಿ ಕಲಶ, ಎಲೆಅಡಿಕೆ, ಅಕ್ಕಿ, ತೆಂಗಿನಕಾಯಿ, ದೀಪಗಳಿರುವ ಮಂಡಲದ ಸುತ್ತ ಪ್ರದಕ್ಷಿಣೆ ಹಾಕಿಸಿ ಸ್ನಾನಕ್ಕೆ ಕರೆದೊಯ್ಯಲಾಗುತ್ತದೆ. ಸ್ನಾನದ ನಂತರ ಹೊಸ ಬಟ್ಟೆ ತೊಡಸಿ ಫಲವಸ್ತುಗಳನ್ನು ಕೊಡುವ ಮರಗಳಿಗೆ ಸುತ್ತು ಬರಿಸಿ ಮರಗಳನ್ನು ಮುಟ್ಟಿಸಿ ನಮಸ್ಕಾರ ಮಾಡಿಸುತ್ತಾರೆ. ಬಳಿಕ ಈಕೆಯನ್ನು ಮನೆಯೊಳಗೆ ಕರೆತಂದು ಮಣ್ಣಿನ ಪಾತ್ರೆಗಳನ್ನು ಮುಟ್ಟಿಸಿ, ದೇವರಿಗೆ ನಮಸ್ಕರಿಸಿ ದೈವಗಳ ಚಾವಡಿ ಅಥವಾ ಸಾನದಲ್ಲಿ ಗುರು ಹಿರಿಯರಿಗೆ ಎಲೆ ಅಡಿಕೆ ಇಡಿಸಿ, ಕೈ ಮುಗಿಸಿ ಮನೆಯೊಳಗೆ ಚಾಪೆಯಲ್ಲಿ ಕುಳ್ಳಿರಿಸಿ ಅರಸಿನ ಮಿಶ್ರಿತ ಕುರ್ದಿ ನೀರಿನಿಂದ ದೃಷ್ಟಿ ತೆಗೆದು ಆರತಿ ಮಾಡಲಾಗುತ್ತದೆ. ಅಷ್ಟರಲ್ಲಿ ನೆಂಟರಿಷ್ಟರೆಲ್ಲ ಈಕೆಗೆ ಉಡುಗೊರೆ, ಹಣ ಇತ್ಯಾದಿಗಳನ್ನು ನೀಡುತ್ತಾರೆ. ಬಳಿಕ ಸೇರಿದವರಿಗೆ ಊಟವಾಗುತ್ತದೆ ಕೊನೆಗೆ ಈ ಹೆಣ್ಣು ಎಲ್ಲ ಹಿರಿಯರ ಪಾದ ಹಿಡಿದು ಆಶೀರ್ವಾದ ಪಡಕೊಂಡ ನಂತರ ಈಕೆಯನ್ನು ಸೋದರ ಮಾವ ತನ್ನ ಮನೆಗೆ ಔತಣಕ್ಕಾಗಿ ಕರೆದೊಯ್ಯುತ್ತಾನೆ. ಅಲ್ಲಿ ಔತಣ ಮುಗಿಸಿ ಈಕೆಯನ್ನು ಮರಳಿ ಆಕೆಯ ಮನೆಗೆ ಸೋದರ ಮಾವನೇ ಕರೆದುಕೊಂಡು ಬರುತ್ತಾನೆ. ಬಳಿಕ ಮನೆಯವರು ದೇವಸ್ಥಾನ, ದೈವಸ್ಥಾನಗಳಿಗೆ ಕರೆದುಕೊಂಡು ಹೋಗುತ್ತಾರೆ.

ಪ್ರಾಚೀನ ಕಾಲದಲ್ಲಿ ಹೆಣ್ಣಿಗೆ ಋತುಮತಿಯಾಗುವ ಮೊದಲೇ ಮದುವೆ ಮಾಡಿಸುತ್ತಿದ್ದರು. ಆದರೆ ಈಕೆ ಋತುಮತಿಯಾದ ಬಳಿಕವಷ್ಟೇ ಗಂಡನ ಜೊತೆ ಸಂಪರ್ಕ ಹೊಂದಲು ಬಿಡುತ್ತಿದ್ದರು. ಹೆಣ್ಣು ಋತುಮತಿಯಾಗುವುದಕ್ಕೆ ಅಷ್ಟು ಪ್ರಾಧ್ಯಾನ್ಯತೆ ಬರಲು ಇದುವೇ ಪ್ರಮುಖ ಕಾರಣವಾಗಿದೆ. ಇದೇ ರೀತಿ ಹೆಣ್ಣು ಋತುಮತಿಯಾಗುವುದೆಂದರೆ ಹೆಣ್ಣು ಫಲಿತತೆಗೆ ಪಕ್ವವಾದಳೆಂಬ ಸೂಚನೆಯಾದ ಕಾರಣ ಈಕೆಗೆ ಸಾಮಾಜಿಕ ಜವಾಬ್ದಾರಿ ನೀಡಲ್ಪಡುವುದೇ ಋತುಶಾಂತಿ ಶಾಸ್ತ್ರ, ವಿಧಿ ವಿಧಾನಗಳ ಮೂಲ ಉದ್ದೇಶವಾಗಿದೆ. ಹೀಗಾಗಿ ತುಳುನಾಡಿನಲ್ಲಿ ಪ್ರತಿ ಸಮುದಾಯದಲ್ಲೂ ಋತುಶಾಂತಿ ವಿಧಿವಿಧಾನಗಳನ್ನು ಚಾಚೂ ತಪ್ಪದೆ ಮಾಡಲಾಗುತ್ತದೆ. ಒಂದು ವೇಳೆ ಋತುಮತಿಯಾದ ಬಳಿಕ ಅನಿವಾರ್ಯವಾಗಿ ತಲೆಗೆ ನೀರು ಹೊಯ್ದು ಶುದ್ಧಾಚಾರ (ಋತುಶಾಂತಿ) ಮಾತ್ರ ಮಾಡಿಸಿ ಮದುವಳಾದ ಮದುವೆ ಅಥವಾ ಮಡಿಕೆ ಹಿಡಿಸುವ ಶಾಸ್ತ್ರ (ಕರಪತ್ತವುನೆ ಶಾಸ್ತ್ರ) ಮಾಡಿಸದಿದ್ದರೆ ಆ ಹೆಣ್ಣಿನ ಮದುವೆಯ ದಿನ ಮೊದಲು ಈ ಕ್ರಮವನ್ನು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದಲ್ಲಿ ಮಾಡಲೇಬೇಕಾಗುತ್ತದೆ. ಇದನ್ನು ತುಳುವಿನಲ್ಲಿ "ಪಿಲೆಕಳೆಪುನಿ" ಎಂದು ಕರೆಯುತ್ತಾರೆ. ಈ ಕ್ರಮವನ್ನು (ಪಿಳೆಕಳೆಯುವಶಾಸ್ತ್ರವನ್ನು) ಮಾಡಿಸದಿದ್ದ ಹೆಣ್ಣಿಗೆ ಧಾರೆ ಎರೆಯುವುದು ನಿಷಿದ್ಧವಾಗಿತ್ತು ಹೀಗಾಗಿ ಈ ವಿಧಾನವನ್ನು ಈಗಲೂ ಕಡ್ಡಾಯವಾಗಿ ಅನುಸರಿಸಲಾಗುತ್ತದೆ.

**೩.೭ ವಿವಾಹ ಪದ್ಧತಿ :**

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಮೂಲ ದ್ರಾವಿಡ ಸಮುದಾಯ ಎಂಬುದು ಜಗತ್ತಿನ ಕೆಲವೇ ಕೆಲವು ದ್ರಾವಿಡ ಬುಡಕಟ್ಟು ಜನಾಂಗಗಳ ಮದುವೆಗಳಲ್ಲಿ ಮಾತ್ರವೇ ಸಂಪ್ರದಾಯ ಬದ್ಧವಾಗಿ ರೂಢಿಯಲ್ಲಿರುವ ಕೆಲವೊಂದು ಆಚರಣೆಗಳಿಂದ ತಿಳಿದು ಬರುತ್ತದೆ. ಅವುಗಳೆಂದರೆ ಹೆಣ್ಣಿಗೆ ವಧುದಕ್ಷಿಣೆ ನೀಡುವ ಕ್ರಮ, ಅದೇ ರೀತಿ ಎಲ್ಲ ಶುಭ ಕಾರ್ಯಗಳಿಗೆ ಸಕಲ ಔಷಧಿಯ ಗುಣವುಳ್ಳ "ಹಾಳೆ" ಮರದ ಗೆಲ್ಲನ್ನು (ಸಪ್ತಪರ್ಣಿ ಮರ ) ಮುಂದಿಟ್ಟು ಪೂಜಿಸುವ ಕ್ರಮ, ದೈವದ ನೇಮೋತ್ಸವ (ಭೂತದ ಕೋಲ) ಸಂದರ್ಭ ಅಗತ್ಯವಾಗಿ ಇರಲೇಬೇಕಾಗಿದ್ದ ತೆಂಬರೆ (ಚೆಂಡೆಯಾಕಾರದ ಚರ್ಮ ವಾದ್ಯದ) ಯ ಮೇಲೆ ವಧು – ವರರನ್ನು ಕುಳ್ಳಿರಿಸಿ ಧಾರೆ ಎರೆಯುತ್ತಿದ್ದ ಕ್ರಮ, ವಿಶೇಷ ನುಡಿಕಟ್ಟುಗಳ ಮೂಲಕ ಶಾಸ್ತ್ರೋಕ್ತವಾಗಿ ಮತ್ತು ಅತಿ ರಂಜನೀಯವಾಗಿ ಮದುವೆಯ ವಿವಿಧ ಹಂತಗಳಲ್ಲಿ ಒಕ್ಕಣೆಗಳನ್ನು ಹೇಳುವ ಮುಂತಾದ ಕ್ರಮಗಳಾಗಿವೆ.

ಅತ್ಯಂತ ಪ್ರಾಚೀನ ಕಾಲದಲ್ಲಿ ಸ್ವಂತದ ಮನೆ – ಗುಡಿಸಲುಗಳು ಈ ಸಮುದಾಯಕ್ಕೆ ಇದ್ದಿರಲಿಲ್ಲ. ಈ ಸಮುದಾಯ ಜಮೀನ್ದಾರರ, ಶ್ರೀಮಂತರ ಜಮೀನುಗಳ ಗುಡಿಸಲುಗಳಲ್ಲೂ ಅಥವಾ ಊರ ಹೊರಗಿನ ಕಾಡಿನ ಬದಿಯಲ್ಲೋ ಗುಡಿಸಲುಗಳನ್ನು ನಿರ್ಮಿಸಿಕೊಳ್ಳುತ್ತಿದ್ದರಿಂದ ಸಾಮಾನ್ಯವಾಗಿ ಆ ಕಾಲದಲ್ಲಿ ತಮ್ಮ ಮದುವೆ, ಇನ್ನಿತ್ಯಾದಿ ಶುಭ ಕಾರ್ಯಗಳನ್ನು ಹೆಚ್ಚಾಗಿ ಬೇಸಿಗೆಯಲ್ಲೇ ವಿಶಾಲ ಮರದಡಿಗಳಲ್ಲೂ ನೆರವೇರಿಸುತ್ತಿದ್ದರಂತೆ. ಆದರೆ ಕ್ರಮೇಣ ಈ ಸಮುದಾಯಕ್ಕೆ ಅಜಲು ಭೂಮಿ, ಉಂಬಳಿ ಭೂಮಿಗಳು ಸಿಕ್ಕಿದ ಬಳಿಕ ಸ್ವಂತ ಮನೆಗಳನ್ನು ಕಟ್ಟಿಕೊಂಡು ಮದುವೆ ಇನ್ನಿತ್ಯಾದಿ ಶುಭ ಕಾರ್ಯಗಳನ್ನು ತಮ್ಮ ಮನೆಯಲ್ಲೇ ನೆರವೇರಿಸಲು ಆರಂಭಿಸಿದರು.

ಗಂಡಿನ ಕಡೆಯ ಐದು ಅಥವಾ ೭ ಜನ ಗಂಡಸರು ಮತ್ತು ಹೆಂಗಸರು ಸೇರಿ ಹೆಣ್ಣಿನ ಮನೆಗೆ ಹೆಣ್ಣು ನೋಡಲು ಹೋಗುವ ಕ್ರಮವಿದೆ. ಹೆಣ್ಣಿನ ಮನೆಗೆ ಹೋದ ಬಳಿಕ ಅಥವಾ ಹೆಣ್ಣು ನೋಡಲು ಹೋಗುವ ಮೊದಲು ಹೆಣ್ಣಿನ ಗೋತ್ರ ಅಥವಾ (ಬರಿ) ಯನ್ನು ಕೇಳಲಾಗುತ್ತದೆ. ಗಂಡಿನ ಗೋತ್ರವೂ(ಬಳಿಯೇ) ಹೆಣ್ಣಿನ ಗೋತ್ರವು (ಬಳಿ, ಬರಿ) ಆಗಿದ್ದರೆ ಒಂದೇ ಗೋತ್ರದೊಳಗೆ (ಬರಿ, ಬಳಿಯೊಳಗೆ) ಮದುವೆ ಏರ್ಪಡುವುದಿಲ್ಲ. ವಿಭಿನ್ನ ಗೋತ್ರದವರೊಳಗೆ ಮಾತ್ರವೇ ಮದುವೆ ಏರ್ಪಡುತ್ತದೆ. ಹೀಗಾಗಿ ಹೆಣ್ಣು ನೋಡಲು ಹೋದ ಮನೆಯಲ್ಲಿ ಗಂಡಿನ ಗೋತ್ರಕ್ಕಿಂತ ಹೆಣ್ಣಿನ ಗೋತ್ರ ಭಿನ್ನವೆಂದಾದಲ್ಲಿ ಗಂಡಿನ ಕಡೆಯವರಿಗೆ ಹೆಣ್ಣು ಶೃಂಗಾರವಾಗಿ ಚಹಾ, ಕಾಫಿ, ಅಥವಾ ಏನಾದರೂ ಪಾನೀಯವನ್ನು ಕೊಡುವ ಕ್ರಮವಿದೆ. ನಂತರ ಗಂಡಿನ ಕಡೆಯವರು ಬಹುದೂರದಿಂದ ಬಂದವರಾಗಿದ್ದಲ್ಲಿ ಮಧ್ಯಾಹ್ನದ ಸಮಯದಲ್ಲಿ ಹೆಣ್ಣಿನ ಮನೆಯವರು ಊಟ ಮಾಡಲು ಹೇಳಿದರೆ ಗಂಡಿಗೆ ಆ ಹೆಣ್ಣು ಒಪ್ಪಿಗೆಯೆಂದಾದಲ್ಲಿ ಹೆಣ್ಣಿನ ಮನೆಯಲ್ಲಿ ಊಟಮಾಡುತ್ತಾರೆ. ಇಲ್ಲದಿದ್ದಲ್ಲಿ ತಮ್ಮ ತೀರ್ಮಾನವನ್ನು ಮುಂದೆ ತಿಳಿಸುತ್ತೇವೆಂದು ಹೇಳಿ ಹೊರಡುತ್ತಾರೆ.

ಮುಂದೆ ಹೆಣ್ಣು ಮತ್ತು ಗಂಡಿನ ಕಡೆಯವರಿಗೆ ಪರಸ್ಪರ ಒಪ್ಪಿಗೆಯಾದಲ್ಲಿ ಕುಟುಂಬ ಮಾಗಣೆ ಗುರಿಕಾರ ಅಥವಾ ಸೋದರ ಮಾವನ ನೇತೃತ್ವದಲ್ಲಿ ನಿಶ್ಚಯಕ್ಕೆ ದಿನ ನಿಗದಿ ಮಾಡಿ ಕುಟುಂಬಸ್ಥರಿಗೆ ತಿಳಿಸಲಾಗುತ್ತದೆ. ಮದುವೆ ನಿಶ್ಚಯ ಹೆಣ್ಣಿನ ಮನೆಯಲ್ಲೇ ನಡೆಯುತ್ತದೆ. ಪ್ರಾಚೀನ ಕಾಲದಲ್ಲಿ ಮದುವೆ ನಿಶ್ಚಯ ನಡೆಯುವ ಮನೆಯ ಚಪ್ಪರದಲ್ಲಿ ಚಾಪೆಯ ಮೇಲೆ ಹೆಣ್ಣಿನ ಕುಟುಂಬದ ಮಾಗಣೆ ಗುರಿಕಾರ, ಸೋದರ ಮಾವ ಸೇರಿದಂತೆ ಆ ಕುಟುಂಬದ ಒಟ್ಟು 5 ಜನ ಪ್ರಮುಖರು ಚಾಪೆಯಲ್ಲಿ ಪರಸ್ಪರ ಎದುರುಬದುರಾಗಿ ಕುಳಿತುಕೊಳ್ಳುತ್ತಾರೆ. ಇದನ್ನು "ಚೌಕೊಗು ಕುಲ್ಲುನೆ" (ಚೌಕಕ್ಕೆ ಕುಳಿತು ಕೊಳ್ಳುವುದು)

ಎಂದು ಕರೆಯುತ್ತಾರೆ. ಹೀಗೆ ಚೌಕಕ್ಕೆ ಕುಳಿತುಕೊಂಡು ಮುಂದಿನ ಕಾರ್ಯಕ್ಕೆ ಅಣಿಯಾಗುವ ಮೊದಲು ಮಾಗಣೆ ಗುರಿಕಾರರು ಜೋರಾಗಿ "ಚೌಕೊ ಬುದ್ಯಂತೆರ್ದ್ಲಾ, ತಲೊ ಬುದ್ಯಂತೆರ್ದ್ಲಾ, ಪತ್ತಪ್ಪೆ ಬಾಲೆಲು, ಪದಿನಾಜಿ ಬರಿ ಬಂಧುಲೆಡಲಾ, ಸೇರ್ದಿಂಜಿ ಸಭೆ ಸರ್ವೆರ್ಡಲಾ ಚೌಕೊಗು ಕುಲ್ಲುವೊಂದು ಪನ್ಪೆರ್" ಎಂದು ಮೂರುಬಾರಿ ಹೇಳುತ್ತಾರೆ. ಆಗ ಸೇರಿದ್ದ ಸಭೆ ಕೂಡಾ "ಎಡ್ಡೆಂದ್ ಪನ್ಪೆರ್" ಎಂದು ಅಥವಾ "ದೇವೆರಪ್ಪಣೆ" ಎಂದೂ ಮೂರು ಬಾರಿ ಹೇಳುತ್ತದೆ. ಬಳಿಕ ಮೊದಲು ಹೆಣ್ಣಿನ ಕಡೆಯವರು "ಕಂಚಿ" ಎಂದು ಕರೆಯಲಾಗುವ ಹರಿವಾಣದಲ್ಲಿ ೧೧ ಕವಳೆ ವೀಳ್ಯದೆಲೆ ಮತ್ತು ೧೧ ಅಡಿಕೆಯನ್ನು ಗಂಡಿನ ಕಡೆಯವರಿಗೆ ಚೌಕಕ್ಕೆ ಕುಳಿತ ಮಾಗಣೆ ಗುರಿಕಾರನಿಗೆ ಕೊಡುತ್ತಾರೆ. ಆಗ ಗಂಡಿನ ಕಡೆಯವರ ಪರವಾಗಿ ಗಂಡಿನ ಕಡೆಯ ಮಾಗಣೆ ಗುರಿಕಾರ ೪೦ ಕವಳೆ ವೀಳ್ಯದೆಲೆ ಮತ್ತು ೪೦ ಅಡಿಕೆ ಹಾಗೂ ವಧುವಿಗೆ ಸೀರೆ, ಬಳೆ, ಕನ್ನಡಿ, ಇತ್ಯಾದಿ ಅಲಂಕಾರಿಕ ವಸ್ತುಗಳನ್ನು ಅದೇ ಹರಿವಾಣದಲ್ಲಿಟ್ಟು ಸಭೆಗೆ ತೋರಿಸಿ ಹೆಣ್ಣಿನ ಕಡೆಯ ಗುರಿಕಾರನಿಗೆ ಕೊಡುತ್ತಾನೆ.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಸಹಿತ ಜಗತ್ತಿನ ಕೆಲವೇ ಕೆಲವು ಅತ್ಯಂತ ಪ್ರಾಚೀನವಾದ ಬುಡಕಟ್ಟು ಸಮುದಾಯಗಳಲ್ಲಿ ಮಾತ್ರ ಚಾಲ್ತಿಯಲ್ಲಿರುವ "ವಧುದಕ್ಷಿಣೆ" (ತೆರವುದ ಪಣವು) ಎಂಬುದು ಈ ಸಮುದಾಯದವರ ಮದುವೆಯ ಬಹುಮುಖ್ಯ ಮತ್ತು ವಿಶಿಷ್ಟವಾದ ಅಂಗವಾಗಿದೆ. ನಿಶ್ಚಯದ ಚೌಕಕ್ಕೆ ಕುಳಿತವರು ಪರಸ್ಪರ ವೀಳ್ಯ ಬದಲಿಸಿಕೊಂಡ ಬಳಿಕ (ಬಚ್ಚಿರೆ ಪಗಪುನು) ಹೆಣ್ಣಿನ ಕಡೆಯ ಮಾಗಣೆಗುರಿಕಾರ "ಎಂಕ್ಲೆನ ಪೊಣ್ಣಗ್ ಆಣನ ತೆರವುದ ಪಣವು ಕೊರ್ಪಿ ಕಜ್ಜೊ ಕೂಡ್ದು ಬರಡ್" (ನಮ್ಮ ಹೆಣ್ಣಿಗೆ ವಧುದಕ್ಷಿಣೆ ಕೊಡುವ ಕಾರ್ಯ ನಡೆದು ಬರಲಿ) ಎಂದು ಹೇಳಿದಾಗ ಗಂಡಿನ ಕಡೆಯ ಗುರಿಕಾರ (ಪ್ರಾಚೀನ ಕಾಲದಲ್ಲಾದರೆ ವಧುದಕ್ಷಿಣೆ, ಆಣೆ, ಮುಕ್ಕಾಲು, ಪೈಸೆ, ಒಂದೂ ಕಾಲು ರೂಪಾಯಿಯಂತೆ ಆಯಾ ಕುಟುಂಬದ ಸ್ಥಿತಿವಂತಿಕೆಯ ಮೇಲೆ ತೀರ್ಮಾನವಾಗುತ್ತಿತ್ತು.) ಆಯಾ ಗಂಡಿನ ಸ್ಥಿತಿವಂತಿಕೆಯ ಆಧಾರದ ಮೇಲೆ ತೀರ್ಮಾನಿಸಿ ಹೇಳುತ್ತಾನೆ. ಹೀಗೆ ತೀರ್ಮಾನಿಸಲ್ಪಟ್ಟ ವಧುದಕ್ಷಿಣೆಯನ್ನು ಗಂಡಿನ ಕಡೆಯ ಮಾಗಣೆ ಗುರಿಕಾರ ಹರಿವಾಣದಲ್ಲಿ ವೀಳ್ಯದೊಂದಿಗೆ ಇಟ್ಟು ಹೆಣ್ಣಿನ ತಂದೆ ಅಥವಾ ಹೆಣ್ಣಿನ ಕಡೆಯ ಮಾಗಣೆ ಗುರಿಕಾರನಿಗೆ ಕೊಡುತ್ತಾರೆ. ವಧುದಕ್ಷಿಣೆ ಕೊಟ್ಟ ಬಳಿಕ ಉಂಗುರ ಇಡುವ ಶಾಸ್ತ್ರ ನಡೆಯುತ್ತದೆ.

ಅಷ್ಟರಲ್ಲಿ ಗಂಡು ಕೊಟ್ಟ ಸೀರೆ, ರವಿಕೆ, ಉಟ್ಟು ಶೃಂಗಾರಗೊಂಡ ಹೆಣ್ಣನ್ನು ಸಭೆಯ ಮಧ್ಯದಲ್ಲಿ ಕುಳ್ಳಿರಿಸುತ್ತಾರೆ. ಬಳಿಕ ಉಂಗುರವನ್ನು ಗಂಡು ಮೊದಲು ಹೆಣ್ಣಿನ ಉಂಗುರ ಬೆರಳಿಗೆ ಹಾಕಿದ ನಂತರ ಹೆಣ್ಣು ಗಂಡಿನ ಉಂಗುರ ಬೆರಳಿಗೆ ಉಂಗುರವನ್ನು ಇಡುತ್ತಾಳೆ. (ಪ್ರಾಚೀನ ಕಾಲದಲ್ಲಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಲ್ಲಿ ಮದುವೆ ನಿಶ್ಚಿತಾರ್ಥದ ದಿನ ಗಂಡು ಹೆಣ್ಣಿಗೆ ಮೂಗುತಿ ಕೊಡುವ ಸಂಪ್ರದಾಯವಿತ್ತಲ್ಲದೆ. ಗಂಡನ್ನು ಮದುಮಗನಂತೆ ಶೃಂಗರಿಸಿ ಗಂಡು, ಹೆಣ್ಣಿಗೆ ಸೇಸೆ (ದೇಸೆ) ಹಾಕುವ ಕ್ರಮವಿತ್ತು. ನಂತರ ಗಂಡು ಹೆಣ್ಣು ಇಬ್ಬರನ್ನು ತೆಂಗಿನ ಮರ ಅಥವಾ ಹಲಸಿನ ಮರಕ್ಕೆ ಪ್ರದಕ್ಷಿಣೆ ಹಾಕಿಸಿ ಕಲಶದಿಂದ ನೀರು ಹಾಕಿಸುವ ಸಂಪ್ರದಾಯವಿತ್ತು. ಬಳಿಕ ಊಟವೆಲ್ಲ ಆದ ನಂತರ ಗಂಡನ್ನು ಐದು ಜನ ಗಂಡಿನ ಕಡೆಯವರು ಕೈ ಹಿಡಿದು "ನನ ಮದ್ಮೆದಾಡೆಗ್ ಮುಟ್ಟ ಎಂಕ್ಲೆನ ಆಣ್ ಎಂಕ್ಲೆಗೇ" (ಇನ್ನು ಮದುವೆ ಆಗುವವರೆಗೆ ಗಂಡು ನಮಗೇ ಎಂದು ಹೆಣ್ಣಿನ ಮನೆಯಿಂದ ಹತ್ತು ಹೆಜ್ಜೆ ದೂರಕ್ಕೆ ಕರೆದೊಯ್ದು ಗಂಡಿಗೆ ಮಾಡಲಾಗಿದ್ದ ಶೃಂಗಾರವನ್ನು ಬಿಚ್ಚುವ ಕ್ರಮವಿತ್ತು. ಇದಾದ ನಂತರ ಎರಡೂ ಕಡೆಯವರು ಪರಸ್ಪರ ಮಾತುಕತೆ ನಡೆಸಿ ಮದುವೆಗೆ ದಿನ ನಿಗದಿ ಮಡುತ್ತಾರೆ. ಬಳಿಕ ಎಲ್ಲರೂ ಊಟ ಮಾಡುತ್ತಾರೆ.

### ೩.೭.೧ ಮದುವೆಯ ಕ್ರಮಾಚರಣೆ

ಪ್ರಾಚೀನ ಕಾಲದಲ್ಲಿ ಮದುವೆ ಶಾಸ್ತ್ರೋಕ್ತವಾಗಿ ವಿಧಿ ವಿಧಾನಗಳ ಮೂಲಕ ಹೆಣ್ಣಿನ ಮನೆಯಲ್ಲೇ ನಡೆಯುತ್ತಿತ್ತು. ಅತ್ಯಂತ ಪ್ರಾಚೀನ ಕಾಲದಲ್ಲಿ ಒಂದೂರಿನಿಂದ ಇನ್ನೊಂದೂರಿಗೆ ನಡೆದುಕೊಂಡೇ ಹೋಗಬೇಕಿದ್ದ ಅನಿವಾರ್ಯತೆಯಿದ್ದ ಕಾರಣ ಮತ್ತು ಈ ಸಮುದಾಯದಲ್ಲಿ ಹೆಣ್ಣಿಗೆ ಕುಟುಂಬದಲ್ಲಿ ಪೂಜ್ಯ ಸ್ಥಾನಮಾನವಿದ್ದುದರಿಂದ ಹೆಣ್ಣಿಗೆ ತೊಂದರೆಯಗಬಾರದೆಂದು ಹೆಣ್ಣಿನ ಮನೆಗೆ ಗಂಡಿನ ಕಡೆಯವರು ದಿಬ್ಬಣ ಸಮೇತ ಬಂದು ಮದುವೆಯಾಗುವ ಕ್ರಮವಿತ್ತು. ಹಿಂದೆ ಕಾಡು ದಾರಿಯಲ್ಲಿ ಬಹಳಷ್ಟು ದೂರ ನಡೆಯಬೇಕಾಗಿತ್ತು. ಇದಕ್ಕಾಗಿ ದಿಬ್ಬಣದ ಏಕತಾನತೆಯನ್ನು ಹೋಗಲಾಡಿಸಲು ಮತ್ತು ಪ್ರಾಣಿಗಳ ಭಯದಿಂದ ರಕ್ಷಿಸಿಕೊಳ್ಳಲು ಹಾಗೂ ದಿಬ್ಬಣಿಗರನ್ನು ಸಂತೋಷಗೊಳಿಸಲು ತಮ್ಮಲ್ಲಿ ಸಹಜವಾಗಿಯೇ ಇದ್ದ ವಾದ್ಯವನ್ನೂದುತ್ತಾ, ತಾಸೆ, ಡೋಲುಗಳನ್ನು ಬಾರಿಸುತ್ತಾ ದಿಬ್ಬಣ ಸಾಗುತ್ತಿತ್ತು.

ಹಿಂದೆ ವರನ ದಿಬ್ಬಣ ಸುಮಾರು ಮುಂಜಾನೆ ಬೇಗನೇ ಹೊರಡುತ್ತಿತ್ತು. ಅದಕ್ಕಾಗಿ ಆ ದಿನ ರಾತ್ರಿ ಮಧರಂಗಿ ಶಾಸ್ತ್ರ ನಡೆಯುವ ಚಪ್ಪರದ ಮಧ್ಯದಲ್ಲಿ ಮುಹೂರ್ತದ ಕಂಬವನ್ನು ಮಾಗಣೆ ಗುರಿಕಾರ ಅಥವಾ ಸೋದರ ಮಾವ ನೆಟ್ಟು ಇದಕ್ಕೆ ಬಿಳಿಯ ಬಟ್ಟೆಯನ್ನು ಸುತ್ತಿ ಅಡಿಕೆ, ಮತ್ತು ಮಾವಿನ ಮತ್ತು ಹಲಸಿನ ಎಲೆಗಳನ್ನು ಕಟ್ಟಲಾಗುತ್ತದೆ. ನಂತರ ಇದೇ ಕಂಬಕ್ಕೆ ಈ ಸಮುದಾಯದ ವಂಶವೃಕ್ಷವಾದ ಸಪ್ತವರ್ಣಿ ಅಥವಾ ಪಾಳೆ ಮರದ ಗೆಲ್ಲನ್ನು ನೆಟ್ಟು ಮಣೆಯ ಮೇಲೆ ಬಾಳೆ ಎಲೆಯಲ್ಲಿ ಅಕ್ಕಿ, ತೆಂಗಿನಕಾಯಿ, ಅಡಿಕೆ, ವೀಳ್ಯದೆಲೆ, ಇಟ್ಟು ಊದುಬತ್ತಿ, ದೀಪ ಹಚ್ಚಿ ಗಣಪತಿಯನ್ನು ಸ್ತುತಿಸುತ್ತಾರೆ. ಬಳೀಕ ಕುಲ ಗುರುವಾದ ಗುರು ಉಳ್ಳಾಲ್ತಿ, ಶೃಂಗೇರಿ ಶಾರದೆ ಹಾಗೂ ಗತಿಸಿದ ಗುರುಹಿರಿಯರಿಗೆ ದೈವಗಳಿಗೆ ಕೈ ಮುಗಿದು ಮಧುರಂಗಿ ಶಾಸ್ತ್ರಕ್ಕೆ ಅನುವನ್ನು ಕೇಳಲಾಗುತ್ತದೆ. ನಂತರ ವರನನ್ನು ಮಣೆ ಅಥವಾ ಬೆಂಚು ಅಥವಾ ಕುರ್ಚಿಯಲ್ಲಿ ಕೂರಿಸಿ ಕುಟುಂಬದಲ್ಲಿ ಭಾವನಾಗುವವ ಅಥವಾ ನಾದಿನಿಯಾಗುವವಳು ಮೊದಲು ವರನ ತಲೆಗೆ ಮತ್ತು ಮೈಗೆ ಅರಸಿನ ಎಣ್ಣೆ, ಹಾಲು, ಹಚ್ಚಿ ಸ್ನಾನ ಮಾಡಿಸುತ್ತಾರೆ. ಬಳಿಕ ಆತನನ್ನು ಮಡಿ ಬಟ್ಟೆಯಲ್ಲೇ ಮೂಹೂರ್ತದ ಕಂಬ (ಕನ್ಯಾಕಂಬ)ದ ಮುಂದೆ ನಿಲ್ಲಿಸಿ ಕಂಬದ ಕೆಳಗೆ ಮಣೆಯಲ್ಲಿರಿಸಿದ ಸ್ವಸ್ತಿಕದ (ತುಳುವಿನಲ್ಲಿ ಇದನ್ನು ಗಣಪತಿಸ್ತುತಿಗೆ ಎಂದು ಕರೆಯಲಾಗುತ್ತದೆ) ಮೇಲೆ ಪ್ರಾಚೀನ ಕಾಲದಲ್ಲಾದರೆ ಕನಿಷ್ಟ  ರೂವಿ, ಒಟ್ಟೆಮುಕ್ಕಾಲು ಅಥವಾ ಕಾಲು ರೂಪಾಯಿ ಇಟ್ಟು ಗುರಿಕಾರ ಮತ್ತೊಮ್ಮೆ ಪ್ರಾರ್ಥಿಸಿ ಮುತ್ತೈದೆಯರಿಂದ ಕನ್ಯಾಕಂಬಕ್ಕೆ ಆರತಿ ಮಾಡಿಸಿ ಕರಿಮಣಿಸರವನ್ನು ಆ ಕಂಬಕ್ಕೆ ಕಟ್ಟಿ ಇನ್ನೊಂದು ಕರಿಮಣಿಯನ್ನು ವರನ ಕೊರಳಿಗೆ ಹಾಕುತ್ತಾನೆ.

ಬಳಿಕ ಗುರು ಉಳ್ಳಾಲ್ತಿ ಹಾಗೂ ದೈವಗಳಿಗೆ ಅಗೇಲು ಹಾಕಿ ಪ್ರಾರ್ಥಿಸಿ ಊಟವಾದ ಬಳಿಕ ವರನ ಎರಡೂ ಕೈಗಳಿಗೆ ಮಧುರಂಗಿ ಹಾಕಲಾಗುತ್ತದೆ. ಮಧುರಂಗಿ ಶಾಸ್ತ್ರ ಮದುವೆಯ ಮೊದಲಿನ ದಿನದ ರಾತ್ರಿ ನಡೆಯುವುದರಿಂದ ಆ ದಿನ ರಾತ್ರಿಯಿಡೀ ಹಾಡು, ಕುಣಿತಗಳ ಸಂಭ್ರಮಾಚರಣೆ ಇರುತ್ತದೆ. ಇದೇ ಕ್ರಮ ಹೆಣ್ಣಿನ ಮನೆಯಲ್ಲೂ ನಡೆಯುತ್ತದೆ. ಬಳಿಕ ಮುಂಜಾನೆ ಬೇಗನೇ ಎದ್ದು ವರನನ್ನು ಸ್ನಾನ ಮಾಡಿಸಿ ಶೃಂಗರಿಸಿ ದೈವ ದೇವರಿಗೆ ದೀಪವಿಟ್ಟು ಕೈ ಮುಗಿದು ಹೆಣ್ಣಿನ ಮನೆಗೆ ಮುಗಿದು ದಿಬ್ಬಣ ಹೊರಡುತ್ತದೆ. ಹೆಣ್ಣಿನ ಮನೆಗೆ ದಿಬ್ಬಣ ಬಂದಾಗ ಗಂಡಿನ ಕಡೆಯ ಕುಟುಂಬ ಗುರಿಕಾರ "ಬತ್ತಿ ದಿಬ್ಬಣೆರ್ದ್ಲಾ, ಇತ್ತಿದಿಬ್ಬಣೆರ್ದ್ಲಾ, ಚೌಕಬುದ್ಯಂತೆರ್, ತಲೊಬುದ್ಯಂತೆರ್ದ್ಲಾ, ಪತ್ತಪ್ಪೆ ಬಾಲೆಲು, ಪದಿನಾಜಿ ಬರಿ ಬಂಧುಲು ಸಭೆ ಸರ್ವೆರ್ದ್ಲಾ ಆಣ ಕೊಡಿತ ದಿಬ್ಬಣೊ ಬತ್ತೊಂದು ಪನ್ಪೆರ್" ಎಂದು ಮೂರು ಸಾರಿ ಹೇಳಿದಾಗ ಎಲ್ಲರೂ "ಎಡ್ದೆಂದ್ ಪನ್ಪೆರ್" ಎಂದು ಜೋರಾಗಿ ಹೇಳುತ್ತಾರೆ. ಅಷ್ಟರಲ್ಲಿ ಮಧುಮಗನಿಗೆ ಹೆಣ್ಣಿನ ಕಡೆಯ ಮುತ್ತೈದೆಯರು ಕಳಸ ಕನ್ನಡಿ

ಹಿಡಿದು ಆರತಿ ಬೆಳಗಿ ಅರಸಿನ, ಕುಂಕುಮ ಮಿಶ್ರಿತ ಕುರ್ದಿ ನೀರನ್ನು ತಲೆಗೆ ನೀವಳಿಸಿ ಕೆಳಕ್ಕೆ ಚೆಲ್ಲಿ ದೃಷ್ಟಿ ತೆಗೆದ ಬಳಿಕ ದಿಬ್ಬಣಿಗರಿಗೆ ನೀರು ಕೊಟ್ಟು ಒಳಗೆ ಕರೆದುಕೊಂಡು ಬಂದು ಚಾಪೆ ಹಾಕಿ ಕುಳ್ಳಿರಿಸಿ ಬೆಲ್ಲ, ನೀರು ಕೊಡುತ್ತಾರೆ. ನಂತರ ವರನ ಕಡೆಯಿಂದ ತಂದ ಸೀರೆ, ರವಿಕೆ, ಕಪ್ಪು ಬಳೆ, ತಾಳಿ, ಕರಿಮಣಿ, ಹೂ ಹಿಂಗಾರ, ತೆರವುದ ಪಣವು (ವಧುದಕ್ಷಿಣೆ) ೪೦ ಕವಳೆ ವೀಳ್ಯದೆಲೆ ಮತ್ತು ೪೦ ಅಡಿಕೆಯನ್ನು ಹರಿವಾಣದಲ್ಲಿಟ್ಟು ಸಭೆಗೆ ತೋರಿಸಿ ಮುಂಡಾಸು ಸುತ್ತಿರುವ ಗಂಡಿನ ಕಡೆಯ ಗುರಿಕಾರ ಹೆಣ್ಣಿನ ಕಡೆಯ ಗುರಿಕಾರನಿಗೆ ಕೊಡುತ್ತಾನೆ.

ಬಳಿಕ ಸೀರೆಯನ್ನುಟ್ಟು ಶೃಂಗಾರಗೊಂಡ ಆ ವಧುವನ್ನು ಹೆಣ್ಣಿನ ಸೋದರ ಮಾವ ಮದುವೆ ಚಪ್ಪರದ ಮೂಹೂರ್ತದ ಕಂಬದ ಬಳಿಗೆ ಕರೆದು ತಂದು ತಲೆಗೊಂದು ಬಿಳಿ ಮುಸುಕು ಹಾಕಿಸಿ ವಧು – ವರರನ್ನು ಹೆಣ್ಣಿನ ಮತ್ತು ಗಂಡಿನ ತಂದೆ ತಾಯಿಗಳು ಮುತ್ತೈದೆಯರೊಡನೆ ಕನ್ಯಾ ಕಂಬಕ್ಕೆ ಮೂರು ಬಾರಿ ಪ್ರದಕ್ಷಿಣೆ ಹಾಕಿಸಿ ಅದೇ ಕನ್ಯಾ ಕಂಬದ ಅಡಿಯಲ್ಲೇ ವಧು – ವರರನ್ನು ಕುಳ್ಳಿರಿಸುತ್ತಾರೆ. ನಂತರ ಮಾಗಣೆ ಗುರಿಕಾರರುಗಳ ನಿರ್ದೇಶನದಂತೆ ಹೆಣ್ಣಿನ ತಂದೆ ವಧುವರರ ಕೈಗಳನ್ನು ಒಂದರ ಮೇಲೊಂದರಂತೆ ಇಟ್ಟು ಕಲಶದ ನೀರನ್ನು ಹೊಯ್ಯುತ್ತಾರೆ. ಈ ವೇಳೆ ಸೋಬಾನೆ ಹಾಡಲಾಗುತ್ತದೆ. ಆಗ ವಧು ವರರ ತಾಯಿಯಂದಿರು ವಧು – ವರರ ಕೈಗಳ ಅಡಿಯಿಂದ ನೀರು ಕೆಳಕ್ಕೆ ಬೀಳದಂತೆ ತಟ್ಟೆ (ಪಾತ್ರೆ ) ಹಿಡಿಯುತ್ತಾರೆ. ಧಾರೆಯೆರೆದ ನಂತರ ಗಂಡು ಹೆಣ್ಣಿನ ಕುತ್ತಿಗೆಗೆ ತಾಳಿ ಇರುವ ಕರಿಮಣಿಯನ್ನು ಕಟ್ಟುತ್ತಾನೆ. ನಂತರ ಹೆಣ್ಣು ವರನ ಕೊರಳಿಗೆ ಹೂ ಮಾಲೆ ಹಾಕಿದಾಗ ವರನೂ ವಧುವಿನ ಕೊರಳಿಗೆ ಹೂ ಮಾಲೆ ಹಾಕುತ್ತಾನೆ. ಬಳಿಕ ವಧುವರರನ್ನು ಅಲ್ಲೇ ಕನ್ಯಾ ಕಂಬದ ಕೆಳಗೆ ಕುಳ್ಳಿರಿಸಿ ಸೇಸೆ ಹಾಕಿ ಉಡುಗೊರೆ ನೀಡಿ, ಊಟ ಮಾಡುವ ಕ್ರಮವಿದೆ. ಪ್ರಾಚೀನ ಕಾಲದಲ್ಲಿ ಒಂದು ವೇಳೆ ಈ ಜನಾಂಗದ ಹೆಣ್ಣು ಎರಡನೇ ಮದುವೆಯಾಗುವುದಾದಲ್ಲಿ ಎರಡನೇ ಮದುವೆಯಾಗುವ ಹೆಣ್ಣು ನೆಕ್ಕಿ ಗಿಡದಿಂದ ಮಾಡಿದ ಏಳು ಗುಡಿಗೆ ಹಾಕಿದ ಬೆಂಕಿಯೊಳಗೆ ನುಗ್ಗಿ ಅದರಿಂದ ಪಾರಾಗಿ ಹೊರ ಬಂದು ಹಲಸಿನ (ಪಿಲ) ಮರಕ್ಕೆ ನೀರು ಎರೆದು ತಪ್ಪು ಕಾಣಿಕೆಯನ್ನಿಟ್ಟು (ಇದನ್ನು ತುಳುವಿನಲ್ಲಿ ಪಿಲೆಕಳೆಯುವುದು ಎನ್ನುವರು) ಮೊದಲು ಬಾಳೆ ಗಿಡದ ಜೊತೆ ಧಾರೆ ಎರೆಯುವ ಕ್ರಮವಿತ್ತು.

**೩.೮ ಮರಣದ ಕ್ರಿಯೆ**

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಲ್ಲಿ ಪ್ರಾಚೀನ ಕಾಲದಲ್ಲಿ ಮೃತಪಟ್ಟರೆ ಶವವನ್ನು ಸುಡದೆ ಮಣ್ಣಿನೊಳಗೆ ಹೂತು ಹಾಕುವ (ಶವದಫನ) ಪದ್ಧತಿ ಇತ್ತು. ದೈವ ಕಟ್ಟುವ ವೃತ್ತಿ ನಡೆಸುವ ವ್ಯಕ್ತಿ ಮೃತಪಟ್ಟರೆ ಶವವನ್ನು ಸುಡದೆ ಹೂಳುವ ಕ್ರಮವನ್ನು ಸಂಪ್ರದಾಯ ಬದ್ಧವಾಗಿ ಸಮುದಾಯದ ಹಲವು ಕುಟುಂಬಗಳಲ್ಲಿ ಈಗಲೂ ಅನುಸರಿಸಲಾಗುತ್ತದೆ. ಶವವನ್ನು ಹೂಳುವ ಪದ್ಧತಿ ಈ ಸಮುದಾಯದಲ್ಲಿರುವುದರಿಂದ ಈ ಸಮುದಾಯ ಹಳೆಯ ಶಿಲಾಯುಗಕ್ಕಿಂತಲೂ ಹಿಂದಿನ ಪ್ರಾಚೀನತೆಯನ್ನು ಹೊಂದಿದೆಯೆಂಬುದನ್ನು ಸ್ಪಷ್ಟೀಕರಿಸುತ್ತದೆ. ಅದೇ ರೀತಿ ಈ ಸಮುದಾಯದ ಕುಟುಂಬದಲ್ಲಿ ತಂದೆ ತಾಯಿ ಮೃತಪಟ್ಟಾಗ ಮೃತಪಟ್ಟ ವ್ಯಕ್ತಿಯ ಮಕ್ಕಳು ಉತ್ತರ ಕ್ರಿಯೆಯ ದಿನ ಗೋರಿಯ (ತುಳುವಿನಲ್ಲಿ ಇದನ್ನು ಧೂಪೆ ಎಂದು ಕರೆಯಲಾಗುತ್ತದೆ). ಮುಂದೆ ತಲೆಗೆ ಕೈ ಹಿಡಿದು "ಮುರ್ಯೋ" ಎಂದು ಮೂರು ಬಾರಿ ಜೋರಾಗಿ ಕೂಗುವುದು ಬಹಳ ವಿಶಿಷ್ಟವೆನಿಸಿದೆ. ಇದನ್ನು "ಮುರ್ಯೋ ಲೆಪ್ಪುನಿ" (ಶೋಕಾರ್ಥ ಕೂಗು) ಎಂದು ಕರೆಯಲಾಗುತ್ತದೆ.

ಈ ಸಮುದಾಯದಲ್ಲಿ ಮೃತಪಟ್ಟ ವ್ಯಕ್ತಿ ದೈವ (ಭೂತ ಅಥವಾ ಕೋಲ) ಕಟ್ಟುವವನಾಗಿದ್ದರೆ ಅರ್ದಾಳವೆಂಬ ಬಣ್ಣವನ್ನು ಮುಖಕ್ಕೆ ಹಚ್ಚುವುದು, ಹಣೆಗೆ ನಾಣ್ಯವನ್ನಿಡುವುದು, ಮನೆಯ ಮುಂಭಾಗದ ಬಾಗಿಲಿನಲ್ಲಿ ಎಲೆ ಅಡಿಕೆಯನ್ನು

ಜಜ್ಜಿಮೃತ ವ್ಯಕ್ತಿಯ ಬಾಯಿಗಿಡುವುದು, ಮುಂಬಾಗಿಲಲ್ಲಿ ಕುಳಿತು ಎಡದ ಕೈಯಲ್ಲಿ ಅರಶಿನ ಮತ್ತು ಅಕ್ಕಿ ಮಿಶ್ರಿತ ಅಕ್ಕಿಯನ್ನು ಎಡದ ಕೈಯಿಂದ ಹಿಂಭಾಗಕ್ಕೆ ಮೂರು ಸಾರಿ ಹಿಂದಕ್ಕೆಸೆಯುವುದು (ಇದನ್ನು ತುಳುವಿನಲ್ಲಿ ಮಂಜೊಲರಿ ಬಿರ್ಕನಿ ಎಂದು ಕರೆಯಲಾಗುತ್ತದೆ) ಉತ್ತರ ಕ್ರಿಯೆಯ ದಿನ ಮೂರು ಸಲ ಕುಡ್ತೆಯ ಒಳಗೆ ಸ್ವಲ್ಪ ಅಕ್ಕಿ ಹಾಕಿ ಅಳೆಯುವುದು ಮತ್ತು ಕುಡ್ತೆಯನ್ನು ತಲೆಕೆಳಗಾಗಿಟ್ಟು ಮೇಲ್ಭಾಗದಿಂದ ಸ್ವಲ್ಪ ಅಕ್ಕಿ ಹಾಕಿ ಅಳೆಯುವುದು, ಅರಸಿನ ಹುಡಿಯ ನೀರನ್ನು ಅದಕ್ಕೆ

ಚಿಮುಕಿಸಿ ಕುಟುಂಬದ ಹೆಂಗಸರು ತಲೆಯನ್ನು ಬಿಚ್ಚಿಸಿಕೊಂಡು (ಕೆದರಿಸಿಕೊಂಡು) ಎಡ ಕೈಯಿಂದ ಆ ಅಕ್ಕಿಯನ್ನು ತೊಳೆದು ಅನ್ನ ಮಾಡಿ ಬಳಿಕ "ದುಃಖದ ಗಂಜಿ" ಅಥವಾ "ಮೀಪಗಂಜಿ" (ಸಾವುಗಂಜಿ) ಎಂದು ಸೇವಿಸುವುದು, ಉಳಿದ ಗಂಜಿ ಮತ್ತು ಸ್ವಲ್ಪ ಬಾಳೆ ಕಾಯಿಯ ಸಾಂಬಾರನ್ನು ಬಾಳೆ ಎಲೆ ಅಥವಾ ಬಾಳೆ ಎಲೆಯಿಂದ ಮಾಡಿದ ಔಡಿಯಲ್ಲಿ ಹಾಕಿ ಅದನ್ನು ಮೃತ ವ್ಯಕ್ತಿಯ ಮಗ ಅಥವಾ ಕುಟುಂಬಸ್ಥರಲ್ಲೊಬ್ಬ ಮೊಣಕಾಲೂರಿ ಹಿಂದೆ ಕೈ ಕಟ್ಟಿ ಹಲ್ಲಿನಿಂದ ಕಚ್ಚಿ ಬಳಿಕ ಗೋರಿಯ ಮೇಲೆ ಹಾಕುವ ಕ್ರಮ, ಉತ್ತರ ಕ್ರಿಯೆಯ ದಿನ ಕುಟುಂಬಸ್ಥರೆಲ್ಲ ಸೇರಿ ಮೃತಪಟ್ಟ ವ್ಯಕ್ತಿಯ ಇಷ್ಟದ ಮತ್ತು ಆ ವ್ಯಕ್ತಿಯ ಆಸೆಯ ವಸ್ತುಗಳನ್ನೆಲ್ಲಾ ಕೊಳಲು ವಾದ್ಯ, ಡೋಲು, ತಾಸೆಗಳ ಹಿಮ್ಮೇಳನದೊಂದಿಗೆ ಹೊತ್ತುಕೊಂಡು ಹೋಗುವ "ಅರಕ್ಕ್ ತುಂಬುನಿ" (ಮರಣದ ಮನೆಗೆ ಸಾಗಿಸುವ ಹೊರೆ) ಕ್ರಮ ಇವೆಲ್ಲವೂ ಈ ಸಮುದಾಯದ ಮರಣಾ ನಂತರ ಆಚರಿಸುವ ಬಹು ವಿಶಿಷ್ಟವಾದ ಕ್ರಮಾಚರಣೆಗಳಾಗಿವೆ.

### ೩.೮.೧ ಮೃತಪಟ್ಟ ಬಳಿಕ ನಡೆಸುವ ವಿಧಿ – ವಿಧಾನಗಳು

ಈ ಸಮುದಾಯದಲ್ಲಿ ವ್ಯಕ್ತಿಯ ಮರಣದ ಬಳಿಕ ಆತನ ಕುಟುಂಬಸ್ಥರು ಬಂಧುಗಳೆಲ್ಲ ಬಂದು ತುಳಸೀ ಚಿಗುರಿನಲ್ಲಿ ಮೃತ ವ್ಯಕ್ತಿಯ ಬಾಯಿಗೆ "ಸ್ವರ್ಗೋಗೇ ಪೋಲೆ" (ಸ್ವರ್ಗಕ್ಕೇ ಹೋಗಿ) ಎಂದು ಮೂರು ಬಾರಿ ಹೇಳಿ ನೀರು ಬಿಡುತ್ತಾರೆ. ಬಳಿಕ ಹೆಣವನ್ನು ಚಾಪೆಯಲ್ಲಿ (ಉತ್ತರ ದಿಕ್ಕಿಗೆ ತಲೆ ಮತ್ತು ದಕ್ಷಿಣ ದಿಕ್ಕಿಗೆ ಕಾಲು ಇರುವಂತೆ ) ಮಲಗಿಸಿ ತಲೆಯ ಮೇಲ್ಭಾಗದಲ್ಲಿ ಬಾಳೆ ಎಲೆಯಲ್ಲಿ ಅಕ್ಕಿ ಹಾಕಿ ಅದರ ಮೇಲೆ ತೆಂಗಿನ ಕಾಯಿಯ ಒಂದು ಭಾಗದಲ್ಲಿ ಎಣ್ಣೆ ಹಾಕಿ ಅದರೊಳಗೆ ಬತ್ತಿ ಇಟ್ಟು ಉರಿಸಿ ಇಡಲಾಗುತ್ತದೆ. ಕಾಲ ಕೆಳಗೂ ಸಹಾ ಭತ್ತದ ಮಧ್ಯೆ ತೆಂಗಿನ ಕಾಯಿಯ ಇನ್ನೊಂದು ಭಾಗದಲ್ಲೂ ಎಣ್ಣೆ ಹಾಕಿ ಬತ್ತಿಯಿಟ್ಟು ದೀಪವನ್ನು ಉರಿಸಲಾಗುತ್ತದೆ. ಪ್ರಾಚೀನ ಕಾಲದಲ್ಲಿ ಮನೆಯ ಮಾಡು ಸೋಗೆ ಅಥವಾ ಮುಳಿ ಹುಲ್ಲಿನದ್ದಾಗಿದ್ದರೆ ಮಾಡನ್ನು ಒನಕೆ ಅಥವಾ ಯಾವುದಾದರೂ ಕೋಲಿನಿಂದ ರಂಧ್ರ ಮಾಡಿ ಮೃತ ವ್ಯಕ್ತಿಯ "ಕಾಲೆ" ಹೋಗಲು ದಾರಿ ಮಾಡಿಕೊಡುವ ಕ್ರಮವಿತ್ತು.

ಬಳಿಕ ತೆಂಕು (ಪಶ್ಚಿಮ) ದಿಕ್ಕಿಗೆ ಒಲೆ ಹಾಕಿ ಮಣ್ಣಿನ ಮಡಿಕೆಯಲ್ಲಿ ನೀರು ಕಾಯಿಸಿ ಮೃತ ಶರೀರವನ್ನು ಹಲಗೆ ಅಥವಾ ಬೆಂಚಿನಲ್ಲಿ ಉತ್ತರ ದಿಕ್ಕಿಗೆ ತಲೆ ಮತ್ತು ದಕ್ಷಿಣ ದಿಕ್ಕಿಗೆ ಕಾಲು ಇರುವಂತೆ ಮಲಗಿಸಲಾಗುತ್ತದೆ. ನಂತರ ಅರಶಿನ, ಸೀಗೆಯನ್ನು ತುಳಸೀ ಎಲೆಗಳಿಂದ (ಚಿಗುರುಗಳ ಗೊಂಚಲು) ಎಡದ ಕೈಯಿಂದ ಹಚ್ಚಿ, ಮೂರು ಕಣ್ಣಿರುವ ತೆಂಗಿನ ಚಿಪ್ಪಿಯ (ಗೆರಟೆಯ) ಪೈಕಿ ಒಂದಕ್ಕೆ ರಂಧ್ರ ಮಾಡಿ ಆ ಗೆರಟೆಯಿಂದ ಎಡಗೈನಿಂದಲೇ ಕುಟುಂಬಸ್ಥರು ಸ್ನಾನ ಮಾಡಿಸಿ, ಸ್ನಾನ ಮಾಡಿಸುತ್ತಾರೆ. ಬಳಿಕ ನೀರು ಕಾಯಿಸಿದ ಆ ಪಾತ್ರೆ ಹಾಗೂ ಗೆರಟೆಯನ್ನು ಕವುಚಿ ಹಾಕಿ ಸ್ನಾನ ಮಾಡಿಸಿದ ಮೃತ ದೇಹವನ್ನು ಬೂದಿ ಬಾಳೆಯ ದೊಡ್ಡ ಎಲೆಯ ಮೇಲೆ (ಮನೆಯ ಒಳಗೆ ಅಥವಾ ಹೊರಗೆ) ಮಲಗಿಸಿ ಮೃತ ಶರೀರಕ್ಕೆ ಪಂಚೆ ಉಡಿಸಿ, ಅಂಗಿ ಹಾಕಿಸಿ ಪಂಚೆ ಕಟ್ಟಿ ಹೆಗಲಿಗೆ ಶಾಲು ಮತ್ತು ಹೂ ಮಾಲೆಯನ್ನು ಹಾಕಿ, ಶೃಂಗಾರಗೊಳಿಸುತ್ತಾರೆ. ನಂತರ ಕುಟುಂಬಸ್ಥರು ತಂದಿರುವ ಬಟ್ಟೆ ಹಾಗೂ ಹೂ, ಅಥವಾ ಗಂಧದ ಮಾಲೆಯನ್ನು ಮೃತ ಶರೀರದ ಮೇಲೆ

ಹಾಕಲಾಗುತ್ತದೆ. ಮೃತಪಟ್ಟ ವ್ಯಕ್ತಿ ದೈವ ಕಟ್ಟುವ ಕಲಾವಿದನಾಗಿದ್ದರೆ ಮುಖಕ್ಕೆ ಅರ್ಧಾಳ ಹಾಕುವ (ಮುಖವರ್ಣಿಕೆ) ಕ್ರಮವೂ ಇದೆ. ಹೀಗೆ ಶೃಂಗಾರಗೊಂಡ ಮೃತ ಶರೀರದ ಹಣೆಯಲ್ಲಿ ಒಂದು ನಾಣ್ಯವನ್ನಿಟ್ಟು ಸೇರಿದ ಕುಟುಂಬಸ್ಥರೆಲ್ಲರೂ ಮತ್ತೊಮ್ಮೆ "ಸೊರ್ಗೋಗೇ ಪೋಲೆ" (ಸ್ವರ್ಗಕ್ಕೇ ಹೋಗಿ) ಎಂದು ಹೇಳುತ್ತಾ ತುಳಸೀ ಎಲೆಯಿಂದ ಬಾಯಿಗೆ ನೀರು ಬಿಡುತ್ತಾರೆ. ಅಷ್ಟರಲ್ಲಿ ಮನೆಯ ಮುಂಬಾಗಿಲ ಕೆಳಗಿನ ಮೆಟ್ಟಲಿನಲ್ಲಿ ವೀಳ್ಯದೆಲೆಗೆ ಸುಣ್ಣ ಹಚ್ಚಿ ಅಡಿಕೆ ಹೋಳಿನೊಂದಿಗೆ ಜಜ್ಜಿ ಮೃತ ವ್ಯಕ್ತಿಯ ಬಾಯಿಗಿಟ್ಟು ಕೈಯ ಹೆಬ್ಬೆರಳು ಮತ್ತು ಕಾಲಿನ ಹೆಬ್ಬೆರಳನ್ನು ಪರಸ್ಪರ ಬಟ್ಟೆಯಿಂದ ಜೋಡಿಸಿ ಬಿದಿರಿನಿಂದ ಮಾಡಿದ ಚಟ್ಟದಲ್ಲಿಟ್ಟು ಮೃತ ಶರೀರಕ್ಕೆ ಬಿಳಿ ಬಟ್ಟೆಯಿಂದ ಮುಸುಕು ಹಾಕಿ ಚಿತೆಯಲ್ಲಿಗೆ ಕೊಂಡೊಯ್ಯಲು ತಯಾರು ಮಾಡಲಾಗುತ್ತದೆ.

ಚಟ್ಟದಲ್ಲಿರುವ ಮೃತದೇಹವನ್ನು ಚಿತೆಯೆಡಗೆ ಸಾಗಿಸುವ ಮೊದಲು ಒಂದು ಸಾಧಾರಣ ಉದ್ದದ ಸಣ್ಣ ಬಿದಿರು ಅಥವಾ ತೆಂಗಿನ ಮಡಲಿನ ಮಧ್ಯ ಭಾಗದ ದಂಡನ್ನು (ಕೊತ್ತಳಿಗೆ) ಕವಲಾಗಿ (ಙ ಆಕಾರದಲ್ಲಿ) ಸೀಳಿ, ಸೀಳಲ್ಪಟ್ಟ ಭಾಗವನ್ನು ಒಂದು ಸಣ್ಣ ಮಣ್ಣಿನ ಮಡಿಕೆಯ ಬಾಯಿಯ ಸುತ್ತ ಕಟ್ಟುತ್ತಾರೆ. ನಂತರ ಆ ಮಡಿಕೆಯೊಳಗೆ ಕೆಂಡ ಮತ್ತು ಕರ್ಪೂರ, ಲೋಬಾನ, ರಾಳ ಹಾಗೂ ತೆಂಗಿನ ಸಿಪ್ಪೆಯನ್ನು ತುಂಬಿಸಿ ಮಡಿಕೆಯ ಬಾಯಿಯ ಇನ್ನೊಂದು ಭಾಗದಲ್ಲಿರುವ ಬಿದಿರು ಅಥವಾ ಕೊತ್ತಳಿಗೆಯನ್ನು ಮೃತಪಟ್ಟ ವ್ಯಕ್ತಿಯ ಮಕ್ಕಳ ಪೈಕಿ ಓರ್ವ ಹೆಗಲ ಮೇಲಿಟ್ಟು ಮೃತ ಶರೀರವನ್ನು ಹೊತ್ತೊಯ್ಯುವವರ ಮುಂದಿನಿಂದ ಚಿತೆಯ ಬಳಿಗೆ ಹೋಗುತ್ತಾನೆ. ಇದನ್ನು "ಸೂಕರ ಕೊಂಡೊಯ್ಯುವುದು" ಎಂದು ಕರೆಯಲಾಗುತ್ತದೆ. ಹಿಂಭಾಗದಲ್ಲಿ ಇನ್ನೋರ್ವ ಹೆಗಲ ಮೇಲೆ ಮಣ್ಣಿನ ಪಾತ್ರೆಯಲ್ಲಿ ನೀರನ್ನು ಕೊಂಡೊಯ್ಯುತ್ತಾನೆ. ಹೀಗೆ ಸಾಗಿಸಲ್ಪಟ್ಟ ಮೃತ ಶರೀರವನ್ನು ತೆಂಕು ದಿಕ್ಕು ಅಥವಾ ಉತ್ತರ ದಿಕ್ಕಿಗೆ ತಲೆ ಮಾಡಿ ಚಿತೆಯ ಮೇಲೆ ಮಲಗಿಸಿ ಮುಸುಕು ಹಾಕಲ್ಪಟ್ಟ ವಸ್ತ್ರವನ್ನು ತೆಗೆಯಲಾಗುತ್ತದೆ. ಆಗ ಸೂಕರ ಹಿಡಿದವನು ಅದನ್ನು ಹೆಗಲ ಮೇಲಿಟ್ಟು ಚಿತೆಗೆ ಮೂರು ಸುತ್ತು ಬರುತ್ತಾನೆ.

ಆಗ ಮಣ್ಣಿನ ಮಡಿಕೆಯಲ್ಲಿ ನೀರು ತುಂಬಿಕೊಂಡು ಹೆಗಲ ಮೇಲಿಟ್ಟುಕೊಂಡಿದ್ದವನ ಮಡಿಕೆಯ ಅಡಿಭಾಗಕ್ಕೆ ಕತ್ತಿಯಿಂದ ಸಣ್ಣ ರಂಧ್ರವನ್ನು ಮಾಡಲಾಗುತ್ತದೆ. ಅಷ್ಟರಲ್ಲಿ ಅವನೂ ಸಹಾ ಸೂಕರ ಹಿಡಿದವನ ಜೊತೆ ಚಿತೆಗೆ ಮೂರು ಸುತ್ತು ಬರುತ್ತಾನೆ. ಆ ಬಳಿಕ ಮೃತ ವ್ಯಕ್ತಿಯ ದೊಡ್ಡ ಮಗ ತಲೆಭಾಗದ ಚಿತೆಗೂ ಕಿರಿಯ ಮಗನ ಸಹಿತ ಉಳಿದವರು ಕಾಲಿನ ಭಾಗದ ಚಿತೆಗೂ ಬೆಂಕಿ ಕೊಡುತ್ತಾರೆ. ಹೀಗೆ ಕೊಡಲ್ಪಟ್ಟ ಬೆಂಕಿ ಚಿತೆಗೆ ಆವರಿಸುತ್ತಿದ್ದಂತೆ ಎಲ್ಲರೂ ಸ್ವಲ್ಪ ಹೊತ್ತು ಚಿತೆಗೆ ಬೆನ್ನು ಹಾಕಿ ನಿಲ್ಲುತ್ತಾರೆ. ಅಷ್ಟರಲ್ಲಿ ಚಿತೆ ಪೂರ್ಣಾಹುತಿಯಾಗುತ್ತದೆ. ಇದನ್ನು "ನಡು ಕೂಡುವುದು" ಎನ್ನುವರು. ಹೀಗೆ ನಡುಕೂಡುತ್ತಿದ್ದಂತೆ ಸೂಕರ, (ಮೃತ ವ್ಯಕ್ತಿಯ ಇಷ್ಟದ ವಸ್ತುಗಳೆಲ್ಲವನ್ನೂ) ಮತ್ತು ನೀರು ತುಂಬಿದ್ದ ಮಣ್ಣಿನ ಮಡಿಕೆಯನ್ನು ಚಿತೆಗೆ ಎಸೆಯುತ್ತಾರೆ. ಬಳಿಕ ಚಿತೆಗೆ ಕಟ್ಟಿಗೆ ಕಡಿಯಲು ಉಪಯೋಗಿಸಿದ ಕೊಡಲಿಯನ್ನು ಚಿತೆಯ ಒಂದು ಬದಿಯಿಂದ ಇನ್ನೊಂದು ಬದಿಗೆ ಎಸೆದು ಎಲ್ಲರೂ ಮನೆಗೆ ಬರುತ್ತಾರೆ. ಆ ದಿನ ಮೃತ ವ್ಯಕ್ತಿಯ ಮನೆಯಲ್ಲೇ ಕುಟುಂಬಸ್ಥರೆಲ್ಲರೂ ದೀಪ ಉರಿಸಿಟ್ಟು ಮಲಗುತ್ತಾರೆ. ಮರುದಿನ ಬೆಳಗ್ಗೆ ಕುಟುಂಬಸ್ಥರು ಚಿತೆಯ ಬಳಿಗೆ ಬರುತ್ತಾರೆ. ಆಗ ಚಿತೆಯಿಂದ ಉರುಳಿ ಬಿದ್ದಿರುವ ಕಟ್ಟಿಗೆ ತುಂಡುಗಳನ್ನು ಮೃತ ವ್ಯಕ್ತಿಯ ಮಕ್ಕಳು ಹೆಕ್ಕಿ ಮತ್ತೆ ಅದೇ ಚಿತೆಯೊಳಕ್ಕೆ ಹಾಕಿ ಉರಿಸುತ್ತಾರೆ. ಇದನ್ನು "ಕೊಳ್ಳಿ ಕೂಟುನೆ" (ಕೊಳ್ಳಿ ಒಟ್ಟುವುದು) ಎನ್ನಲಾಗುತ್ತದೆ. ನಂತರ ೩ ನೇ ದಿನ ಕುಟುಂಬಸ್ಥರು ಮತ್ತು ಮನೆಯವರು ಚಿತೆಯ ಬಳಿಗೆ ಬರುತ್ತಾರೆ. ಅಲ್ಲಿ ಮೃತ ವ್ಯಕ್ತಿಯ ಮಕ್ಕಳು ಚಿತೆಯ ತಲೆಭಾಗದ ಬೂದಿಯನ್ನು

ಹಾರೆಯ ಮೂಲಕ ತಲೆ ಭಾಗದಲ್ಲಿ ರಾಶಿ ಮಾಡಿ, ಕಾಲಿನ ಭಾಗದ ಬೂದಿಯನ್ನು ಚಿತೆಯ ಕಾಲಿನ ಭಾಗದಲ್ಲಿ ರಾಶಿ ಮಾಡುತ್ತಾರೆ. ಹೀಗೆ ಎರಡು ವಿಭಾಗ ಮಾಡಲ್ಪಟ್ಟ ಬೂದಿ ಮತ್ತು ಎಲುಬಿನ ಒಂದು ಭಾಗವನ್ನು ಒಂದು ಸಣ್ಣ ಮಡಿಕೆಯಲ್ಲಿ ಸಂಗ್ರಹಿಸಿಡುತ್ತಾರೆ. ನಂತರ ವಿಭಾಗಿಸಲ್ಪಟ್ಟ ಬೂದಿಯ ಮಧ್ಯಭಾಗದಲ್ಲಿ (ಚಿತೆಯ ಒಳ ಭಾಗದಲ್ಲಿ) ಒಂದು ಹೊಂಡ ತೋಡಿ ಆ ಹೊಂಡಕ್ಕೆ ವಿಭಾಗಿಸಲ್ಪಟ್ಟ ಬೂದಿಯನ್ನು ತುಂಬಿಸುತ್ತಾರೆ.

ನಂತರ ಎಲ್ಲರೂ ಅದರ ಮೇಲೆ ಅರಶಿನ ನೀರು (ಕುರ್ದಿ) ಯನ್ನು ಚಿಮುಕಿಸಿ ಅರಶಿನ ಮಿಶ್ರಿತ ಅಕ್ಕಿಯನ್ನು (ಮಂಜೊಲರಿ) ಹಾಕಿದಾಗ ಮೃತ ವ್ಯಕ್ತಿಯ ಮಕ್ಕಳು ಅದಕ್ಕೆ ಚಿತೆಯ ಸುತ್ತಲಿನ ಮಣ್ಣನ್ನು ತುಂಬಿಸಿ ಮೇಲ್ಭಾಗಕ್ಕೆ ನೀರು ಹಾಕಿದ ಮಣ್ಣನ್ನು ಹದಗೊಳಿಸಿ ಗೋರಿಯಾಕಾರದಲ್ಲಿ ಮೆತ್ತುತ್ತಾರೆ. ಇದನ್ನು "ಬೂದಿಮುಚ್ಚುನೆ" ಅಥವಾ "ಅರಿಬಿರ್ಕುನೆ" ಎಂದು ಕರೆಯುತ್ತಾರೆ. ನಂತರ ಅಲ್ಲಿ ಮಡಿಕೆಯಲ್ಲಿ ಸಂಗ್ರಹಸಿದ್ದ ಎಲುಬು ಮತ್ತು ಚಿತಾ ಭಸ್ಮದೊಂದಿಗೆ ಎಲ್ಲರೂ ಮನೆಗೆ ಬಂದು ಸಂಗ್ರಹಿಸಿದ ಚಿತಾ ಭಸ್ಮದ ಮಡಿಕೆಯ ಬಾಯಿಯನ್ನು ಮುಚ್ಚಿ ಮರದ ಗೆಲ್ಲಿನಲ್ಲಿ ನೇತು ಹಾಕುತ್ತಾರೆ. ನಂತರ ಆ ದಿನ ರಾತ್ರಿ ಮೃತಪಟ್ಟವ್ಯಕ್ತಿ ಮೃತಪಟ್ಟ ಜಾಗ ಅಥವಾ ಮೃತ ಶರೀರವನ್ನು ಇಟ್ಟಿದ್ದ ಜಾಗದಲ್ಲಿ ದೀಪವನ್ನು ಉರಿಸಿ ನೆಲದಲ್ಲಿ ಬೂದಿಯನ್ನು ಹರಡಿ ಅದರ ಮೇಲೆ ಒಂದು ಪಾತ್ರೆಯಲ್ಲಿ ನೀರು ಇಡುತ್ತಾರೆ. ಅಥವಾ ಪಾತ್ರೆಯ ನೀರಿಗೆ ತಾಗುವಂತೆ ಅರಶಿನ ಮತ್ತು ಮಸಿಯನ್ನು ನೂಲಿಗೆ ಕಟ್ಟಿ ಮಾಡಿನ ಅಡ್ಡಕ್ಕೆ ನೇತಾಡಿಸುತ್ತಾರೆ. ಇದು ಮೃತ ವ್ಯಕ್ತಿಯ ಕಾಲೆ (ಪ್ರೇತಾತ್ಮ) ಸ್ಥಳ ಬಿಟ್ಟು ಹೋಗಿದೆಯೋ — ಇಲ್ಲವೋ ಎಂದು ತಿಳಿಯುವ ಉದ್ದೇಶವೆನ್ನಲಾಗುತ್ತಿದೆ.

**೩.೮.೨ ಉತ್ತರ ಕ್ರಿಯೆಯ ವಿಧಿ ವಿಧಾನ**

ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದಲ್ಲಿ ಮೃತಪಟ್ಟ ವ್ಯಕ್ತಿಯ ಅಂತಿಮ ಕ್ರಿಯೆ ನಡೆಸಿದ ಬಳಿಕ ನಡೆಸುವ ಮೃತ ಶಾಂತಿ ಕಾರ್ಯವನ್ನು ಬೊಜ್ಜ, ಸಾವು, ಉತ್ತರ ಕ್ರಿಯೆ, ಶುದ್ಧ (ಶುದ್ಧದ ಊಟ) ಎಂದು ಮುಂತಾಗಿ ಕರೆಯುತ್ತಾರೆ. ಆ ದಿನ ಬೆಳಗ್ಗೆ ಮಾಗಣೆ ಗುರಿಕಾರ ಅಥವಾ ಸೋದರ ಮಾವ ದೇವಸ್ಥಾನದಿಂದ ಪುಣ್ಯತೀರ್ಥವನ್ನು ತಂದು ಮನೆಯ ಹೊರಗೆ ಎಲ್ಲಾದರೂ ಮರದ ಗೆಲ್ಲಿಗೆ ಸಿಕ್ಕಿಸಿ ಆತನೇ ಮುಂದೆ ನಿಂತು ಉಳಿದ ಕ್ರಿಯಾ ವಿಧಿಗಳನ್ನು ನಡೆಸುತ್ತಾನೆ. ಗುರಿಕಾರ ಮೊದಲು ಮೂರು ಸಲ ಕುಡ್ತೆ ಅಥವಾ ಸೇರಿನ ಒಳ ಭಾಗದಿಂದ ಮೂರು ಬಾರಿ ಹಾಗೂ ಅದೇ ರೀತಿ ಸೇರಿನ ಅಡಿ ಭಾಗದಿಂದ ಮೂರು ಬಾರಿ ಅಳೆದು "ಸರ್ವೆರೆಡಲಾ ಮಲೆಕ್ಕ್ ಅರಿ ಅಲಪುವೊ" (ಸರ್ವರಲ್ಲೂ ಮಲೆ (ಕಾಡಿಗೆ) ಅಕ್ಕಿ ಅಳೆಯುತ್ತೇವೆಂದು) ಹೇಳಿ ಪಾತ್ರೆಗೆ ಹಾಕುತ್ತಾನೆ. ಆಗ ಗುರಿಕಾರ ಕುರ್ದಿ ನೀರನ್ನು (ಅರಶಿನ ಸುಣ್ಣ ಮಿಶ್ರಿತ ನೀರನ್ನು) ಮೃತ ವ್ಯಕ್ತಿಯ ಪತ್ನಿ, ಮಕ್ಕಳು ಹಾಗೂ ಕುಟುಂಬಸ್ಥರ ಮೇಲೆ ಸಿಂಪಡಿಸಿದಾಗ ಕುಟುಂಬದ ಹೆಂಗಸರು ಅಕ್ಕಿಯನ್ನು ತೊಳೆಯುತ್ತಾರೆ. ಬಳಿಕ ಆ ಅಕ್ಕಿಯನ್ನು ಮೃತ ವ್ಯಕ್ತಿಯ ಕುಟುಂಬದಲ್ಲದವರು ದೂಪೆಯ (ಗೋರಿ) ಹತ್ತಿರವೋ ಅಥವಾ ಮನೆ ಸಮೀಪವೊ, ಎಲ್ಲಾದರೂ ಮನೆಯಿಂದ ಹೊರಗೆ ಅಡುಗೆ ಮಾಡುತ್ತಾರೆ. ನಂತರ ದೂಫೆಯಲ್ಲಿಗೆ ಬಡಿಸಲು ತಂದಿದ್ದ ಪಾತ್ರೆಯಲ್ಲಿ ಉಳಿಸಿದ್ದ ಸ್ವಲ್ಪಗಂಜಿ, ಪಲ್ಯ, ಪಾಯಸಗಳನ್ನು ಬಾಳೆಎಲೆಯಿಂದ ಮಾಡಿದ "ಔಡಿ" (ಬಾಳೆ ಎಲೆಯ ತುಂಡನ್ನು ಎರಡೂ ಕಡೆ ಕಟ್ಟಿ ಮಾಡಲಾಗುವ ವಿಶೇಷ ವಸ್ತು)ಯಲ್ಲಿ ಬಡಿಸಲಾಗುತ್ತದೆ. ನಂತರ ಮೃತ ವ್ಯಕ್ತಿಯ ಹಿರಿಯ ಮಗ ಹಿಂದಕ್ಕೆ ಕೈಕಟ್ಟಿ ಬಡಿಸಿಟ್ಟಿದ್ದ ಆ ಔಡಿಯನ್ನು ಹಲ್ಲಿನಿಂದ ಕಚ್ಚಿ ಧೂಪೆ (ಗೋರಿ)ಯ ಮೇಲೆ ಹಾಕಿ ಪ್ರಾರ್ಥಿಸಿ ಮನೆಗೆ ಹಿಂತಿರುಗುತ್ತಾರೆ. ಹಾಗೆ ಮನೆಗೆ ಹಿಂತಿರುಗುವಾಗ ಗುರಿಕಾರ ಆ ಧೂಪೆ (ಗೋರಿಯ) ಬಳಿಯಿಂದ ಮೂರು ಸಣ್ಣ ಕಲ್ಲುಗಳನ್ನು ಹೆಕ್ಕಿಕೊಂಡು ಬಂದು ಮನೆಯ ಮುಂಭಾಗದಲ್ಲಿ ನಿಲ್ಲುತ್ತಾನೆ. ನಂತರ ತಾನು ಹೆಕ್ಕಿಕೊಂಡು ಬಂದಿರುವ ಮೂರು ಕಲ್ಲಿನ ಪೈಕಿ ಒಂದು ಕಲ್ಲನ್ನು

ಪೂರ್ವಕ್ಕೆಸೆದು "ಇದು ನಿನ್ನ ಇಷ್ಟದ ನೆಲೆಯಾದ ಭೂಮಿ. ಈ ಭೂಮಿಯಲ್ಲಿ ನೀನು ಮೊದಲು ಹೇಗಿದ್ದಿಯೋ ಹಾಗೆಯೇ ಇನ್ನು ಮುಂದೆಯೂ ಇರು" ಎಂದು ಪ್ರಾರ್ಥಿಸುತ್ತಾನೆ. ನಂತರ ಎರಡನೇ ಕಲ್ಲನ್ನು ಪಶ್ಚಿಮಕ್ಕೆಸೆದು (ಆಯಾ ವೃತ್ತಿಗೆ ಅನುಸಾರವಾಗಿ) ಭೂತ ಕಟ್ಟುವವ ಮೃತಪಟ್ಟಿದ್ದರೆ- "ಇದು ನಿನಗೆ ಭೂತಕಟ್ಟಲು ಹೋಗುವ ದಾರಿ" ಎಂದೂ ಅಥವಾ ಮೃತ ವ್ಯಕ್ತಿ ಮಂತ್ರವಾದ ಮತ್ತು ಮದ್ದು ಕೊಡುವವನಾಗಿದ್ದರೆ- "ಇದು ನಿನಗೆ ಮಂತ್ರವಾದ ಮತ್ತು ಮದ್ದು ಕೊಡಲು ಹೋಗುವ ದಾರಿ"ಯೆಂದೂ, ಅದೇ ರೀತಿ ಮೂರನೇ ಕಲ್ಲನ್ನು ಮನೆಯ ಕಡೆ ಎಸೆದು – "ಇದು ನಿನ್ನ ಮನೆಗೆ ಹೋಗುವ ದಾರಿ" ಎಂದು ಮೃತಪಟ್ಟ ವ್ಯಕ್ತಿಯ ಪ್ರೇತಾತ್ಮಕ್ಕೆ ದಾರಿ ತೋರಿಸಿ ಮನೆಯತ್ತ ಬಂದು ಮೃತ ವ್ಯಕ್ತಿಯ ಕುಟುಂಬಿಕರನ್ನು (ಸಾವಲೆರ್) ಉಟ್ಟ ಉಡುಗೆಯಲ್ಲೇ ತಣ್ಣೀರಿನಲ್ಲಿ ಸ್ನಾನ ಮಾಡಲು ಹೇಳಿ ಅದೇ ಒದ್ದೆ ಬಟ್ಟೆಯಲ್ಲೇ ಅಂಗಳದಲ್ಲಿ ಸಾಲಾಗಿ ನಿಲ್ಲಲು ಸೂಚಿಸುತ್ತಾನೆ.

ಬಳಿಕ ಬೆಳಗ್ಗೆ ತಾನು ತಂದಿದ್ದ ಪುಣ್ಯ ತೀರ್ಥವನ್ನು ಅಥವಾ ಕುರ್ದಿ (ಅರಶಿನ ನೀರನ್ನು) ನೀರನ್ನು ಸಾವಲರ ಮೇಲೆ ಸಿಂಪಡಿಸಿ ಧೂಪೆಗೆ ಬಡಿಸಲು ತೆಗೆದುಕೊಂಡು ಹೋಗಿ ಉಳಿದಿದ್ದ ಉಪ್ಪು ಹಾಕದ ಅರೆಬರೆ ಬೆಂದ ಅನ್ನ ಮತ್ತು ಗಂಜಿಯನ್ನು ಕೊಡುತ್ತಾನೆ. ಇದನ್ನು "ದುಃಖದ ಗಂಜಿ" ಎನ್ನಲಾಗುತ್ತದೆ. ಹೀಗೆ ಗುರಿಕಾರ ಕೊಟ್ಟ ದುಃಖದ ಗಂಜಿಯನ್ನು ಮೃತ ವ್ಯಕ್ತಿಯ ಕುಟುಂಬಸ್ಥರು (ಸಾವಲರು) ಮೂರು ಬಾರಿ "ದುಃಖದ ಗಂಜಿ" ತೆಗೆದುಕೊಳ್ಳುತ್ತೇವೆಂದು" ಹೇಳಿ ಔಡಿಯಲ್ಲಿ ಕುಡಿಯುತ್ತಾರೆ. ಬಳಿಕ ಎಲ್ಲರೂ ಸ್ನಾನ ಮಾಡಿ ಆ ದಿನ ಮಾಡಿದ ಅಡುಗೆಯನ್ನು ಬಾಳೆ ಎಲೆಯಲ್ಲಿ ಹೊರಗೆ ಕಾಗೆಗೆ ಇಟ್ಟು ನಂತರ ಎಲ್ಲರೂ ಊಟ ಮಾಡುತ್ತಾರೆ. ಇದು ಸಾವಿನ ಕೊನೆ ಹಂತವಾಗಿರುವುದರಿಂದ ಮತ್ತು ಈ ಕೊನೆ ಹಂತ ಆಗುವವರೆಗೆ ಮೃತ ವ್ಯಕ್ತಿಯ ಕುಟುಂಬಿಕರು (ಸಾವಲರು) ಉಪವಾಸ ಇದ್ದಿರುವುದರಿಂದ ಈ "ದುಃಖದ ಗಂಜಿಗೆ ಬಹಳ ವಿಶೇಷ ಮಹತ್ವವಿದೆ.

**೩.೮.೩ ಪ್ರೇತಾತ್ಮವನ್ನು ಒಳಗೆ ಸೇರಿಸುವುದು**

ಸಾವಿನ (ಮೃತಶಾಂತಿಯ) ವಿಧಿ-ವಿಧಾನಗಳೆಲ್ಲ ಮುಗಿದ ನಂತರ ಅದೇ ದಿನ ರಾತ್ರಿ ಪ್ರೇತಾತ್ಮವನ್ನು ಮನೆಯೊಳಗೆ ಸೇರಿಸಿಕೊಳ್ಳುವ ಕ್ರಮವಿದೆ. ಇದನ್ನು "ಕುಲೆಕ್ಕ್ ಸೇರವುನು ಅಥವಾ "ಪದಿನಾಜಿ ಬಳಸುನು" (ಹದಿನಾರಕ್ಕೆ ಬಡಿಸುವುದು) ಅಥವಾ "ಮೀಚೆಲ್ ವನಸ್" (ಸ್ನಾನದ ಬಳಿಕದ ಊಟ) ಎಂದು ಮುಂತಾಗಿ ಕರೆಯಲಾಗುತ್ತದೆ. ಮೃತ ವ್ಯಕ್ತಿಯ ಕುಟುಂಬ ದೊಡ್ಡದಾಗಿರುತ್ತಿದ್ದರೆ ಕುಟುಂಬಸ್ಥರೆಲ್ಲ ಸೇರಿ ಹಿಂದೆಲ್ಲಾ ರಾತ್ರಿಯ ಅಡುಗೆಗೆ ಕೋಳಿ ಸಾಂಬಾರನ್ನು ದೊಡ್ಡ ಮಟ್ಟದಲ್ಲಿ ಮಾಡಿಸುತ್ತಿದ್ದರು. ಈ ಕ್ರಮವನ್ನು ಈಗಲೂ ಅನುಸರಿಸಲಾಗುತ್ತದೆ.

ಅದೇ ರೀತಿ ರಾತ್ರಿಯ ಅಡುಗೆಯನ್ನು ಸಹಾ ಮೃತ ವ್ಯಕ್ತಿಯ ಮನೆಯವರು ಮಾಡದೆ ಅವರ ಕುಟುಂಬಸ್ಥರೇ ಮಾಡುತ್ತಾರೆ. ಅಡುಗೆ ಎಲ್ಲ ತಯಾರಾದ ಬಳಿಕ ದಪ್ಪವಾದ ಮೂರು ರೊಟ್ಟಿ ಅಥವಾ ದೋಸೆಯನ್ನು ಮಾಡಿ ಅದನ್ನು ಹನ್ನೊಂದು ತುಂಡು ಮಾಡಿ ಕೋಳಿ ಸಾಂಬಾರಿನೊಂದಿಗೆ ಬಾಳೆ ಎಲೆಯಲ್ಲಿ ಅಗೇಲು ಬಡಿಸಿ ಅದನ್ನು ಗೆರಸೆಯಲ್ಲಿ ಅಂಗಳದಲ್ಲಿಡುತ್ತಾರೆ. ನಂತರ ಎಣ್ಣೆಯಲ್ಲಿ ಮುಳುಗಿಸಿದ ಬತ್ತಿಯನ್ನು ಹೊತ್ತಿಸಿ ಆ ಬಾಳೆ ಎಲೆಯ ತುದಿಯಲ್ಲಿರಿಸಲಾಗುತ್ತದೆ. ಆಗ ಕುಟುಂಬದ ಮಾಗಣೆ ಗುರಿಕಾರ ಅಥವಾ ಸೋದರ ಮಾವ ಕುಟುಂಸ್ಥರೆಲ್ಲರ ಪರವಾಗಿ ಪ್ರಾರ್ಥಿಸಿ "ಕಾಲ ಕರಿದ್ ಪೋಂಡು ಅಂಚಾದ್ ದೊಂಬುಡು ಉಂತುದಿತ್ತಿನ ಇರೆನ್ ಇನಿ ಇರ್ನನೇ ಮಾಡ ನೆರೆಳ್‌ಗ್ ಲೆಪ್ಪುವೊ. ಅಂಚಾದ್ ದುಂಬು ಈರ್ ಎಂಚ ಪೋವೊಂದು ಬರೊಂದು ಇತ್ತರೋ ಅವ್ವೇ ರೀತಿ ನನ ದುಂಬುಗುಲಾ ಈ ಸೂತ್ರೊಗು

ಬರೊಂದಿಪ್ಪೊಡು" (ಕಾಲ ಕಳೆದು ಬಿಸಿಲಲ್ಲಿದ್ದ ನಿಮ್ಮನ್ನು ಇಂದು ನಿಮ್ಮದೇ ಮನೆಯ ಮಾಡಿನ ನೆರಳಿಗೆ ಕರೆಯುತ್ತಿದ್ದೇವೆ. ಹಾಗಾಗಿ ಹಿಂದೆ ನೀವು ಯಾವ ರೀತಿ ಹೋಗುತ್ತಾ-ಬರುತ್ತಾ ಇದ್ದಿರೋ ಅದೇ ರೀತಿ ಮುಂದೆಯೂ ಈ ಸೂತ್ರಕ್ಕೆ ಬರುತ್ತಿರಬೇಕು) ಎಂದು ಗೆರಸೆಯಲ್ಲಿ ಬಡಿಸಿಟ್ಟಿದ್ದ ಅಗೆಲಿಗೆ (ಹರಕೆಯ ಎಡೆಗೆ) ಎಲ್ಲರೂ ಅಕ್ಕಿಯನ್ನೊ ಅಥವಾ ಅನ್ನವನ್ನೋ ಸಂಪ್ರೋಕ್ಷಿಸುತ್ತಾರೆ.

ಬಳಿಕ ಮೃತ ವ್ಯಕ್ತಿಯ ಹಿರಿಯ ಮಗ ಬಿಳಿ ಬಟ್ಟೆಯನ್ನು ಹೆಗಲಿಗೆ ಹಾಕಿ ಅದರ ಇನ್ನೊಂದು ಭಾಗವನ್ನು ಸೆರಗಿನಂತೆ ಹಾಸಿ ಅದರಲ್ಲಿ ಬಡಿಸಿಟ್ಟಿದ್ದ ಗರಸೆಯನ್ನಿಟ್ಟು ಎರಡೂ ಕೈಗಳಿಂದಲೂ ಗರಸೆಯನ್ನು ಹಿಡಿದುಕೊಂಡು ಹಿಂದೆ-ಹಿಂದೆ ಹೆಜ್ಜೆಯಿಡುತ್ತಾ ಬರುತ್ತಾನೆ. ಹೀಗೆ ಬರುತ್ತಿರುವಾಗ ಆ ವ್ಯಕ್ತಿಯ ತಂದೆಯಾದರೆ "ಬಲೆ ಅಮ್ಮೆರೆ ಬಲೇ ಬಲೇ......... ಎಂದೂ, ತಾಯಿಯಾಗಿದ್ದರೆ ಬಲೆ ಅಪ್ಪೆ ಬಲೆ, ಬಲೇ ಎಂದೂ (ತಂದೆಯಾದರೆ ಬನ್ನಿ ತಂದೆಯೆಂದೂ, ತಾಯಿಯಾದರೆ "ಬನ್ನಿ ತಾಯಿಯೆಂದೂ) ಕರೆಯುತ್ತಾ ಸೆರಗಿನಲ್ಲಿ ಗೆರಸೆಯನ್ನು ಮನೆಯೊಳಕ್ಕೆ ತಂದು ಮನೆಯ ಚಾವಡಿ ಅಥವಾ ದೈವ-ದೇವರ ಕೋಣೆಯಲ್ಲಿ ಮಣೆಯ ಮೇಲೆ ಬಿಳಿ ಬಟ್ಟೆಯನ್ನು ಹಾಸಿ ಅದರ ಮೇಲೆ ಗೆರೆಸೆಯನ್ನಿಡುತ್ತಾನೆ. ಇದನ್ನು ಕುಲೆಯನ್ನು (ಪ್ರೇತಾತ್ಮವನ್ನು) ಮನೆಯೊಳಕ್ಕೆ ಸೇರಿಸಿಕೊಳ್ಳುವುದು (ಕುಲೆ ಸೇರ್ಸವುನು, ಕುಲೆ ಲೆಪ್ಪುನು) ಎಂದು ಕರೆಯಲಾಗುತ್ತದೆ.

**೩.೮.೪ ಹದಿನಾರನೇ ಶಾಸ್ತ್ರದ ವಿಧಿವಿಧಾನ**

ಮೃತ ವ್ಯಕ್ತಿಯ ಮೃತ ಶಾಂತಿಯಾದ ಬಳಿಕ ಹದಿನಾರನೇ ದಿನದಂದು ಪ್ರೇತಾತ್ಮವನ್ನು (ಕುಲೆಯನ್ನು) ಒಳಗೆ ಸೇರಿಸಿಕೊಂಡ ಬಳಿಕ ಪದಿನಾಜಿ ಬಳಸುನ (ಹದಿನಾರಕ್ಕೆ ಬಡಿಸುವ) ಶಾಸ್ತ್ರ ನಡೆಯುತ್ತದೆ. ಅಂದುರಾತ್ರಿ ಅಂಗಳದಲ್ಲಿ ಗರಸೆಯಲ್ಲಿ ಬಡಿಸಿಟ್ಟಿದ್ದ ಅಗೇಲನ್ನು ಮೃತ ವ್ಯಕ್ತಿಯ ಹಿರಿಯ ಮಗ ಸೆರಗಿನಲ್ಲಿ ಹಿಡಿದುಕೊಂಡು ಹಿಂದೆ ಹಿಂದೆ ಮನೆಯೊಳಕ್ಕೆ ಬಂದು ಕುಲೆಯನ್ನು ಒಳಕ್ಕೆ ಕರೆಸಿಕೊಂಡು ಆ ಗೆರಸೆಯನ್ನು ಚಾವಡಿ ಅಥವಾ ದೈವ ದೇವರ ಕೋಣೆಯ ನೆಲದಲ್ಲಿ ಮಣೆಯ ಮೇಲೆ ಬಿಳಿ ಬಟ್ಟೆ ಹಾಸಿ ಅದರ ಮೇಲೆ ಇಡಲಾಗುತ್ತದೆ. ನಂತರ ಹದಿನಾರು ಬಾಳೆ ಎಲೆಯ ತುದಿಯಲ್ಲಿ, ಆ ದಿನ ಮಾಡಿದ್ದ ಅನ್ನ ಸಾಂಬಾರು ಪಲ್ಯಗಳನ್ನು ಬಡಿಸಿ ಊದುಬತ್ತಿ ಹಾಗೂ ಎಣ್ಣೆ ಬತ್ತಿಯನ್ನು ಪ್ರತೀ ಎಲೆಗಳ ತುದಿಯಲ್ಲಿ ಹೊತ್ತಿಸಿಡಲಾಗುತ್ತದೆ. ಬಳಿಕ ಮಾಗಣೆಗುರಿಕಾರ ಇಡೀ ಕುಟುಂಬಸ್ಥರ ಪರವಾಗಿ ಪ್ರಾರ್ಥಿಸಿ ಬಡಿಸಿಟ್ಟಿದ್ದ ೧೬ ಎಲೆಗಳಿಂದ ಒಂದು ಎಲೆಯನ್ನು ಜಾರಿಸಿ ಆ ಜಾಗದಲ್ಲಿ ಮೊದಲು ಕುಲೆಯನ್ನು ಸೇರಿಸಿಕೊಳ್ಳುವಾಗ ತಂದು ಮಣೆಯಲ್ಲಿರಿಸಿದ ಅಗೇಲನ್ನು ಇಟ್ಟು ಮತ್ತೊಮ್ಮೆ ಪ್ರಾರ್ಥಿಸುತ್ತಾನೆ. ಇದನ್ನು ಹದಿನಾರಕ್ಕೆ ಸೇರಿಸುವುದು ಎಂದು ಕರೆಯಲಾಗುತ್ತದೆ. ಹದಿನಾರನೇ ಶಾಸ್ತ್ರ ಉತ್ತರ ಕ್ರಿಯೆಯ ಕೊನೇ ಹಂತವಾಗಿರುವುದರಿಂದ ಮತ್ತು ಮೃತ ಪಟ್ಟ ವ್ಯಕ್ತಿಯ ಪ್ರೇತಾತ್ಮಕ್ಕೆ ಆ ಲೋಕದಲ್ಲೂ ಶಾಶ್ವತವಾದ ಒಂದು ಸ್ಥಾನವನ್ನು ಕಲ್ಪಿಸುವ ನಂಬಿಕೆ ಇದಾಗಿರುವುದರಿಂದ ಕ್ರಮ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

## ಅಧ್ಯಾಯ – ೪

## ೪ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ವಾರ್ಷಿಕಾವರ್ತನದ ಆಚರಣೆಗಳು

"ವಾರ್ಷಿಕಾವರ್ತನ ಆಚರಣೆ ಎಂದರೆ ವರ್ಷದ ವಿವಿಧ ಋತುಮಾನ ಹಬ್ಬ, ಹರಿದಿನ ಹಾಗೂ ಆರಾಧನೆಗಳಿಗೆ ಅನುಸಾರವಾಗಿ ನಡೆಸಲ್ಪಡುವ ಆಚರಣೆಗಳು ಎಂದರ್ಥ. ಕುಣಿತ ಹಾಡು, ವಿಶಿಷ್ಟ ಮಾತುಗಾರಿಕೆಯೆಂಬ ಕಲೆಯನ್ನೇ ವೃತ್ತಿ ಮತ್ತು ಬದುಕನ್ನಾಗಿಸಿಕೊಂಡು ಕಲೆಯೇ ಜೀವನ, ಜೀವನವೇ ಕಲೆ, ತಾನೂ ನಲಿದು ಸುತ್ತಲ ಸಮಾಜವನ್ನು ಸಂತೋಷದಿಂದ ನಲಿಯುವಂತೆ ಪ್ರೇರೇಪಿಸುತ್ತಾ ಆ ಮೂಲಕ ಸಾಮಾಜಿಕ ಪರಿವರ್ತನೆಗೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟವರೆಂದರೆ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು. ಹಾಗಾಗಿ ಈ ಸಮುದಾಯದ ಜೀವನಾವರ್ತನ ಭಾವನಾತ್ಮಕತೆಯಿಂದ ಕೂಡಿದ್ದರೆ, ವಾರ್ಷಿಕಾವರ್ತನ ಕಲಾತ್ಮಕತೆಯಿಂದ ಕೂಡಿರುತ್ತದೆ. ಹಾಡು ಕುಣಿತಗಳನ್ನೇ ಜೀವಾಳವನ್ನಾಗಿಸಿಕೊಂಡ ಇವರು ಹವಾಮಾನಕ್ಕನುಗುಣವಾಗಿ ಬರುವ ಋತುಮಾನ, ವ್ಯವಸಾಯ ಹಬ್ಬ ಹರಿದಿನ ಮತ್ತು ಧಾರ್ಮಿಕ ಆಚರಣೆಗಳ ದಿಕ್ಸೂಚಿಯಂತಾಗಿದ್ದಾರೆ. ಅದೇ ರೀತಿ ಸಾಂಸ್ಕೃತಿಕ ವಕ್ತಾರರಾಗಿ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತಾ, ಪ್ರತೀಯೊಂದು ಸಮುದಾಯದ ಜವಾಬ್ದಾರಿಯನ್ನು ಎಚ್ಚರಿಸಿ ಜಾಗೃತಗೊಳಿಸುತ್ತಾ, ತುಳುನಾಡ ಸಂಸ್ಕೃತಿಯ ರಕ್ಷಕರಾಗಿರುವ ಈ ಸಮುದಾಯ ತುಳುನಾಡ ಸಂಸ್ಕೃತಿಯ ನಿರ್ದೇಶಕರೆನಿಸಿಕೊಂಡು ತುಳುನಾಡ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದಾರೆ.

### ೪.೧ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಮತ್ತು ಹಬ್ಬ ಹರಿದಿನಗಳು :

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಆಚರಿಸಲ್ಪಡುವ ಹಬ್ಬ ಹರಿದಿನಗಳಿಂದ ಹಿಡಿದು ಋತುಮಾನೀಯ ವ್ಯವಸಾಯ ಸಂಬಂಧಿ ಮತ್ತು ದೈವಿಕ ಸಂಬಂಧಿ ಹಬ್ಬ, ಉತ್ಸವಾದಿ ಆಚರಣೆಗಳು ದೈವಾರಾಧನೆಯ ಹಿನ್ನೆಲೆಯಲ್ಲೂ, ಅದೇ ರೀತಿ ಕುಣಿತ, ಹಾಡು ಮತ್ತು ವಿಶಿಷ್ಟ ಶೈಲಿಯ ಮಾತುಗಾರಿಕೆಯೊಂದಿಗಿನ ಕುಣಿತ ನೃತ್ಯ ಮುಂತಾದವು ಕಲಾತ್ಮಕತೆಯ ನೆಲೆಯಲ್ಲೂ ಆಚರಿಸಲ್ಪಡುತ್ತವೆ. ಹೀಗಾಗಿ ಈ ಸಮುದಾಯದವರ ವಾರ್ಷಿಕಾವರ್ತನದ ಆಚರಣೆಗಳು ತುಳುನಾಡಿನ ಸಾಂಸ್ಕೃತಿಕ ನೆಲೆ, ಆರಾಧನೆ ಮತ್ತು ಕಲಾತ್ಮಕ ಹಿನ್ನೆಲೆಯ ಸಮಷ್ಟಿ ಕಲೆಯಾಗಿ ಪರಿಣಮಿಸಿದೆ. ಈ ಸಮುದಾಯದ ಹಿರಿಯರ ಪ್ರಕಾರ ಸ್ವರ್ಗ ಲೋಕದಲ್ಲಿ ಶ್ರೀ ಮನ್ನಾರಾಯಣ ದೇವರ ಆಸ್ಥಾನದಲ್ಲಿ ನರ್ತಕರಾಗಿದ್ದ ಮೂಲತ: ಡೊಂಬರ ವಂಶಸ್ಥರಾಗಿದ್ದ ಈ ಸಮುದಾಯ ಕುಣಿದು ನರ್ತನಗೈಯ್ಯುತ್ತಾ ವಿವಿಧ ವಿನೋದಾವಳಿಗಳಿಂದ ಸ್ವರ್ಗಲೋಕವನ್ನು ಸಂತೋಷಪಡಿಸುವ ಕಾಯಕದಲ್ಲಿ ತೊಡಗಿದ್ದರಂತೆ.

ಹೀಗಾಗಿ ಶ್ರೀ ಮನ್ನಾರಾಯಣ ದೇವರಿಗೆ ಈ ಸಮುದಾಯದವರ ಮೇಲೆ ಅತ್ಯಂತ ಪ್ರೀತಿ, ವಾತ್ಸಲ್ಯಗಳಿದ್ದುವಂತೆ. ಆದರೆ ಇದನ್ನು ನೋಡಿ ಮತ್ಸರ ಪಟ್ಟ ಆಸ್ಥಾನದ ಇತರು ಈ ನರ್ತಕ ವಂಶಸ್ಥ ವೃತ್ತಿಯವರನ್ನು ಹೇಗಾದರೂ ಮಾಡಿ ಸ್ವರ್ಗಲೋಕದಿಂದ ಹೊರಗಟ್ಟಬೇಕೆಂದು ಪಿತೂರಿ ನಡೆಸಿ ಇವರಿಗಾಗಿ ಒಂದು ಸ್ಪರ್ಧೆಯನ್ನೇರ್ಪಡಿಸಿದರು. ಈ ಸ್ಪರ್ಧೆಯ ಪ್ರಕಾರ ಎರಡು ಕಡೆ ಹಾಕಿದ ಕಂಬದ ನಡುವೆ ಕಟ್ಟಿದ ಹಗ್ಗದ ಮೇಲೆ ಈ ಸಮುದಾಯದ ನರ್ತಕರು ಕೋಲು ಹಿಡಿದುಕೊಂಡು ನರ್ತಿಸಬೇಕು. ಈ ವೇಳೆ ಅಕಸ್ಮಾತ್ ಹಗ್ಗದಿಂದ ಕೆಳಕ್ಕೆ ಬಿದ್ದರೂ ಸಹಾ, ಕೈಯಲ್ಲಿ ಹಿಡಿದುಕೊಂಡಿದ್ದ ಕೋಲು ಮಾತ್ರ ಕೈಯಿಂದ ತಪ್ಪಿದ್ದಲ್ಲಿ ಸ್ವರ್ಗಲೋಕದಿಂದ ಭೂಲೋಕಕ್ಕೆ ತೆರಳಬೇಕೆಂಬುದು ಸ್ಪರ್ಧಾವಿಷಯವಾಗಿತ್ತು.

ಇದರಂತೆ ಸ್ಪರ್ಧೆ ನಡೆದಾಗ ಹಗ್ಗದ ಮೇಲೆ ಕೋಲನ್ನು ಹಿಡಿದುಕೊಂಡು ನರ್ತಿಸುತ್ತಿದ್ದ ನಲ್ಕೆ, ಅಜಿಲ ಅಥವಾ ಪಾಣಾರ ನರ್ತಕಿ ಆಯತಪ್ಪಿ ಕೆಳಕ್ಕೆ ಬಿದ್ದಳು. ಈ ವೇಳೆ ಕೈಯಲ್ಲಿದ್ದ ಕೋಲು ಕೈ ತಪ್ಪಿದ್ದರಿಂದ ಸ್ಪರ್ಧೆಯ ಷರತ್ತಿನಂತೆ ಈ ಸಮುದಾಯದ ನರ್ತಕಕರೆಲ್ಲರೂ ಸ್ವರ್ಗ ಲೋಕಬಿಟ್ಟು ಭೂ ಲೋಕ ಸೇರಿ ಭೂ ಲೋಕದಲ್ಲಿ ಭೂತಗಣಗಳನ್ನು ಕೊಂಡಾಡುತ್ತಾ ಭೂತಗಣಗಳ ಪರಾಕ್ರಮಗಳನ್ನು ಹಾಡಿ, ನಲಿದು, ಅನುಕರಿಸತೊಡಗಿದರಂತೆ. ಅದೇ ರೀತಿ ಇನ್ನೊಂದು ಮೂಲದ ಪ್ರಕಾರ ವಿಶ್ವಕರ್ಮ ಮಾಡಿದ ಚಂದನ ಮರದ ಮನುಷ್ಯ ರೂಪದ ಗೊಂಬೆಗೆ ಈಶ್ವರ ಜೀವಕಳೆಕೊಟ್ಟು " ಮುಂದೆ ನೀನು ಮತ್ತು ನಿನ್ನ ವಂಶ ಭೂಲೋಕದಲ್ಲಿ ಭೂತಗಣಗಳ ಮಹಿಮೆಯನ್ನು ಹಾಡಿ. ಕುಣಿದು ಕೊಂಡಾಡುವ ಮೂಲಕ ಜನರ ಕಷ್ಟ ಕಾರ್ಪಣ್ಯಗಳನ್ನು ಪರಿಹರಿಸಿ ಜನರಿಗೆ ಸಂತೋಷವನ್ನುಂಟು ಮಾಡುತ್ತಿರು" ಎಂದು ಹರಸಿದರೆಂದು ಮುಂತಾಗಿ ಈ ಸಮುದಾಯ ತಮ್ಮ ಮೂಲ ಮತ್ತು ವೃತ್ತಿಯನ್ನು ಸ್ಮರಿಸಿಕೊಂಡು ತಮ್ಮ ಬಗ್ಗೆ ಹೆಮ್ಮೆಪಟ್ಟುಕೊಳ್ಳುತ್ತಾರೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ತುಳುನಾಡ ಸಾಂಸ್ಕೃತಿಕ ನಿರ್ದೇಶಕರೂ, ವಕ್ತಾರರೂ ಆಗಿರುವುದರಿಂದ ಸಾಂಸ್ಕೃತಿಕ ಮೂಲ ಪ್ರತೀಕಗಳಾಗಿರುವ ಹಬ್ಬಹರಿದಿನಗಳನ್ನು ಈ ಜನಾಂಗ ಧಾರ್ಮಿಕ ನಂಬಿಕೆ ಮತ್ತು ದೈವಿಕ ಆರಾಧನಾ ನೆಲೆಯಿಂದ ತಮ್ಮನ್ನು ತಾವು ಸಂಪೂರ್ಣವಾಗಿ ತೊಡಗಿಸಿಕೊಂಡು ಆಚರಿಸುತ್ತಾರೆ. ಇವರು ಹಬ್ಬ ಹರಿದಿನಗಳಂದು ತಮ್ಮ ಕುಲ ಲಾಂಛನವೆನಿಸಿದ "ತೆಂಬರೆ" ಯನ್ನು ಹಿಡಿದುಕೊಂಡು "ಊರುಡೆ ಪೋಪುನಿ" (ಊರಿನಲ್ಲಿ ಹೋಗುವುದು) "ಮನೆ ಕುಣಿತ" ಮುಂತಾದ ಕ್ರಮಾಚರಣೆಗಳನ್ನು ಕೈಗೊಳ್ಳುವ ಮೂಲಕ ಹಬ್ಬ ಹರಿದಿನಗಳ ಬಗ್ಗೆ ಸಂದೇಶವನ್ನು ಸಾರುತ್ತಾರೆ. ಆಟಿ ಅಮವಾಸ್ಯೆ (ಆಷಾಡದ ಭೀಮನ ಅಮವಾಸ್ಯೆ) ಯಿಂದ ಆರಂಭಗೊಳ್ಳುವ ಹಬ್ಬದಿಂದ ಹಿಡಿದು ಬೇಸಿಗೆ ಕಾಲದ ಕೊನೆಯ ದಿನವೆನ್ನಲಾಗುವ "ಪತ್ತನಾಜೆ" (ಮೇ ತಿಂಗಳು) ವರೆಗೆ, ಅದೇ ರೀತಿ ಬೇಸಿಗೆಯ ರಾತ್ರಿಗಳಲ್ಲಿ ತುಳುನಾಡುಗಳಲ್ಲಿ ನಡೆಯುವ ಅಂಕ – ಆಯನ, ಕೋಲ–ತಂಬಿಲ, ಹರಕೆ–ಪರ್ವಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ತುಳುನಾಡ ಸಂಸ್ಕೃತಿಯ ಮೂಲ ಕರ್ತೃಗಳೆನಿಸಿಕೊಂಡಿದ್ದಾರೆ.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ತುಳುನಾಡಿನಲ್ಲಿ ಆಚರಣೆಯಲ್ಲಿರುವ ಎಲ್ಲಾ ಹಬ್ಬ ಹರಿದಿನಗಳನ್ನು ಆಚರಿಸುತ್ತಾರೆ. ಇವುಗಳಲ್ಲಿ ಆಟಿ ಅಮವಾಸ್ಯೆ, ನಾಗರಪಂಚಮಿ, ಅಷ್ಟಮಿ, ಚೌತಿ, ಸೋಣದ ಅಮವಾಸ್ಯೆ, ಪುದ್ವಾರ್ (ಪುದ್ದಾರ್ ಅಥವಾ ಹೊಸ ಅಕ್ಕಿ ಊಟ ), ಪರ್ಬ (ದೀಪಾವಳಿ), ಕಾವೇರಿ ಸಂಕ್ರಾಂತಿ, ಕೆಡ್ಡಸ, ಬಿಸು, ಪತ್ತನಾಜೆ, ಮುಂತಾದ ಹಬ್ಬಗಳು ಮುಖ್ಯವಾದವುಗಳು. ಇವುಗಳಲ್ಲದೆ ಆಟಿ ಅಮವಾಸ್ಯೆಯ ನಂತರ ಬರುವ ಇರಣ ಅಮವಾಸ್ಯೆ, ಸೋಣದ ಅಮವಾಸ್ಯೆ (ಸೋಣ ಸಂಕ್ರಾಂತಿ), ತೀರ್ಥದ ಅಮವಾಸ್ಯೆ, ಮಕ್ಕಳ ಹುಣ್ಣಿಮೆ, ಎರುದಪ್ಪಿ ಪುಣ್ಣಮೆ (ಎತ್ತು ಊಳಿಸುವ ಹುಣ್ಣಿಮೆ ) ಮುಂತಾದ ಹಬ್ಬಗಳಲ್ಲೂ ತಮ್ಮದೇ ಆದ ವಿಧಿ ವಿಧಾನಗಳನ್ನು ಅನುಸರಿಸಿ ಆಚರಿಸುತ್ತಾರೆ. ಅದೇ ರೀತಿ ಪ್ರತೀ ತಿಂಗಳ ಅಮವಾಸ್ಯೆಯಲ್ಲಿ ತಮ್ಮ ಕುಲ ದೈವಗಳಿಗೆ ಹಾಗೂ ಗತಿಸಿದ ಪಿತೃಗಳಿಗೆ ಅಗೇಲು ಬಡಿಸುವ ಮೂಲಕ "ಸಂಕ್ರಾಂತಿ ಬಳಸುನೆ" (ಸಂಕ್ರಾಂತಿ ಬಡಿಸುವುದು) ಎಂಬ ಆರಾಧನೆಯನ್ನು ಮಾಡುತ್ತಾರೆ. ಈ ಸಮುದಾಯದವರು ಆಚರಿಸುವ ಹಬ್ಬ ಹರಿದಿನಗಳು ಈ ಕೆಳಗಿನಂತಿವೆ.

೪.೧. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಮತ್ತು ಹಬ್ಬ ಹರಿದಿನಗಳು.

೪.೧.೧. ಆಟಿ ಅಮಾವಾಸ್ಯೆ

೪.೧.೨. ಸೋಣ ಸಂಕ್ರಾಂತಿ

೪.೧.೩. ನಾಗರ ಪಂಚಮಿ

೪.೧.೪. ಅಷ್ಟಮಿ

೪.೧.೫. ಮುದ್ವಾರ್ ಅಥವಾ ಕುರಲ್ ಹಬ್ಬ

೪.೧.೬. ಚೌತಿ

೪.೧.೭. ದೀಪಾವಳಿ ಹಬ್ಬ

೪.೧.೮. ಕಾವೇರಿ ಸಂಕ್ರಾಂತಿ

೪.೧.೯. ಕೆಡ್ಡಸ

೪.೧.೧೦. ಬಿಸು ಸಂಕ್ರಾಂತಿ

೪.೧.೧೧. ಹತ್ತನಾವಧಿ ಅಥವಾ ಪತ್ತನಾಜೆ

**೪.೧.೧ ಆಟಿ ಅಮವಾಸ್ಯೆ**

ಎಲ್ಲ ಹಬ್ಬಗಳಿಗೂ ಆಹ್ವಾನ ನೀಡುವ, ಹಬ್ಬಗಳ ಮಹಾದ್ವಾರ ಎನಿಸಿರುವ ಆಟಿ ಅಮವಾಸ್ಯೆಗೆ ತುಳುನಾಡಿನ ಹಬ್ಬಗಳ ಪೈಕಿ ವಿಶೇಷ ಮಹತ್ವವಿದೆ. ಅದರಲ್ಲೂ ಮುಖ್ಯವಾಗಿ ಆಟಿ ಅಮವಾಸ್ಯೆಯ ದಿನ ಬಹು ಬೇಡಿಕೆ ಇರುವ ಹಾಳೆ ಮರವನ್ನು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ತಮ್ಮ ಕುಲ ವೃಕ್ಷವೆಂದು ನಂಬಿ ಅಶ್ವಥ ಮರಕ್ಕಿಂತಲೂ ಹೆಚ್ಚಿನ ಪಾವಿತ್ರ್ಯತೆ ನೀಡುತ್ತಾರೆ. ಮರದಲ್ಲಿ ದೇವ, ಮರ್ತ್ಯ, ಪಾತಾಳ ಲೋಕಗಳ ಔಷಧಿಗಳು ಬಂದು ಸಂಗ್ರಹಗೊಳ್ಳುವುದರಿಂದ ಈ ಮರದಿಂದ ಮುಂಜಾನೆ ತೆಗೆದ ತೊಗಟೆಯ ರಸವನ್ನು ಕುಡಿದರೆ ಸರ್ವರೋಗಗಳೂ ನಿವಾರಣೆಯಾಗುತ್ತವೆ ಎಂಬ ನಂಬಿಕೆ ಪ್ರಾಚೀನ ಕಾಲದಿಂದಲೂ ಈ ಸಮುದಾಯದವರಲ್ಲಿ ನಂಬಿಕೆ ಇತ್ತು. ಹಿರಿಯರು ಹೇಳುವ ಪ್ರಕಾರ ಪ್ರಾಚೀನ ಕಾಲದಲ್ಲೇ ತುಳುನಾಡಿನಲ್ಲಿ ಆಟಿ ಅಮವಾಸ್ಯೆಯ ದಿನ ಹಾಳೆ ಮರದ ಕಷಾಯವನ್ನು ಕುಡಿಯುವ ಸಂಪ್ರದಾಯವನ್ನು ಪ್ರಾರಂಭಿಸಿದವರು ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೇ ಆಗಿದ್ದಾರೆಂದು ಹೇಳಲಾಗುತ್ತಿದೆ. ಈ ಮಾತಿಗೆ ಪೂರಕವಾಗಿ ಇಂದಿಗೂ ಇವರು ತಮ್ಮ ಎಲ್ಲ ಶುಭ ಕಾರ್ಯಗಳಲ್ಲೂ ಈ ಹಾಳೆ ಮರದ ಗೆಲ್ಲನ್ನು ಬಳಸುತ್ತಿದ್ದಾರೆ ಮತ್ತು ಪ್ರಾಚೀನ ಕಾಲದಿಂದಲೂ ನೇಮೋತ್ಸವದ ವೇಳೆ ದೈವಗಳ ಮೊಗ – ಮೂರ್ತಿ, ಭಂಡಾರವನ್ನು ಇಡುವ ಚಪ್ಪರದ ಮುಂಭಾಗದ (ಕೊಡಿನಾಡ್) ಮೇಲೆ ಹಾಳೆಯ ಮರದಿಂದ ಆಚಾರಿ ಜನಾಂಗದವರಿಂದ ತಯಾರಿಸಲ್ಪಡುವ ತ್ರಿಶೂಲಾಕಾರದ ಸಾಧನವನ್ನು (ಇದನ್ನು ತುಳುವಿನಲ್ಲಿ ಚಪ್ಪರಕೊಂಬು ಎನ್ನುವರು) ವನ್ನು ಕಟ್ಟಿದ ಬಳಿಕವೇ "ಕೊಡಿನಾಡಿಗೆ" ದೈವಗಳ ಭಂಡಾರವನ್ನು ತರುವ ಕ್ರಮವನ್ನು ಈ ಸಮುದಾಯವೇ ರೂಪಿಸಿತೆಂದು ಈ ಸಮುದಾಯದ ಹಿರಿಯರು ಹೇಳುತ್ತಾರೆ. ಇಂತಹಾ ಕ್ರಮಗಳಿಂದ ಕೇವಲವಾಗಿ ಕಾಣಲ್ಪಡುವ ಹಾಳೆ ಮರಕ್ಕೆ ಧಾರ್ಮಿಕ ಮೌಲ್ಯವನ್ನು ಮೊತ್ತ ಮೊದಲು ತಂದು ಕೊಟ್ಟವರೇ ಈ ಸಮುದಾಯದವರಾದ್ದರಿಂದ ಇವರು ಹಾಳೆ ಮರವನ್ನು ಅಶ್ವತ್ಥ ಮರಕ್ಕಿಂತಲೂ ಪೂಜ್ಯ ಭಾವನೆಯಿಂದ ಆರಾಧಿಸಿಕೊಂಡು ಬರುತ್ತಿದ್ದಾರೆ.

ಆಟಿ ಅಮವಾಸ್ಯೆಯ ದಿನ ಮುಂಜಾನೆ ಹೊತ್ತು ಮೂಡುವ ಮೊದಲೇ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು (ಮತ್ತು ತುಳುನಾಡಿನ ಜನರು) ಹಾಳೆ ಮರದ ಬುಡಕ್ಕೆ ಹೋಗಿ ಕಲ್ಲಿನಿಂದ ಮರದ ತೊಗಟೆಯನ್ನು ಜಜ್ಜಿ ತಂದು ಅದರೊಂದಿಗೆ ಶುಂಠಿ, ಬೆಳ್ಳುಳ್ಳಿ, ಜೀರಿಗೆ, ಲಿಂಬೆ, ಕಾಳುಮೆಣಸು ಇತ್ಯಾದಿಗಳನ್ನೆಲ್ಲಾ ಸೇರಿಸಿ ಕುಡಿಯುತ್ತಾರೆ. ನಂತರ ಬಾಳೆ ಎಲೆಯಲ್ಲಿ ಇಟ್ಟೋಪು ಗಿಡದ ಹೂ, ರಥ ಹೂ, ದಾಸವಾಳ ಇವುಗಳನ್ನು ನವಧಾನ್ಯಗಳೊಂದಿಗಿಟ್ಟು

ಮನೆಯವರೆಲ್ಲರ ತಲೆ ನೀವಾಳಿಸಿ ನದಿಗೆ ಬಾಗಿನವನ್ನರ್ಪಿಸುತ್ತಾರೆ. ಅಷ್ಟರಲ್ಲಿ ಮನೆಯ ಹೆಂಗಸರು ಹಲಸಿನ ಬೀಜವನ್ನು ಹುರಿದು, ಗೇರು ಬೀಜವನ್ನು ಸುಟ್ಟು ತೆಗೆದ ಗೋಡಂಬಿ, ಕೊತ್ತಂಬರಿ, ಇತ್ಯಾದಿಗಳನ್ನು ಗುದ್ದಿ ಬಳಿಕ ಹೊದ್ಲುವಿನ ಜೊತೆ ಸೇರಿಸಿ "ನನ್ಯೇರಿ" ಎಂದು ಕರೆಯಲಾಗುವ ಆಟಿಯ ವಿಶೇಷ ಭಕ್ಷವನ್ನು ಮಾಡುತ್ತಾರೆ. ನಂತರ ಎಲ್ಲರೂ ಅದನ್ನು ಚಹಾದೊಂದಿಗೆ ತಿನ್ನುತ್ತಾರೆ. ನಂತರ ರಾತ್ರಿ ಕೋಳಿಯಂತಹಾ ಮಾಂಸಹಾರದೊಂದಿಗೆ ಆಟಿ ಅಗೇಲು ಬಡಿಸಿ ದೈವ, ಪಿತೃಗಳಿಗೆ ಕೈ ಮುಗಿದು ಊಟ ಮಾಡುತ್ತಾರೆ. ಆಟಿ ತಿಂಗಳಲ್ಲಿ ಮಳೆಯ ಪ್ರಮಾಣ ಸ್ವಲ್ಪ ಇಳಿಮುಖವಾಗುವ ಹೊತ್ತಲ್ಲಿ ಈ ಸಮುದಾಯ "ಆಟಿಕಳೆಂಜೆ" ದೈವದ ಕುಣಿತದೊಂದಿಗೆ ಮನೆ – ಮನೆಗೆ ತೆರಳಿ ಸಾಂತ್ವನ, ಅಭಯ ಹೇಳಿ ಭಕ್ತರಿಂದ ಹರಕೆಯ ರೂಪದಲ್ಲಿ ಅಕ್ಕಿ, ತೆಂಗಿನಕಾಯಿ, ಮೆಣಸು, ಹುಳಿ, ಉಪ್ಪುಗಳನ್ನು ಪಡೆಯುತ್ತಾರೆ.

**೪.೧.೨ ಸೋಣ ಸಂಕ್ರಾಂತಿ (ಶ್ರಾವಣ ಸಂಕ್ರಾಂತಿ)**

ಶ್ರಾವಣ ತಿಂಗಳನ್ನು ತುಳುವಿನಲ್ಲಿ ಸೋಣ ತಿಂಗಳೆನ್ನುವರು. ಹಬ್ಬಗಳೇ ಹೆಚ್ಚಾಗಿರುವ ಈ ತಿಂಗಳಲ್ಲಿ ಪ್ರಾಚೀನ ಕಾಲದಲ್ಲಿ ಧನಿಕರು ಬಡವರನ್ನು ತಮ್ಮ ಮನೆಯೊಳಗೆ ಕರೆದು ದಾನ – ಧರ್ಮಗಳನ್ನು ಕೊಡುತ್ತಿದ್ದ ಕಾರಣ ಈ ತಿಂಗಳನ್ನು ಧರ್ಮ ತಿಂಗಳು ಎಂದೂ ತುಳುನಾಡಿನಲ್ಲಿ ಕರೆಯುತ್ತಾರೆ. ಸೋಣ ತಿಂಗಳಲ್ಲಿ ಬರುವ ಅಮವಾಸ್ಯೆಯನ್ನು ಸೋಣ ಸಂಕ್ರಾಂತಿ ಅಥವಾ "ಇರಣ ಅಮವಾಸ್ಯೆ" ಎಂದು ಕರೆಯುತ್ತಾರೆ. ಇದನ್ನು "ತೀರ್ಥದ ಅಮವಾಸ್ಯೆ" ಎಂದೂ ಕರೆಯುತ್ತಾರೆ. ಸಮುದ್ರಕ್ಕೆ ಹಾಲೋದಕ ಮಾಡಿ ಪೂಜಿಸುವ ದಿನವೂ ಇದಾಗಿರುವುದರಿಂದ ಈ ಅಮವಾಸ್ಯೆಗೆ ವಿಶೇಷ ಮಹತ್ವವಿದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಈ ಸೋಣದ ಅಮವಾಸ್ಯೆ ಅಥವಾ ಇರಣ ಅಮವಾಸ್ಯೆಯಂದು ದೇವರಿಗೆ ಪೂಜೆ ಸಲ್ಲಿಸಿ ರಾತ್ರಿ ನೀರುದೋಸೆ (ತೆಳ್ಳವು), ಕೋಳಿ ಸಾಂಬಾರಿನೊಂದಿಗೆ ದೈವಗಳಿಗೆ ಅಗೆಲು ಬಡಿಸಿ ಊಟ ಮಾಡುತ್ತಾರೆ. ಇದಲ್ಲದೆ ಈ ತಿಂಗಳಿನ ಶನಿವಾರವನ್ನು ಈ ಜನಾಂಗ "ಸೋಣ ಶನಿವಾರ"ವೆಂದು ವಿಶೇಷವಾಗಿ ಆರಾಧನಾ ವಿಧಿ – ವಿಧಾನಗಳ ಮೂಲಕ ಆಚರಿಸುತ್ತಾರೆ. ಆ ದಿನ ಬೆಳಗ್ಗಿನಿಂದ ಉಪವಾಸವಿರುವ ಮನೆಯ ಯಜಮಾನನ ಸಹಿತ ಮನೆ ಮಂದಿ ಮಧ್ಯಾಹ್ನ ಸ್ನಾನ ಮಾಡಿ ತರಕಾರಿ ಸಾಂಬಾರಿನಲ್ಲಿ ಊಟ ಮಾಡುತ್ತಾರೆ. ಊಟ ಮಾಡುವ ಮೊದಲು ತಮ್ಮ ತಮ್ಮ ದೈವ ದೇವರಿಗೆ ಕೈ ಮುಗಿದು ತಿರುಪತಿ ತಿಮ್ಮಪ್ಪನಿಗೆ ಪ್ರತ್ಯೇಕ ಕಾಣಿಕೆ ಹುಂಡಿ ಹಣವನ್ನು ಮನೆಯವರೆಲ್ಲರ ತಲೆ ನೀವಾಳಿಸಿ ಕಾಣಿಕೆ ಡಬ್ಬಿಯಲ್ಲೋ ಅಥವಾ ಬಟ್ಟೆಯ ಗಂಟಿನಲ್ಲೋ ಕಟ್ಟಿ ದೈವ – ದೇವರ ಕೋಣೆಯಲ್ಲಿ ಇಟ್ಟು ನಿಗದಿತ ಸಮಯಕ್ಕೆ ತಿರುಪತಿಗೆ ಯಾತ್ರೆ ಹೋಗುವವರಲ್ಲಿ ಈ ಹುಂಡಿಯನ್ನು ಕೊಟ್ಟು ಕಳಿಸುತ್ತಾರೆ. ಸೋಣ ಶನಿವಾರದಂದು ತಿರುಪತಿಗೆ ಕಾಣಿಕೆ ಹುಂಡಿ ಇಡುವುದನ್ನು ಈ ಸಮುದಾಯ ಪ್ರಾಚೀನ ಕಾಲದಿಂದಲೂ ಹರಕೆಯಾಗಿ ಪಾಲಿಸಿಕೊಂಡು ಬಂದಿರುತ್ತರಲ್ಲದೆ ಈ ಕ್ರಮಕ್ಕೆ "ಮುಡಿಪು ಕಟ್ಟುನೆ" ಅಥವಾ "ಮುಡಿಪುದೀಪುನು" ಎಂದು ಕರೆಯುತ್ತಾರೆ. ಪ್ರಾಚೀನ ಕಾಲದಲ್ಲಿ ಈ ಸಮುದಾಯ ಆಂಧ್ರ ಪ್ರದೇಶದಲ್ಲೂ ನೆಲೆ ಕಂಡಿದ್ದು ಅಲ್ಲಿನ ದೇವರಾದ ತಿರುಪತಿ ತಿಮ್ಮಪ್ಪನ ಸ್ಮರಣಾರ್ಥ ತುಳುನಾಡಿನಲ್ಲಿ ತಮ್ಮ ಮೂಲದ ನೆಲೆಯ ಸ್ಮರಣೆಯನ್ನು ಈ ರೀತಿ ಅನುಸರಿಸಿಕೊಂಡು ಬರುತ್ತಾರೆ. ಸೋಣ ತಿಂಗಳಲ್ಲಿ ಈ ಸಮುದಾಯ ಸೋಣದ ಜೋಗಿ, ಸೋಣದ ಮದ್ಮಲ್, ಸೋಣದ ಜೋಕುಮಾರ ಕುಣಿತಗಳನ್ನು ನಡೆಸುತ್ತಾ ಸೋಣ ತಿಂಗಳ ವೈಶಿಷ್ಟಯವನ್ನು ತಿಳಿಸುತ್ತಾರೆ.

**೪.೧.೩ ನಾಗರಪಂಚಮಿ**

ನಾಗಾರಾಧನೆ ತುಳುನಾಡಿನ ಅತ್ಯಂತ ಪ್ರಮುಖವಾದ ಒಂದು ದೈವಾರಾಧನೆ. ಈ ದಿನ ತುಳುನಾಡಿನಾದ್ಯಂತ ನಾಗಬನಗಳಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ನಾಗನ ಕಲ್ಲುಗಳಿಗೆ ಅಥವಾ ದೇವಸ್ಥಾನಗಳ ಪಕ್ಕದಲ್ಲಿರುವ ನಾಗ ಬನಗಳಲ್ಲಿರುವ ನಾಗನ ಕಲ್ಲುಗಳಿಗೆ ಹಾಲಭಿಷೇಕ ಮಾಡಿ ವಿಶೇಷ ಪೂಜೆ ಮಾಡುವ ಕ್ರಮ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಈ

ವಿಶೇಷ ಆರಾಧನಾ ಹಬ್ಬದಂದು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಎಲ್ಲರಂತೆ ತಾವೂ ಶುದ್ಧಾಚಾರದಿಂದ ನಾಗನಿಗೆ ಹಾಲಭಿಷೇಕ ಮಾಡಿಸುತ್ತಾರೆ. ಅಲ್ಲದೇ ಅದೇ ದಿನ ನಡೆಸಲ್ಪಡುವ ನಾಗತಂಬಿಲ, ನಾಗಮಂಡಲ ಆರಾಧನೆ ಮತ್ತು ಗದ್ದೆ ಬನದಲ್ಲಿ ನಾಗತನು ಹಾಕುವ ಪದ್ಧತಿಯಲ್ಲೂ ಈ ಸಮುದಾಯ ಪ್ರಧಾನ ಪಾತ್ರ ವಹಿಸುತ್ತವೆ.

**೪.೧.೪ ಅಷ್ಟಮಿ**

ಶ್ರೀ ಕೃಷ್ಣ ಜನ್ಮಾಷ್ಟಮಿಯನ್ನು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ತಮ್ಮ ಮನೆಯಲ್ಲಿ ಆಚರಿಸುತ್ತಾರೆ. ಅಂದು ಬೆಳಗ್ಗೆ ಸ್ನಾನ ಮಾಡಿ ಕೃಷ್ಣ ತುಳಸೀ ಗಿಡಕ್ಕೆ ನೀರೆರೆದು ದೇವರನ್ನು ಪೂಜಿಸುತ್ತಾರಲ್ಲದೆ ಬೆಳಗ್ಗೆ ಅಕ್ಕಿ ಹಿಟ್ಟು ಬೆಲ್ಲ, ತೆಂಗಿನಕಾಯಿಯ ತುರಿ, ಎಳ್ಳು, ಇವನ್ನೆಲ್ಲ ಒಟ್ಟಿಗೆ ಸೇರಿಸಿ ಅರಸಿನ ಎಲೆಯಲ್ಲಿ ಕಟ್ಟಿ ಬೇಯಿಸಿದ ಅರಸಿನ ಮೂಡೆಯೆಂಬ ತಿಂಡಿಯನ್ನು ತಿನ್ನುತ್ತಾರೆ. ಇದನ್ನು ಈ ಜನಾಂಗದವರು "ಮಂಜೊಲ್ದ ಇರೆತ ಅಡ್ಯೆ" ಎಂದು ಕರೆಯುತ್ತಾರೆ. ನಂತರ ರಾತ್ರಿ ಅಕ್ಕಿ ಹಿಟ್ಟನ್ನು ಬಾಳೆ ಎಲೆಯಲ್ಲಿ ಸುತ್ತಿಟ್ಟು ನೀರಿನ ಹಬೆಯಲ್ಲಿ ಬೇಯಿಸಿದ "ನೀರಕೊಟ್ಟಿಗೆ" ಎಂಬ ತಿಂಡಿಯನ್ನು ಮಾಡಿ ತಿನ್ನುತ್ತಾರೆ. ಪ್ರಾಚೀನ ಕಾಲದಲ್ಲಿ ಈ ಸಮುದಾಯ ಕಡು ಬಡತನದಲ್ಲಿ ಇದ್ದ ಕಾರಣ ಶ್ರೀಮಂತರು ಇವರನ್ನು ತಮ್ಮ ಮನೆಗಳಿಗೆ ಕರೆದು ತಮ್ಮ ಆಹಾರ ಧಾನ್ಯಗಳನ್ನು ದಾನ ನೀಡುತ್ತಿದ್ದರು. ಮುಂದೆ ಇದೇ ಸಂಪ್ರದಾಯ ಬೆಳೆದು ಬಂದು ಅಷ್ಟಮಿ ದಿನ ಊರ ಮೇಲೆ ಹೋಗುವ ಕ್ರಮವನ್ನು ಅನುಸರಿಸಲಾಯಿತು. ಇದನ್ನು "ಅಷ್ಟಮಿದ ಮರ್ಯಾದೆ" ಎಂದು ಕರೆಯಲಾಗುತ್ತದೆ.

**೪.೧.೫ ಪುದ್ವಾರ್ ಅಥವಾ ಕುರಲ್ ಪರ್ಬ (ತೆನೆ ಹಬ್ಬ)**

ತುಳುನಾಡಿನ ಸಂಸ್ಕೃತಿಯ ಅವಿಚ್ಛಿನ್ನ ಭಾಗವಾಗಿರುವ ವ್ಯವಸಾಯ ಪ್ರಾಚೀನ ಕಾಲದಿಂದಲೂ ತುಳುವರ ಬದುಕಿನ ಪವಿತ್ರ ಸಂಕೇತವಾಗಿತ್ತು. ಹೀಗಾಗಿ ಶ್ರಮಪಟ್ಟು ಬೆಳೆದ ವ್ಯವಸಾಯದ ಉತ್ಪನ್ನಗಳಾದ ಭತ್ತ ಮತ್ತು ಅಕ್ಕಿ ತುಳುವರ ಬದುಕು ಮತ್ತು ಸಂಸ್ಕೃತಿಯಲ್ಲಿ ಅತ್ಯಂತ ಪವಿತ್ರ ಸ್ಥಾನವನ್ನು ಪಡೆದುಕೊಂಡಿದೆ. ಇಂತಹಾ ಪೂಜ್ಯ ಸ್ಥಾನವನ್ನು ಪಡೆದುಕೊಂಡಿರುವ ಭತ್ತದ ಪೈರಿನಿಂದ ಫಸಲೊಡೆದ ಫಲಿತ ತೆನೆಯನ್ನು ಭಕ್ತಿಯಿಂದ ಪೂಜೆ ಸಲ್ಲಿಸಿ ಮನೆಯೊಳಕ್ಕೆ ತುಂಬಿಸಿಕೊಳ್ಳುವುದಕ್ಕೆ ತುಳುವರಿಗೆ ಎಲ್ಲಿಲ್ಲದ ಸಂತೋಷ. ಹೀಗಾಗಿ ಮನೆಗೆ ತೆನೆ ತುಂಬಿಸಿಕೊಳ್ಳುವುದನ್ನು ತುಳುವರು ವಿಶೇಷ ಹಬ್ಬವನ್ನಾಗಿ ಆಚರಿಸುತ್ತಾರೆ. ಈ ಹಬ್ಬಕ್ಕೆ ಮನೆ ತುಂಬಿಸುವ ತೆನೆ ಹಬ್ಬವೆಂದೂ ತುಳುವಿನಲ್ಲಿ "ಇಲ್ಲ್ ದಿಂಜಾವುನು" ಅಥವಾ "ಪುದ್ವಾರ್", "ಕುರಲ್‌ಪರ್ಬ" ಎಂದು ಮುಂತಾಗಿ ಕರೆಯುತ್ತಾರೆ.

ಪ್ರಾಚೀನ ಕಾಲದಲ್ಲಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ತುಳುನಾಡಿನ ಇತರರಂತೆ ತಾವು ನೆಲೆ ನಿಂತಿದ್ದ ಗುಡ್ಡ ಗಾಡು ಪ್ರದೇಶಗಳಲ್ಲಿ "ಕುಮೇರ್" ಎಂಬ ಬೆಟ್ಟಗುಡ್ಡಗಳಲ್ಲಿ ಮಳೆಗಾಲದ ನೀರನ್ನಾಶ್ರಯಿಸಿ ಬೆಳೆಯುವ ಭತ್ತದ ವ್ಯವಸಾಯವನ್ನು ಮಾಡುತ್ತಿದ್ದರು. ಆ ವೇಳೆ ತಮ್ಮ ಶ್ರಮದ ಫಲವಾಗಿ ಬೆಳೆದು ನಿಂತ ಹೊಸ ಫಲದ ತೆನೆಗಳನ್ನು ಕಂಡು ಸಂತೋಷಗೊಂಡು ಈ ತೆನೆಗಳು ಫಲವಂತಿಕೆ , ಸಮೃದ್ಧಿ, ಅದೃಷ್ಟ ಮತ್ತು ಸಂಪತ್ತಿನ ಸಂಕೇತವೆಂದು ತಿಳಿದು ಮನೆ ತುಂಬಿಸುವ ಹಬ್ಬವನ್ನಾಗಿ ಆಚರಿಸಲು ಆರಂಭಿಸಿ ಇದನ್ನೇ ಹಬ್ಬವನ್ನಾಗಿ ಆಚರಿಸ ತೊಡಗಿಸರು. ಹೀಗಾಗಿ ಈ ಹಬ್ಬಕ್ಕೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ಸಹಿತ ತುಳುವರೆಲ್ಲರೂ ಎಷ್ಟು ಪ್ರಾಮುಖ್ಯತೆ ಕೊಡುತ್ತಾರೆಂದರೆ, ಒಂದು ವೇಳೆ ತಾವು ಭತ್ತದ ವ್ಯವಸಾಯ ಮಾಡದೆ ತಮ್ಮಲ್ಲಿ ಭತ್ತದ ತೆನೆ ಇಲ್ಲದಿದ್ದರೂ ಆ ದಿನ ಬೇರೆಯವರ ಭತ್ತದ ಗದ್ದೆಯಿಂದ ತೆನೆ ತಂದು ಈ ಹಬ್ಬವನ್ನು ಆಚರಿಸುವುದು ಇಂದಿಗೂ ರೂಢಿಯಲ್ಲಿದೆ.

ಈ ಹಬ್ಬದ ದಿನ ಬೆಳಗ್ಗೆ ಮನೆಯ ಯಜಮಾನ ಅಥವಾ ಮನೆಯ ಇತರ ಸದಸ್ಯರು ತೆನೆಯನ್ನು ತಂದು ಗೆರಸೆಯಲ್ಲಿ ಬಾಳೆ ಎಲೆಯ ತುದಿ ತುಂಡಿನಲ್ಲಿ ಭತ್ತದ ತೆನೆ ಸೌತೆಕಾಯಿ, ಕರಿಕೆಸು ಅರಿವೆಸೊಪ್ಪು ಅರಶಿನ ಎಲೆ, ಅಶ್ವತ್ಥ ಎಲೆ, ಇಟ್ಟೋವು ಎಲೆ, ನಾಯಿಕಂರ್ಬು(ನಾಯಿಕಬ್ಬು) ಇವುಗಳನ್ನೆಲ್ಲ ಇಟ್ಟು, ಇನ್ನೊಂದು ಬಾಳೆ ಎಲೆಯಲ್ಲಿ ಬೆಳ್ತಿಗೆ ಅಕ್ಕಿ, ತೆಂಗಿನಕಾಯಿಯ ಗಣಪತಿ ಸ್ತುತಿಗೆ ಇಡುತ್ತಾರೆ. ನಂತರ ಮನೆಯ ಯಜಮಾನ ತಲೆಗೆ ಮುಂಡಾಸು ಕಟ್ಟಿ ಫಲ ವಸ್ತುಗಳಿರುವ ಗೆರಸೆಯನ್ನು ಎತ್ತಿಕೊಂಡು ಹಿಂದೆ ಹಿಂದೆ ಹೆಜ್ಜೆಯಿಡುತ್ತಾ" ಪೊಲಿ, ಪೊಲಿ, ಪೊಲಿ, ಪೊಲಿ ಹೆಚ್ಚಲೆ(ಅದೃಷ್ಟ ಹೆಚ್ಚಲಿ) ಎಂದು ಹೇಳುತ್ತಾ ಮನೆಯೊಳಕ್ಕೆ ಬರುವಾಗ ಕೈಯಲ್ಲಿ ಭತ್ತದ ತೆನೆ ಹಿಡಿದುಕೊಂಡಿರುವ ಮನೆಯ ಇತರ ಸದಸ್ಯರು ಅವನನ್ನುಅನುಸರಿಸುತ್ತಾರೆ. ಹೀಗೆ ಮನೆಯೊಳಕ್ಕೆ ಮನೆಯ ಯಜಮಾನ ಕಾಲಿಡುತ್ತಿದ್ದಂತೆ ಮನೆ ಯಜಮಾನಿ ಆತನ ಕಾಲಿಗೆ ನೀರೆರೆಯುತ್ತಾಳೆ. ಹೀಗೆ "ಪೊಲಿ, ಪೊಲಿ, ಪೊಲಿ ಹೆಚ್ಚಲೆ" ಎಂದು ಹೇಳುತ್ತಲೇ ಮನೆ ಯಜಮಾನ ತಂದ ಗೆರಸೆಯನ್ನು ದೇವರಕೋಣೆಯಲ್ಲಿಟ್ಟು ಒಂದು ಲೋಟದಲ್ಲಿ ಹಾಲಿಗೆ ಕಲ್ಲು ಸಕ್ಕರೆ ಮತ್ತು ಸ್ವಲ್ಪ ಬೆಳ್ತಿಗೆ ಅಕ್ಕಿಯನ್ನು ಹಾಕಿ ದೇವರ ಕೋಣೆಯಲ್ಲಿ ಮಣೆಯ ಮೇಲೆ ದೇವರಿಗೆ ಇಡಲಾಗುತ್ತದೆ.

ಬಳಿಕ ಒಂದೊಂದು ಭತ್ತದ ತೆನೆಯೊಂದಿಗೆ ನಾಯಿಕಬ್ಬು ಅಶ್ವತ್ಥ ಎಲೆ, ಇಟ್ಟೋವು ಎಲೆಯನ್ನು ಮಾವು ಮತ್ತು ಹಲಸಿನ ಎಲೆಯಲ್ಲಿಟ್ಟು "ದಡ್ಡಲ್" ಮರದ ನಾರಿನ ಹಗ್ಗದಿಂದ ಸುತ್ತಿ ದೇವರಕೋಣೆ, ಮುಂಬಾಗಿಲು, ಗದ್ದೆ, ಯಂತ್ರಗಳು, ವಾಹನ, ಮನೆಗಳ ಕೊಟ್ಟಿಗೆ ಇತ್ಯಾದಿಗಳಗೆ ಕಟ್ಟುತ್ತಾರೆ. ಅಷ್ಟಾಗುತ್ತಲೇ ಆ ಮನೆಗೆ ನೆಂಟರು, ಸಂಬಂಧಿಕರು ಕುಟುಂಬಸ್ಥರೆಲ್ಲ ಆಗಮಿಸುತ್ತಾರೆ. ನಂತರ ಹೆಂಗಸರೆಲ್ಲ ಸೇರಿ ಬಾವಿಯ ಬಳಿ ಹೋಗಿ ತುಂಬೆ ಗಿಡದ ಹೂ, ಕೇಪುಳ ಹೂಗಳನ್ನು ಬಾವಿಯೊಳಕ್ಕೆ ಹಾಕುವ ಮೂಲಕ ಜಲ ಪೂಜೆ ಮಾಡಿ "ಸರ್ವೆರ್ಡಲಾ ಪೊಸ ಅರಿಕ್ಕ್ ನೀರ್ ದೆಪ್ಪುವೊ" (ಸರ್ವರಲ್ಲೂ ಹೊಸ ಅಕ್ಕಿಗೆ ನೀರು ತೆಗೆಯುತ್ತೇವೆ) ಎಂದು ಮೂರು ಬಾರಿ ಹೇಳಿ ನೀರು ಸೇದುತ್ತಾರೆ. ನಂತರ ಆ ನೀರನ್ನು ಎಲ್ಲರೂ ಮನೆಯೊಳಗೆ ತಂದು ಸುತ್ತಲೂ ಗಂಧದ ಬೊಟ್ಟು ಹಾಕಿರುವ ಮಡಕೆಯೊಳಕ್ಕೆ ತಂದಿರುವ ನೀರು ಹಾಕುತ್ತಾರೆ. ಬಳಿಕ ಹೆಂಗಸರೆಲ್ಲ ಸರ್ವೆರ್ಡಲಾ ಪೊಸ ಅರಿಕ್ ನೀರ್ ದೀಪೊ ಎಂದು ಮೂರು ಸಲ ಹೇಳಿ ಆ ಮಡಕೆಯನ್ನು ಒಲೆಯ ಮೇಲಿಟ್ಟು ಹೊಸ ಭತ್ತದ ಅಕ್ಕಿಯ ಅನ್ನವನ್ನು ಮಾಡುತ್ತಾರೆ. ಒಂದು ವೇಳೆ ಹೊಸ ಭತ್ತದ ಅಕ್ಕಿ ಇಲ್ಲದಿದ್ದಲ್ಲಿ ಮಾಮೂಲಿ ಅನ್ನ ಮಾಡಲು ಬಳಸುವ ಅಕ್ಕಿಗೆ ಮನೆಗೆ ತಂದಿದ್ದ ಹೊಸ ಭತ್ತದ ತೆನೆಯಿಂದ ಐದು ಅಥವಾ ಏಳು ಅಕ್ಕಿಯನ್ನು ತೆಗೆದು ಮಡಕೆಯೊಳಗೆ ಹಾಕಿ ಅನ್ನ ಮಾಡುತ್ತಾರೆ. ನಂತರ ಇನ್ನೊಂದು ಒಲೆಯಲ್ಲಿ ಮೊದಲು ದೇವರಿಗೆ ಇಟ್ಟಿದ್ದ ಕಲ್ಲು ಸಕ್ಕರೆ ಮಿಶ್ರಿತ ಹಾಲನ್ನು ಬೆರೆಸಿ ಅಕ್ಕಿಯ ಪಾಯಸ ಮಾಡುತ್ತಾರೆ. ಅದೇ ರೀತಿ ದೇವರಿಗೆ ಇಟ್ಟಿದ್ದ ಬೆಳ್ತಿಗೆ ಅಕ್ಕಿ ಮತ್ತು ತೆಂಗಿನ ಕಾಯಿಯಿಂದ ಪಾಯಸದಂತೆ "ತೆಂಗಿನಗಂಜಿ", ಸೌತೆಕಾಯಿ ಪಚಡಿ, ಕರಿಕೆಸುವಿನ ಸಾಂಬಾರು, ಅರಿವೆಸೊಪ್ಪು ಸಾಂಬಾರು ಸೇರಿದಂತೆ ಒಟ್ಟು ಏಳು ಬಗೆಯ ಸಾಂಬಾರು ಮತ್ತು ಪಲ್ಯಗಳನ್ನು ಮಾಡುತ್ತಾರೆ. ಆದಿನ ಮಾಡಿದ ಎಲ್ಲ ಅನ್ನ – ಸಾಂಬಾರು – ಭಕ್ಷ್ಯಗಳಿಗೆ ಅರಸಿನ ಎಲೆಯನ್ನು ಹಾಕುವುದು ವಿಶೇಷವಾಗಿರುತ್ತದೆ.

ನಂತರ ಎಲ್ಲರೂ ಊಟಕ್ಕೆ ಕುಳಿತಾಗ ಮನೆಯ ಯಜಮಾನಿ ಅನ್ನ ಮತ್ತು ಸಾಂಬಾರುಗಳ ಪಾತ್ರೆಗಳನ್ನು ಮನೆಯಾಜನನ ಮುಂದೆ ಇಡುತ್ತಾಳೆ. ಆಗ ಮನೆ ಯಜಮಾನ ಅನ್ನಕ್ಕೆ ಕೈ ಮುಗಿದು ಪಾತ್ರೆಗಳನ್ನು ಮುಟ್ಟಿ ನಮಸ್ಕರಿಸುತ್ತಾನೆ. ಬಳಿಕ ಯಜಮಾನಿ ಮನೆ ಯಜಮಾನನಿಗೆ ಮೊದಲು ಬಡಿಸಿ ನಂತರ ಉಳಿದವರಿಗೆ ಬಡಿಸುತ್ತಾಳೆ. ನಂತರ ಊಟ ಮಾಡುವ ಮೊದಲು ಯಜಮಾನಿ ಸೆಡೆಯ ಮೇಲೆ ಸಣ್ಣ ಬಾಳೆ ಎಲೆಯಿಟ್ಟು ಯಜಮಾನನ ಮುಂದೆ

ಅದನ್ನು ಹಿಡಿಯುತ್ತಾಳೆ. ಆಗ ಯಜಮಾನ ಸ್ವಲ್ಪ ಅನ್ನ ಮತ್ತು ಸಾಂಬಾರು, ಪಲ್ಯಗಳನ್ನು ಸೆಡೆಯ ಮೇಲಿದ್ದ ಬಾಳೆ ಎಲೆಗೆ ಹಾಕಿದಾಗ ಯಜಮಾನಿ ಅದನ್ನು ಹಿಡಿದುಕೊಡು ಹಿಂದೆ ಹಿಂದೆ ಹೋಗುತ್ತಾ ಒಲೆಯ ಬಳಿಗೆ ಬಂದು "ಸರ್ವೆರ್ಡಲಾ ಅಗ್ಗಿಗ್ ಬಳಸುವೆ" (ಸರ್ವರಲ್ಲೂ ಅಗ್ನಿಗೆ ಬಡಿಸುತ್ತೆನೆಂದು) ಮೂರು ಸಾರಿ ಹೇಳಿ ಸೆಡೆಯ ಮೇಲೆ ಬಾಳೆಯೆಲೆಯಲ್ಲಿದ್ದ ಅನ್ನ ಸಾಂಬಾರುಗಳನ್ನು ಒಲೆಗೆ ಹಾಕಿ ನಮಸ್ಕರಿಸುತ್ತಾಳೆ. ನಂತರ ಮನೆ ಯಜಮಾನ "ಸರ್ವೆರ್‌ಲಾ ಪುದ್ವಾರ್ ಉನುಕೊ" (ಸರ್ವರಲ್ಲೂ ಹೊಸ ಅನ್ನದ ಊಟ ಮಾಡುವ ) ಎಂದು ಹೇಳಿದಾಗ ಎಲ್ಲರೂ ಊಟ ಮಾಡುತ್ತಾರೆ. " ಪುದ್ವಾರ್ ಊಟವಾದ ನಂತರ ಎಲ್ಲರೂ ಒಟ್ಟಿಗೆ ಕುಳಿತು ಎಲೆ ಅಡಿಕೆ ತಿನ್ನುತ್ತಾರೆ. ಈ ದಿವಸ ಸಣ್ಣ ಮಕ್ಕಳೂ ಸಹಾ ಎಲೆ ಅಡಿಕೆ ಜಗಿದರೆ ಒಳ್ಳೆಯದೆಂಬ ನಂಬಿಕೆ ಇರುವುದರಿಂದ ಆ ದಿನ ಸಣ್ಣ ಮಕ್ಕಳಿಗೆ ಎಲೆ ಹೊಗೆಸೊಪ್ಪು ಮತ್ತು ಸುಣ್ಣ ರಹಿತ ಅಡಿಕೆ ಜಗಿಯುವುದಕ್ಕೆ ವಿನಾಯಿತಿ, ಒಪ್ಪಿಗೆ ಇರುತ್ತದೆ. ಇದಾದ ನಂತರ ಎಲ್ಲರೂ ಒಟ್ಟಿಗೆ ಕುಳಿತು ಲೋಕಾಭಿರಾಮ ಮಾತನಾಡುತ್ತಾರೆ. ಬಳಿಕ ರಾತ್ರಿ ನೆಂಟರಿಷ್ಟರಿಗೆ ಕೋಳಿ, ರೊಟ್ಟಿ ಅಥವಾ ದೋಸೆಯ ಔತಣವಿರುತ್ತದೆ. ಇದನ್ನು "ಮರಿಪುದ್ವಾರ್" ಎಂದು ಕರೆಯುತ್ತಾರೆ. ಜೀವಕ್ಕೆ ಜೀವಕೊಡುವ ಭತ್ತ ಮತ್ತು ಅಕ್ಕಿಗೆ ತುಳುನಾಡಿನಲ್ಲಿ ಎಷ್ಟು ಪೂಜ್ಯ ಸ್ಥಾನಮಾನವಿದೆಯೆಂದರೆ ಹಿಂದೆಲ್ಲ ಒಂದು ವ್ಯಕ್ತಿಯು ಸ್ವತಃ ತನ್ನ ಮನೆಯಲ್ಲಿ ಕುರಲ್ ಹಬ್ಬ ಅಥವಾ ಪುದ್ವಾರ್ ಅಥವಾ ತೆನೆ ಹಬ್ಬವನ್ನು ಆಚರಿಸದೆ ಇನ್ನೊಂದು ಮನೆಯಲ್ಲಿ ನಡೆಯುವ ಹೊಸ ಅಕ್ಕಿ ಊಟದ ಹಬ್ಬದಲ್ಲಿ ಹೊಸ ಭತ್ತದಿಂದ ತೆಗೆದ ಅಕ್ಕಿಯ (ಹೊಸ ಅಕ್ಕಿ ಊಟ) ಅನ್ನವನ್ನು ಮಾಡುವುದು ನಿಷಿದ್ಧವಾಗಿದೆ. (ಪುದ್ವಾರ್ ಎಂದರೆ ಪೊಸ + ಬಾರ್ = ಹೊಸಭತ್ತದಿಂದ ತೆಗೆದ ಅಕ್ಕಿಯ (ಹೊಸಕ್ಕಿ ಊಟ) ಊಟವಾಗಿದೆ. ಮರಿಪುದ್ವಾರ್ ದಿನ ಮರಿ ಪುದ್ವಾರ್‌ಗಾಗಿ ಮಾಡಿಟ್ಟಿರುವ ಕೋಳಿ ಸಾಂಬಾರು, ರೊಟ್ಟಿ ಅಥವಾ ದೋಸೆಯನ್ನು ದೈವ ಮತ್ತು ಪಿತೃಗಳಿಗೆ ಅಗೇಲು (ಎಡೆ) ಬಡಿಸಿ, ಪ್ರಾರ್ಥಿಸಿ ಬಳಿಕ ಮರಿಪುದ್ವಾರ್ ಊಟವನ್ನು ಮಾಡಲಾಗುತ್ತದೆ.

**೪.೧.೬ ಚೌತಿ**

ಭೂತ (ದೈವ) ಕಟ್ಟುವ ವೃತ್ತಿ ನಡೆಸುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಭೂತಗಣಗಳ ನಾಯಕನಾದ ಗಣಪತಿಯನ್ನು ಪ್ರಾಚೀನ ಕಾಲದಿಂದಲೂ ಚೌತಿಯ ದಿನ ವಿಶೇಷ ಭಕ್ತಿಯಿಂದ ಆರಾಧಿಸುತ್ತಾರೆ. ಮೂಲ ದ್ರಾವಿಡರ ಪ್ರಮುಖ ಆದಿ ದೈವ ಈ ಗಣಪತಿ ಆಗಿದ್ದ ಕಾರಣ, ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯವೂ ಮೂಲ ದ್ರಾವಿಡರೇ ಆಗಿದ್ದರಿಂದ ಈ ಸಮುದಾಯ ವಿಶೇಷವಾಗಿ ಚೌತಿಯಂದು ಗಣಪತಿ ಆರಾಧನೆ ಮಾಡಲು ಕಾರಣವಾಗಿದೆ. ಚೌತಿಯ ದಿನ ಈ ಸಮುದಾಯ ಬಾಳೆ ಎಲೆಯಲ್ಲಿ ಅಗೇಲು (ಎಡೆ) ಬಡಿಸಿದಂತೆ ಅಕ್ಕಿಯ ಮೇಲೆ ತೆಂಗಿನಕಾಯಿಯಿಟ್ಟು ಪಕ್ಕದಲ್ಲಿ ಅಡಿಕೆ, ವೀಳ್ಯದೆಲೆ, ಒಂದೂ ಕಾಲು ರೂಪಾಯಿ ಇಟ್ಟು ದೀಪ ಹಚ್ಚಿಡುತ್ತಾರೆ. ಇದನ್ನು "ಗಣಪತಿ ಸುತ್ಯೆ" ಎಂದು ಕರೆಯುತ್ತಾರೆ. "ಗಣಪತಿ ಸುತ್ಯೆ" ಎಂದರೆ "ಗಣಪತಿಸ್ತುತಿ" ಎಂದರ್ಥ. (ಕನ್ನಡದ "ಸ್ತುತಿ" ಎಂಬ ಪದವೇ ತುಳುವಿನಲ್ಲಿ "ಸುತ್ಯೆ" ಎಂದಾಗಿದೆ) ಈ ಗಣಪತಿ ಸುತ್ಯೆಯ ಪಕ್ಕವೇ ಗೆರಸೆಯ ಮೇಲೆ ೨-೩ ಬಾಳೆ ಎಲೆಯನ್ನು ವಿಶಾಲವಾಗಿಟ್ಟು ಅದರ ಮೇಲೆ ಅವಲಕ್ಕಿ, ಕಬ್ಬು, ಎಳ್ಳುಂಡೆ, ಲಾಡು, ಹೋಳಿಗೆ – ಇತ್ಯಾದಿ ಅವರವರ ಶಕ್ತಿಯಾನುಸಾರ ಭಕ್ಷ್ಯಗಳನ್ನು ಬಡಿಸಿಟ್ಟು ಊದುಬತ್ತಿ ಉರಿಸಿ ಪ್ರಾರ್ಥಿಸುತ್ತಾರೆ. ಈ ರೀತಿ ಗಣಪತಿಗೆ ತಿಂಡಿ ಭಕ್ಷ್ಯಗಳನ್ನು ಬಡಿಸುವುದನ್ನು ಈ ಜನಾಂಗ "ಗಣಪತಿಗ್ ಬಳಸುನೆ" (ಗಣಪತಿಗೆ ಬಡಿಸುವುದು) ಎಂದು ಕರೆಯುತ್ತಾರೆ. ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗ ಈಗಲೂ ಪ್ರತೀ ದೈವ ಕಟ್ಟುವ ಸಂದರ್ಭ (ಕೋಲ ಅಥವಾ ನೇಮದ ವೇಳೆ) ಮುಖವರ್ಣಿಕೆಗೆ ಕುಳಿತುಕೊಳ್ಳುವ ಮುಂಚೆ ಹಾಗೂ ಕುಟುಂಬದ ಯಾವುದೇ ಶುಭ ಕಾರ್ಯದ ಮೊದಲು "ಗಣಪತಿ ಸುತ್ಯೆ"

ಇಟ್ಟೇ (ಗಣಪತಿಯನ್ನು ಸ್ತುತಿಸಿಯೇ) ಮುಂದಿನ ಕಾರ್ಯಕ್ಕೆ ಮುಂದಾಗುವ ಕ್ರಮ ಈಗಲೂ ರೂಢಿಯಲ್ಲಿದೆ. ಚೌತಿಯಂದು ಈ ಸಮೂದಾಯದ ಕೆಲವರು ತಮ್ಮ ಮನೆಗೆ ಕೊರಳು ಕಟ್ಟುವ (ತೆನೆ ಕಟ್ಟುವ ಹಬ್ಬ) ಹಬ್ಬವನ್ನು ಮಾಡುವುದೂ ಸಹಾ ಇದೆ.

**೪.೧.೭ ದೀಪಾವಳಿ ಹಬ್ಬ (ದೀಪೊಲಿದ ಪರ್ಬ ಅಥವಾ ಪರ್ಬೊದ ಅಮಾಸೆ)**



ದೀಪಾವಳಿಗೆ ಮರ ಹಾಕುವ ಕ್ರಮ

ತುಳುನಾಡಿನ ತುಳುವರ ದೊಡ್ಡ ಹಬ್ಬವೆಂದರೆ ದೀಪಾವಳಿ ಹಬ್ಬ. ಈ ಹಬ್ಬವನ್ನು ತುಳುವಿನಲ್ಲಿ "ದೀಪೊಲಿದ ಪರ್ಬ" (ದೀಪಗಳ ಹಬ್ಬ) ಎಂದೂ ಅಥವಾ "ಪರ್ಬೊದ ಅಮಾಸೆ" (ದೀಪಾವಳಿ ಅಮವಾಸ್ಯೆ) ಎಂದೂ ಕರೆಯುತ್ತಾರೆ.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರೂ ಪ್ರಾಚೀನ ಕಾಲದಿಂದಲೂ ಈ ದೀಪಾವಳಿ ಹಬ್ಬವನ್ನು ತಮ್ಮದೇ ಆದ ಕ್ರಮಗಳಿಂದ ಆಚರಿಸುತ್ತಾ ಬಂದಿದ್ದಾರೆ. ಇವರು ಅಮವಾಸ್ಯೆಯ ಮೊದಲ ದಿನ ಬೆಳಗ್ಗೆ ಎದ್ದು ಮಕ್ಕಳಾದಿಯಾಗಿ ಮನೆಯ ಹಿರಿಯರವರೆಗೆ ಎಣ್ಣೆ ಹಚ್ಚಿ ಸ್ನಾನ ಮಾಡಿ ಶುಚಿರ್ಭೂತರಾಗಿ ತಮ್ಮ ಮನೆಯಲ್ಲಿರುವ ದೈವ ದೇವರಿಗೆ ದೀಪ ಹಚ್ಚಿ ಕೈ ಮುಗಿಯುತ್ತಾರೆ. ಈ ಸಮೂದಾಯಕ್ಕೆ ಎಣ್ಣೆ ಹಚ್ಚಿ ಸ್ನಾನ ಮಾಡುವ ದಿನವನ್ನು "ಎಣ್ಣೆ ಪೂಜಿ ಪರ್ಬ" (ಎಣ್ಣೆ ಹಚ್ಚಿ ಸ್ಥಾನ ಮಾಡುವ ಹಬ್ಬ) ಎಂದು ಆಚರಿಸುತ್ತಾರೆ. ಅಮವಾಸ್ಯೆಯ ಪಾಡ್ಯದಂದು ಈ ಜನಾಂಗಕ್ಕೆ ಧಾರ್ಮಿಕ ನೆಲೆಯಲ್ಲಿ ವಿಶೇಷ ಮಹತ್ವವಿರುತ್ತದೆ. ಅಂದು ಬಲಿ ಪೂಜೆಯ ನಿಮಿತ್ತ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಗ್ರಾಮ ದೈವ ಕಟ್ಟುವ ಮುಖಂಡ, ಮತ್ತು ಗ್ರಾಮ ದೈವಕ್ಕೆ ಸೂಟೆ ಹಿಡಿಯುವ ಮುಗೇರ ಜನಾಂಗದ "ಕಾಪ" ಎಂದು ಕರೆಯಲಾಗುವ ಪ್ರಮುಖ ವ್ಯಕ್ತಿ ಹಾಗೂ ದೈವದ ಚಾಕರಿ ಸೇವಕ (ಪೂಜಾರಿ) ರು ಸೇರಿ ಹಾಳೆ ಮರದ ಸಣ್ಣ ಗೆಲ್ಲುಗಳನ್ನು ಮತ್ತು ಕೂವೆಗಿಡದ ಕೋಲುಗಳನ್ನು ಊರಿನ ಪ್ರಮುಖ ಗುತ್ತು – ಬಾರಿಕೆ (ಬರ್ಕೆ)ಗಳ ಮನೆಯ ತುಳಸೀ ಕಟ್ಟೆಯ ಮುಂದೆ ಮತ್ತು ಊರಿನ ಗುಡಿ–ಗುಂಡ, ದೈವ–ದೇವಸ್ಥಾನಗಳ ಮುಂಭಾಗದಲ್ಲಿ ನೆಡುವ ಸಂಪ್ರದಾಯವಿದೆ. ಇದನ್ನು ತುಳುವಿನಲ್ಲಿ "ಮರಪಾಡುನೆ" (ಮರಹಾಕುವುದು) ಎಂದು ಕರೆಯಲಾಗುತ್ತದೆ.

ಈ "ಮರಹಾಕುವ" ಸಂಪ್ರದಾಯವು ದೀಪಾವಳಿ ಹಬ್ಬ ಮತ್ತು ಧಾರ್ಮಿಕ ಆಚರಣೆಗಳೆರಡರ ಪ್ರಮುಖ ಅಂಗವಾಗಿದೆ ಮರ ಹಾಕುವ ಸಂದರ್ಭ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ವಂಶ ವೃಕ್ಷ (ಕುಲವೃಕ್ಷ) ವಾದ ಹಾಳೆಮರವನ್ನಷ್ಟೇ ಬಳಸುವುದು, ಅದರಲ್ಲೂ ಮುಖ್ಯವಾಗಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ವ್ಯಕ್ತಿಯೇ ಮುಂದೆ ನಿಂತು "ತೆಂಬರೆ" ಬಡಿಯುತ್ತಾ ಇತರರಿಂದ (ಕಾಪ ಮತ್ತು ಪೂಜಾರಿಯಿಂದ ಹಾಳೆ ಮರದ ಗೆಲ್ಲುಗಳನ್ನು ನೆಡಿಸುವುದರಿಂದ ದೈವರಾಧನೆ ಮತ್ತು ಧಾರ್ಮಿಕ ವ್ಯವಸ್ಥೆಗಳಲ್ಲಿ ಈ ಸಮುದಾಯವೇ ಪ್ರಮುಖ ಕೇಂದ್ರ ಶಕ್ತಿಯೆಂಬುದನ್ನು ಸ್ಪಷ್ಟೀಕರಿಸುತ್ತದೆ. ಪತ್ತನಾಜೆ, (ಹತ್ತನಾವಧಿ) ಪರ್ವ, ತಂಬಿಲ, ಅಗೇಲು, ಪೂಜಾದಿ ಕ್ರಿಯೆಗಳೆಲ್ಲ ಮುಗಿದ

ಬಳಿಕ ಮುಚ್ಚಿದ್ದ ಗುಡಿ–ಗುಂಡ ಮಾಡ, ಆಲಡೆ, ದೈವಸ್ಥಾನಗಳ ಬಾಗಿಲುಗಳನ್ನು ಪಾಡ್ಯದ ದಿನದಂದೇ ತೆರೆದು ದೈವಗಳಿಗೆ ಹೊದ್ಲು, ಅವಲಕ್ಕಿ, ಬಾಳೆಹಣ್ಣುಗಳ ಅಗೇಲು (ಎಡೆ) ಬಡಿಸಿ ಭಕ್ತರ ವೀಕ್ಷಣೆಗೆ ಅನುವು ಮಾಡಿ ಕೊಡಲಾಗುತ್ತದೆ. ಪಾಡ್ಯದ ದಿನ ದೇವಸ್ಥಾನಗಳ ಮುಂದಿರುವ ಗುಡಿ–ಗುಂಡಗಳ ಬಾಗಿಲುಗಳನ್ನು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಗ್ರಾಮ ದೈವ ಕಟ್ಟುವ ಮುಖ್ಯಸ್ಥ ಮತ್ತು ಆ ಸಮುದಾಯದ ಇತರರ ನೇತೃತ್ವದಲ್ಲೇ ತೆರೆದು ದೀಪ ಹಚ್ಚಲಾಗುತ್ತದೆ. ಮತ್ತು ದೀಪಾವಳಿಯ ನಂತರವೇ ದೈವಗಳಿಗೆ ಅಂಕ, ಆಯನ, ಜಾತ್ರೆ, ಕೋಲ, ನೇಮ, ವಲಸರಿ, ನಡವಳಿಗಳೆಲ್ಲ ನಡೆಯುವುದರಿಂದ ದೀಪಾವಳಿಯ ಹಬ್ಬದಲ್ಲಿ ಈ ಸಮುದಾಯ ಇತರ ಹಬ್ಬಗಳಿಗಿಂತಲೂ ಹೆಚ್ಚಾಗಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಾರೆ.

ಪ್ರಾಚೀನ ಕಾಲದಲ್ಲಿ ಈ ಸಮುದಾಯಕ್ಕೆ ವ್ಯವಸಾಯದ ಭೂಮಿ ಇಲ್ಲದಿದ್ದ ಕಾರಣ ಈ ಸಮುದಾಯ ದನ ಕರುಗಳನ್ನು ಸಾಕುವುದು ಕಡಿಮೆಯಾಗಿತ್ತು. ಆದರೂ ಊರಿನ ಗುತ್ತು–ಮಾಗಣೆಯವರು ಈ ಸಮುದಾಯಕ್ಕೆ ದನ–ಕರುಗಳನ್ನು ಕೊಟ್ಟರೆ ಅವುಗಳನ್ನು ಪ್ರೀತಿಯಿಂದ ಸಾಕುತ್ತಿದ್ದರು. ದೀಪಾವಳಿಯ ಗೋಪೂಜೆಯಂದು ದನ ಕರುಗಳನ್ನು ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೂ ಸಹಾ ಸ್ನಾನ ಮಾಡಿಸಿ ಆರತಿ ಬೆಳಗಿ ಹಣೆಗೆ ಕುಂಕುಮ ದೀಪ ಹಚ್ಚಿ ದನ ಕರುಗಳ ಕೊರಳಿಗೆ ಹೂ ಮಾಲೆ ಹಾಕಿ, ಉಪ್ಪು ಹಾಕದ ದೋಸೆ ತಿನ್ನಿಸುತ್ತಾರೆ. ನಂತರ ಲಕ್ಷ್ಮೀ ಪೂಜೆಯ ದಿನ ಕತ್ತಿ, ಹಾಕೆ, ಕೊಡಲಿ ಮುಂತಾದ ವಸ್ತುಗಳನ್ನು ತುಳಸೀ ಕಟ್ಟೆ ಬಳಿ ಇರಿಸಿ ಆರತಿ ಬೆಳಗಿ ಆಯುಧ ಪೂಜೆಯನ್ನು ಸಹಾ ಮಾಡುತ್ತಾರೆ. ದಾನ–ಧರ್ಮಗಳು ಹೆಚ್ಚಾಗಿದ್ದ ಪ್ರಾಚೀನ ಕಾಲದಲ್ಲಿ ದೀಪಾವಳಿಯ ಸಂದರ್ಭ ದೈವದ ವೃತ್ತಿ ನಡೆಸುವ ಈ ಸಮುದಾಯವನ್ನು ಊರಿನ ಪ್ರಮುಖರು, ಗುತ್ತು–ಬಾರಿಕೆ, ಗುರಿಕಾರರು ತಮ್ಮ ತಮ್ಮ ಮನೆಗಳಿಗೆ ಕರೆದು ಹಬ್ಬದ ಭಕ್ಷ್ಯಗಳಿಂದ ಹಿಡಿದು ಉಪ್ಪು, ಹುಳಿ, ಮೆಣಸು, ತೆಂಗಿನಕಾಯಿ, ಭತ್ತ, ಅಕ್ಕಿ, ವಸ್ತ್ರಾದಿಗಳನ್ನು ದಾನ ಮಾಡುತ್ತಿದ್ದರು. ಅತ್ಯಂತ ಪ್ರಾಚೀನ ಕಾಲದಲ್ಲಿ ಈ ಸಮುದಾಯದ ಮಹಿಳೆಯರ ತಂಡ ಮನೆ ಮನೆಗೆ ತೆರಳಿ ಮಾದಿರ ಕುಣಿತ, ಮಾಂಕಾಳಿ ಕುಣಿತಗಳನ್ನು ಸಹಾ ನಡೆಸುತ್ತಿದ್ದರು. ಹೀಗೆ ದೀಪಾವಳಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯಕ್ಕೆ ಕೇವಲ ಹಬ್ಬ ಮಾತ್ರವಷ್ಟೇ ಆಗಿರದೆ ಧಾರ್ಮಿಕ ಮತ್ತು ದೈವಿಕ ಆರಾಧನೆಯ ಜವಾಬ್ದಾರಿ ನೀಡಿಕೆಯ ಪರ್ವವೂ ಆಗಿ ಪರಿಣಮಿಸಿದೆ.

**೪.೧.೮ ಕಾವೇರಿ ಸಂಕ್ರಾಂತಿ**

ತುಳುನಾಡಿನಲ್ಲಿ "ಪುದ್ವಾರ್" ಆಚರಣೆಯ ದಿನ "ಪೊಲಿ" ಅದೃಷ್ಟ ಲಕ್ಷ್ಮೀಯನ್ನು ಮನೆಯೊಳಗೆ ಬರಮಾಡಿಕೊಳ್ಳುವ ತುಳುವರು ಈ ಅದೃಷ್ಟ ಲಕ್ಷ್ಮೀಯೆಂಬ ಸಂಪತ್ತು ಮನೆಯೊಳಗಿನಿಂದ ಹೊರಹೋಗದಂತೆ ಸದಾ ಸ್ಮರಿಸುತ್ತಿರುತ್ತಾರೆ. ಹೀಗಾಗಿ ಕಾವೇರಿ ಸಂಕ್ರಾಂತಿಯ ಕಾಲಕ್ಕೆ ಬೆಳೆಯ ಕಟಾವು ನಡೆದು ದವಸ–ಧಾನ್ಯ–ಸಿರಿ ಸಂಪತ್ತುಗಳು ಮತ್ತಷ್ಟು ಮನೆಯೊಳಗೆ ತುಂಬಲ್ಪಡುತ್ತವೆ. ಆದರೆ ಇದೇ ವೇಳೆ ಅದೃಷ್ಟ ಲಕ್ಷ್ಮೀಯ ವೈಭೋಗವನ್ನು ಕಂಡು ಮತ್ಸರ ಪಡುವ ದರಿದ್ರ ಲಕ್ಷ್ಮೀ ಉಪಾಯದಿಂದ ಸಂಜೆ ವೇಳೆ ಆ ಮನೆಯೊಳಕ್ಕೆ ನುಗ್ಗಿ ಅದೃಷ್ಟ ಲಕ್ಷ್ಮೀಯನ್ನು ಹೊರಗಟ್ಟಲು ಪ್ರಯತ್ನಿಸುತ್ತಾಳೆಂಬ ನಂಬಿಕೆ ಇರುವುದರಿಂದ ಕಾವೇರಿ ಸಂಕ್ರಾಂತಿಯ ದಿನ ತುಳುನಾಡಿನ ಪ್ರತಿಯೊಬ್ಬ ತುಳುವರು ತಮ್ಮ ತಮ್ಮ ಮನೆಗಳ ಮುಂಭಾಗದ ಮೆಟ್ಟಿಲುಗಳ ಬದಿ, ಹಾಗೂ ಭತ್ತದ ಕಣಜಗಳಲ್ಲಿ ಚೂರಿಮುಳ್ಳು ಗಿಡದ ಸಣ್ಣ ಗೆಲ್ಲಿನ ಮೇಲೆ ಬೆಣಚು ಕಲ್ಲು ಮತ್ತು ಮಸಿಯನ್ನಿಟ್ಟು ದರಿದ್ರ ಲಕ್ಷ್ಮೀ ಮನೆಯೊಳಕ್ಕೆ ಪ್ರವೇಶಿಸದಂತೆ "ಮುಟ್ಟ" (ತಡೆ) ಇಡುತ್ತಾರೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೂ ಸಹಾ ಈ ಕಾವೇರಿ ಸಂಕ್ರಾಂತಿ ಹಬ್ಬವನ್ನು ಇದೇ ರೀತಿ ಆಚರಿಸುತ್ತಾರಲ್ಲದೆ

ರಾತ್ರಿ ದೋಸೆ ಮತ್ತು ಕೋಳಿ ಸಾಂಬಾರನ್ನು "ಸಂಕ್ರಾಂತಿದ ಅಗೇಲು" (ಸಂಕ್ರಾಂತಿ ಎಡೆ) ಎಂದು ತಮ್ಮ ತಮ್ಮ ದೈವ, ಪಿತೃಗಳಿಗೆ ಎಡೆ ಬಡಿಸುತ್ತಾರೆ. ಪ್ರಾಚೀನ ಕಾಲದಲ್ಲಿ ಕಾವೇರಿ ಸಂಕ್ರಾಂತಿಯ ದಿನ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ತುಳುನಾಡಿನ ಪ್ರತೀ ಮನೆ ಮನೆಗೆ ಹೋಗಿ ಕಾವೇರಿ ಪುರುಷನ ಕುಣಿತ ನಡೆಸುತ್ತಾ ಕಾವೇರಿ ಸಂಕ್ರಾಂತಿಯ ಮಹತ್ವವನ್ನು ತಿಳಿಸುತ್ತಿದ್ದರು.

**೪.೧.೯ ಕೆಡ್ಡಸ**

"ಕೆಡ್ಡಸ" ಎಂದರೆ ತುಳುವಿನಲ್ಲಿ ಭೂಮಿದೇವಿ ಋತುಮತಿಯಾಗುವ ಸೂತಕದ ಕಾಲ ಅಥವಾ ಕಂಗೆಡುವ ಕಾಲ ಎಂದರ್ಥ. ಕೆಡ್ಡಸ ಹಬ್ಬ ಸಾಮಾನ್ಯವಾಗಿ ಚಳಿಗಾಲದ ಸಂದರ್ಭ ಬರುವುದರಿಂದ ಈ ಚಳಿಗಾಲದ ಸಂದರ್ಭ ಗಿಡ ಮರಗಳೆಲ್ಲ ಎಲೆಗಳನ್ನುದುರಿಸಿ ಬೋಳಾಗಿ ನಿಂತಿರುತ್ತವೆ. ಒಂದೆಡೆ ಉಷ್ಣ ಹವೆ, ಬಿಸಿಗಾಳಿ ಇರುತ್ತದೆ. ಈ ರೀತಿಯ ವಾತಾವರಣದಿಂದಾಗಿ ಪ್ರಕೃತಿ ಸಹಜವಾಗಿಯೇ ಉಷ್ಣತೆಯಿಂದಾಗಿ ಕಂಗೆಡುತ್ತದೆಯಲ್ಲದೆ, ಉಷ್ಣತೆಯ ಪರಿಣಾಮ ಪ್ರಾಣಿ, ಪಕ್ಷಿಗಳೂ ಕಂಗೆಡುತ್ತದೆ. ಹಾಗಾಗಿ ಈ ಕಾಲವನ್ನು ಪ್ರಕೃತಿ ಕಂಗೆಡುವ, ತೊಂದರೆಗೊಳಗಾಗುವ ಕಾಲವೆನ್ನಲಾಗುತ್ತಿದೆ.

ತುಳುನಾಡಿನಲ್ಲಿ ಮುಟ್ಟಾದ ಹೆಣ್ಣು ಮೂರು ದಿನ ಯಾರಿಂದಲೂ ಮುಟ್ಟಿಸಿಕೊಳ್ಳದೆ ಮನೆಯ ಹೊರಗಿರುತ್ತಾಳೆ. ಹೀಗಾಗಿ ಭೂದೇವಿಯೂ ಸಹಾ ವರ್ಷಕ್ಕೊಮ್ಮೆ ಮುಟ್ಟಾಗುವುದೆಂಬ ನಂಬಿಕೆಯ ಹಿನ್ನಲೆಯಲ್ಲಿ ಈ ಮೂರು ದಿನವನ್ನು ಹಬ್ಬವಾಗಿ ಆಚರಿಸುತ್ತಾರೆ. "ಸುರುಕೆಡ್ಡಸ" (ಆರಂಭದ ಕೆಡ್ಡಸದ ದಿನ) ದ ದಿನ ಅಥವಾ ಕೆಡ್ಡಸದ ಮೊದಲನೇ ದಿನ ಮನೆಯ ಅಂಗಳಕ್ಕೆ ಸೆಗಣಿ ಸಾರಿಸಿ ತುಳಸೀಕಟ್ಟೆಯ ಮುಂದೆ ರಂಗೋಲಿ ಬರೆದು ದೀಪ ಹಚ್ಚಿ ಒಂದು ಮಡಿವಸ್ತ್ರ, ಹಾಸಿ ಮಡಲಿನ ಸಣ್ಣ ಕಡ್ಡಿ, ಸೀಗೆ, ಎಳ್ಳೆಣ್ಣೆ, ಗರಿಕೆ ಹುಲ್ಲುಗಳನ್ನಿಟ್ಟು ಗರಿಕೆ ಹುಲ್ಲಿನಿಂದ ಮೂರು ಸಲ ಸೀಗೆ ನೀರನ್ನು ಮತ್ತು ಎಣ್ಣೆಯನ್ನು ನೆಲಕ್ಕೆ ಬಿಡಲಾಗುತ್ತದೆ. ನಂತರ ಎಲ್ಲರೂ ಭೂಮಿಗೆ ಅಡ್ಡ ಬಿದ್ದು ಪ್ರಾರ್ಥಿಸಿ ಮಧ್ಯಾಹ್ನ ಹುರುಳಿ, ಗುಜ್ಜೆ, ನುಗ್ಗೆಯನ್ನು ಒಟ್ಟಿಗೆ ಸೇರಿಸಿದ ಸಾಂಬಾರಿನೊಂದಿಗೆ ಊಟ ಮಾಡುತ್ತಾರೆ.

ನಡು ಕೆಡ್ಡಸದ ದಿನ ಪಕ್ಷಿಗಳಿಗೆ ಜ್ವರ ಬಂದು ಎಲ್ಲೂ ನಡೆದಾಡಲಾಗುವುದಿಲ್ಲವೆಂಬ ನಂಬಿಕೆ ತುಳುನಾಡಿನಲ್ಲಿದ್ದಿರುವುದರಿಂದ ಪ್ರಾಚೀನ ಕಾಲದಲ್ಲಿ ನಡು ಕೆಡ್ಡಸದ ದಿನ ಬೇಟೆಯಾಡಲು ಹೋಗಿ ಊರವರೆಲ್ಲರೂ ಪ್ರಾಣಿಗಳನ್ನು ಸುತ್ತುವರಿದು ಅಟ್ಟಿಸಿಕೊಂಡು ಬಂದು ಹೊಡೆದುಕೊಂದು ಕೊನೆಗೆ ಎಲ್ಲರೂ ಮಾಂಸವನ್ನು ಹಂಚಿಕೊಳ್ಳುತ್ತಿದ್ದರು. ಆದರೆ ಈಗ ಬೇಟೆಯಾಡಲು ಹೋಗುವ ಕ್ರಮವಿಲ್ಲ. ಇದರ ಬದಲು ಕೋಳಿ ಸಾಂಬಾರು ಮಾಡಿ ತಿನ್ನಲಾಗುತ್ತದೆ. ಕಡೆ ಕೆಡ್ಡಸದ ದಿನ ಭೂಮಿ ದೇವಿ ಸೂತಕ ಕಳೆದು ಪರಿಶುದ್ಧಳಾಗುವ ದಿನವೆಂಬ ನಂಬಿಕೆ ಇರುವ ಕಾರಣ ಈ ದಿನ ಮತ್ತೆ ಮನೆ ಸುತ್ತ ಮುತ್ತ ಅಂಗಳಕ್ಕೆಲ್ಲ ಸೆಗಣಿಸಾರಿಸಿ ತುಳಸೀ ಕಟ್ಟೆ ಮುಂದೆ ಅಂಗಳದಲ್ಲಿ ಬಿಡಿಸಿ ಏಳು ಸರೋಳಿ ಮತ್ತು ಏಳು ಮಾವಿನ ಎಲೆಗಳನ್ನು ಸಾಲಾಗಿ ಇಟ್ಟು ದೀಪ ಹಚ್ಚಿ ಮಣೆಯ ಮೇಲೆ ಸೀರೆ, ರವಿಕೆ, ಎಲೆಅಡಿಕೆ, ತೆಂಗಿನಕಾಯಿ ಕುರ್ದಿ (ಸುಣ್ಣ ಬೆರೆಸಿದ ಅರಸಿನ ನೀರು) ಅರಸಿನ ಹುಡಿ, ಕುಂಕುಮ, ನವಧಾನ್ಯ, ತೆಂಗಿನಹಾಲು, ಗರಿಕೆಹುಲ್ಲು, ತೆಂಗಿನ ಎಣ್ಣೆ ಕನ್ನಡಿ, ಕಪ್ಪು ಅಥವಾ ಹಸಿರು ಬಣ್ಣದ ಗಾಜಿನ ಬಳೆ, ಮಡಿಕೆ, ನೀರು, ಬಾಚಣಿಗಳನ್ನು ಇಡಲಾಗುತ್ತದೆ. ನಂತರ ಗರಿಕೆ ಹುಲ್ಲಿನಿಂದ ಮೂರು ಬಾರಿ ಸೀಗೆಯ ನೀರು ಮತ್ತು ಎಣ್ಣೆಯನ್ನು ಭೂಮಿಗೆ ಅರ್ಪಿಸಿ ಕುರ್ದಿ ನೀರು (ಅರಶಿನ ಮತ್ತು ಸುಣ್ಣ ಮಿಶ್ರಿತ ನೀರು) ಸಿಂಪಡಿಸಿ ಶುದ್ಧಗೊಳಿಸಿ ನೆಲಕ್ಕೆ ಕುಂಕುಮದ ಬೊಟ್ಟು ಇಟ್ಟು ಎಲ್ಲರೂ ಭೂಮಿಗೆ ಅಡ್ಡ ಬಿದ್ದು ಬೆಳೆ – ಭಾಗ್ಯಗಳನ್ನು ಕರುಣಿಸು ಎಂದು ಪ್ರಾರ್ಥಿಸುತ್ತಾರೆ.

ತುಳುನಾಡಿನಲ್ಲಿ ಕೆಡ್ಡಸದ ಹಬ್ಬ ಆರಂಭವಾಗುವ ಮೊದಲು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ತೆಂಬರೆ ಬಡಿಯುತ್ತಾ ಊರಿನ ಪ್ರತೀ ಮನೆ ಮನೆಗೂ ಹೋಗಿ "ಕೆಡ್ಡಸ ಪಸ್ಪುನಿ" (ಕೆಡ್ಡಸ ಹೇಳುವ) ಎಂಬ ವಿಶಿಷ್ಟ ಊರ ಕಟ್ಟಲೆಯ ಕ್ರಮವನ್ನು ನಡೆಸುತ್ತಾರೆ. ಈ ಸಮುದಾಯಕ್ಕೆ ಮೂಲಕ ಆಯಾ ಋತುಮಾನ ಸಂಬಂಧೀ ಹಬ್ಬ – ಆಚರಣೆಗಳ ನಿರ್ದೇಶನ ನೀಡುವ ಜವಾಬ್ದಾರಿ ಇರುವುದರಿಂದ ಇವರು ಕೆಡ್ಡಸ ಬರುವ ಮೊದಲೇ ಊರಿನ ಪ್ರತೀ ಮನೆಗೂ ಹೋಗಿ ತಮ್ಮ ವಿಶೇಷ ಶೈಲಿಯ ಹಾಸ್ಯದ ಮಾತಿನ ನುಡಿಕಟ್ಟಿನ ಮೂಲಕ ಕೆಡ್ಡಸ ಬರುವ ಮುನ್ಸೂಚನೆ ನೀಡಿ ಆ ಮನೆಯವರಿಂದ ದಾನ ಪಡೆದುಕೊಳ್ಳುವ ವಾಡಿಕೆ ಇಂದಿಗೂ ಇದೆ.



**೪.೧.೧೦ ಬಿಸು ಸಂಕ್ರಾಂತಿ (ವಿಷು ಸಂಕ್ರಮಣ)**

ಯುಗಾದಿಯನ್ನು ತುಳು ನಾಡಿನಲ್ಲಿ ಬಿಸು ಸಂಕ್ರಾಂತಿ ಎಂದು ಕರೆಯುತ್ತಾರೆ. "ಬಿಸು" ಎಂದರೆ ಬೇಸಾಯಕ್ಕೆ ದಿನ ನಿಗದಿ ಮಾಡುವ ಮುಹೂರ್ತ ಎಂದರ್ಥ. ಆ ದಿನ ಬಿದಿರನ್ನು ಒಂದು ಗಂಟು ಇರುವಂತೆ ಸ್ವಲ್ಪ ಮೇಲ್ಭಾಗದಿಂದ ಕತ್ತರಿಸಿ (ಸೇರು ಅಥವಾ ಸಿಲಿಂಡರ್ ಆಕಾರದಲ್ಲಿರುವಂತೆ ಬಿದಿರಿನ ತುಂಡಿನೊಳಗೆ ಕಳ್ಳಿ ಗಿಡದ ಎಲೆ ಮತ್ತು ನೆಕ್ಕಿ ಗಿಡದ ಎಲೆಗಳಿರುವ ಗೆಲ್ಲನ್ನು ಆ ಬಿದಿರಿನ ತುಂಡಿನೊಳಗೆ ಇಟ್ಟು ಆ ಬಿದಿರಿನ ತುಂಡನ್ನು ಉದ್ದದ ಕೋಲಿಗೆ ಆಧಾರವಾಗಿಟ್ಟು ತುಂಡನ್ನು ಬೇಸಾಯ ಮಾಡುವ ಗದ್ದೆ, ತರಕಾರಿ ತೋಟಗಳ ಮಧ್ಯೆ ಇಡುತ್ತಾರೆ. ನಂತರ ಮಧ್ಯಾಹ್ನ ಗೋಡಂಬಿ ಹಾಕಿದ ಪಾಯಸ ಹಾಗೂ ಹುರುಳಿ ಬೀಜ, ಗುಜ್ಜೆ, ನುಗ್ಗೆ, ಬದನೆ ಮಿಶ್ರಿತ ಸಾಂಬಾರಿನೊಂದಿಗೆ ಊಟ ಮಾಡುತ್ತಾರೆ. ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗದವರೂ ಸಹಾ ಬಿಸು ಸಂಕ್ರಾಂತಿಯನ್ನು ಇದೇ ರೀತಿ ಆಚರಿಸುತ್ತಾರೆ. ಪ್ರಾಚೀನ ಕಾಲದಲ್ಲಿ ಧಣಿಗಳ ಒಕ್ಕಲಿನ ಮನೆಯವರೆಲ್ಲರೂ ತಾವು ಬೆಳೆದ ಫಲ – ವಸ್ತುಗಳನ್ನೆಲ್ಲ ತಮ್ಮ ಧಣಿಗಳಿಗೆ ಬಿಸು ಕಾಣಿಕೆ ಒಪ್ಪಿಸುವ ಕ್ರಮವಿತ್ತು. ಆಗ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ತಮ್ಮ ತಮ್ಮ ಧಣಿಗಳಿಗೆ ತಾವು ಮಾಡಿದ ಚಾಪೆ, ಮುಟ್ಟಾಳೆ, ತೆಂಗಿನ ಕಾಯಿಯ ಚಿಪ್ಪಿನಿಂದ ಮಾಡಿದ ಸೌಟು ಇತ್ಯಾದಿಗಳನ್ನೆಲ್ಲ ಒಪ್ಪಿಸುತ್ತಿದ್ದರು. ನಂತರ ಆ ಊರಿನ ದೇವಸ್ಥಾನ, ದೈವಸ್ಥಾನಗಳಲ್ಲಿ ನಡೆಯುವ ವಿಶೇಷ ಪೂಜೆ, ಪರ್ವ, ಅಗೇಲು, ತಂಬಿಲಗಳಲ್ಲಿ ಭಾಗವಹಿಸುತ್ತಿದ್ದರು.

**೪.೧.೧೧ ಪತ್ತನಾಜೆ (ಹತ್ತನಾವಧಿ) ಅಥವಾ ವರ್ಸಾದಿ (ವರ್ಷಾವಧಿ)**

ತುಳುನಾಡಿನಲ್ಲಿ ಬೇಸ ತಿಂಗಳು ಎಂದರೆ ಮೇ ತಿಂಗಳು. ಈ ತಿಂಗಳಿನಲ್ಲಿ ಮಳೆ ಆರಂಭವಾಗುವ ಸೂಚನೆ ಇರುವುದರಿಂದ ತುಳುನಾಡಿನಲ್ಲಿ ಆವರೆಗೆ ನಡೆಯುತ್ತಿದ್ದ ಅಂಕ, ಆಯನ ಜಾತ್ರೆ – ನಡಾವಳಿ, ಕೋಲ – ನೇಮ, ಪರ್ವ – ತಂಬಿಲಗಳ ಕಾರ್ಯಗಳೆಲ್ಲ ಮುಗಿದು ಜನರು ಮತ್ತು ಕೃಷಿಕರು ಕೃಷಿ ಕಾರ್ಯಕ್ಕೆ ತೊಡಗಲು ಸಿದ್ಧತೆ ನಡೆಸುತ್ತಿರುತ್ತಾರೆ. ಮತ್ತು ಮಳೆಗಾಲಕ್ಕೆ ಬೇಕಾಗುವ ವಸ್ತುಗಳ ಸಂಗ್ರಹ ಕಾರ್ಯದಲ್ಲಿ ತೊಡಗಿಕೊಳ್ಳುತ್ತಾರೆ.ಬಿಸಿಲಿನ ತಾಪ, ಉಷ್ಣ ಹವೆಯ ಬೇಗೆಯಿಂದ ಕಂಗಾಲಾಗಿರುವ ಪ್ರಕೃತಿ ಮತ್ತು ಮಾನವ ಸಹಜವಾಗಿಯೇ ಮಳೆಯ ನಿರೀಕ್ಷೆಯಲ್ಲಿ ಇರುವ ಈ ತಿಂಗಳ ೧೦ನೇ ದಿನ (ಮೇ ೨೫ ರಂದು) ಖಂಡಿತವಾಗಿಯೂ ಮಳೆ ಬಂದು ಭೂಮಿ ಮತ್ತು ಮನುಷ್ಯರನ್ನು ತಂಪುಗೊಳಿಸುತ್ತದೆಯೆಂಬ ನಂಬಿಕೆ ತುಳುನಾಡಿನಲ್ಲಿ ಇರುವುದರಿಂದ ಈ ದಿನವನ್ನು "ಪತ್ತನಾಜೆ" ("ಪತ್ತನೇ" "ಆಜೆ" ಅಂದರೆ ಹತ್ತನೇ ಅವಧಿ) ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಅಂದೇ ಮಳೆ ಆರಂಭವಾಗುವುದರಿಂದ ಈ ದಿನವನ್ನು "ವರ್ಸಾದಿ" ಅಥವಾ ವರ್ಷಾವಧಿ (ಎಂದರೆ ಮಳೆಯ ಅವಧಿ) ಎಂದೂ ಕರೆಯುತ್ತಾರೆ.

ಬೇಸಿಗೆಯ ಕೊನೆಯ ದಿನವಾಗಿರುವ ಅಂದು ತುಳುನಾಡಿನಾದ್ಯಂತ ಪ್ರತೀ ಮನೆ, ಗುಡಿ, ಗುಂಡ, ತಾನ, ಆಲಡೆ, ತರವಾಡು, ಗುತ್ತು, ಬಾರಿಕೆ, ದೈವಸ್ಥಾನ, ದೇವಸ್ಥಾನಗಳಲ್ಲಿ ವಿಶೇಷವಾಗಿ ಪೂಜೆ, ಹರಕೆ, ಪರ್ವ, ಅಗೇಲು, ತಂಬಿಲಗಳು ನಡೆಯುತ್ತವೆ. ಈ ದಿನ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೂ ಸಹಾ ತಮ್ಮ ಮನೆಗಳಲ್ಲಿ ದೈವ ಮತ್ತು ಪಿತೃಗಳಿಗೆ ಪರ್ವ, ತಂಬಿಲ, ಅಗೇಲು, ಹರಕೆಗಳನ್ನು ಸಲ್ಲಿಸಿ ಬಳಿಕ ಸಂಬಂಧಪಟ್ಟ ಊರಿನ ಗುತ್ತು, ಬಾರಿಕೆ, ಗುಡಿ, ದೈವಸ್ಥಾನ, ದೇವಸ್ಥಾನಗಳಲ್ಲಿನ ಕೊನೆಯ ಹರಕೆ, ಪರ್ವ, ಪೂಜೆಗಳಲ್ಲಿ ಪಾಲ್ಗೊಳ್ಳುತ್ತಾರೆ. ದೈವದ ಗುಡಿ–ಗುಂಡ –ಮಾಡ–ತಾನಗಳಿಗೆ ಅಂದು ಪೂಜೆ ನೆರವೇರಿಸಿ ಹಾಕಿದ ಬಾಗಿಲು ಮತ್ತೆ ತೆರೆಯುವುದು ಮುಂದಿನ ದೀಪಾವಳಿಯ ಪಾಡ್ಯದ ದಿನದಂದೇ. ಹೀಗೆ ದೈವದ ಗುಡಿ – ಗುಂಡಗಳ ಬಾಗಿಲು ತೆರೆಯುವ ದೀಪಾವಳಿಯ ಪಾಡ್ಯದ ದಿನದಲ್ಲೂ,

ಅದೇ ರೀತಿ ಹತ್ತನಾವಧಿಯಲ್ಲಿ ದೈವದ ಗುಡಿಗೆ ಬಾಗಿಲು ಮುಚ್ಚುವ ವೇಳೆಯಲ್ಲೂ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಅಗತ್ಯವಾಗಿ ಪಾಲ್ಗೊಳ್ಳಲೇಬೇಕೆಂಬ ನಿಯಮ ಪ್ರಾಚೀನ ಕಾಲದಿಂದಲೂ ಬೆಳೆದುಕೊಂಡು ಬಂದಿದೆ. ಇದು ಈ ಜನಾಂಗದ ವಾರ್ಷಿಕಾವರ್ತನದ ಕೊನೆಯ ಹಂತವೂ ಆಗಿರುತ್ತದೆ.



## ಅಧ್ಯಾಯ – ೫

**೫.** ತುಳುನಾಡಿನಲ್ಲಿ ದೈವಾರಾಧನೆ ಮತ್ತು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ

**೫.೧. ಭೂತ ಅಥವಾ** ದೈವ ಕಟ್ಟುವ ಹಂತದಲ್ಲಿ ಅನುಸರಿಸುವ ಕ್ರಮಗಳು

**೫.೧.೧.** ದೈವ ಸಿದ್ಧಗೊಳ್ಳುವ ಮೊದಲನೆ ಹಂತ

೧. ಪಡಿಯಕ್ಕಿ ಹಿಡಿಯುವುದು

೨. ಎಣ್ಣೆ ವೀಳ್ಯ ಹಿಡಿಯುವುದು

೩. ಸ್ಥಾನಕ್ಕೆ ಹೋಗುವುದು.

೪. ಗಣಪತಿ ಸ್ತುತಿ ಮಾಡಿ ಚೆಂಡು ಹಾಕುವುದು.

೫. ಮುಖ ವರ್ಣಿಕೆಗೆ ತೊಡಗುವುದು

೬. ಶೃಂಗಾರಗೊಳ್ಳುವುದು (ಐತೊ ಅಥವಾ ದುತ್ತೈತೊ ಆಗುವುದು)

೭. ಕುಕ್ಕೆಲ್ ಕಳೆಯುವುದು

**೫.೧.೩** ದೈವವಾಗಿ ಕೈಗೊಳ್ಳುವ ಎರಡನೇ ಹಂತ

೧. ದೈವದ ಕೊಡಿಯಡಿ ಅಥವಾ ಕೊಡಿನಾಡ್ (ದೈವಚಾವಡಿ ಪ್ರವೇಶ)

೨. ಕೈಬಾಯಿ ಶುದ್ಧಾಚಾರಗೊಳ್ಳುವುದು

೩. ಗಗ್ಗರದೆಚ್ಚಿ (ಕಾಲ್ಕಡಗ ತೊಡುವುದು)

೪. ಅಣಿ ಅಥವಾ ಪ್ರಭಾವಳಿ ಕಟ್ಟುವುದು

೫. ಮುಖವಾಡ ಧರಿಸುವುದು (ಮುಗ ದೀಪುನು)

೬. ಅಕ್ಕಿ ಸಂಪ್ರೋಕ್ಷಣೆ (ಹೂ ಅಕ್ಕಿಯ ಮೂಲಕ ಭಕ್ತರ ಅಹವಾಲು ಸ್ವೀಕಾರ)

೭. ದೀವಟಿಗೆ ಹಿಡಿಯುವುದು

೮. ಅವತಾರ ಕೈಗೊಳ್ಳುವುದು (ಅಬತಾರದಿಚ್ಚಿ)

**೫.೧.೪** ಅವತಾರದಲ್ಲಿನ ವಿಧಗಳು

* ಮೂರು ಸಲ ಅಟ್ಟಹಾಸ (ಮೂಜಿ ಅಟ್ಟಾಸೊ)
* ಮೂರು ಸಲ ಆರ್ಭಟೆ (ಮೂಜಿ ಆರ್ಭಟೆ)
* ಮೂರು ಸುತ್ತು ಬಲಿ (ಮೂರು ಸಲ ಪ್ರದಕ್ಷಿಣೆ ಬಲಿ)

**೫.೧.೫** ಸುತ್ತು ಬಲಿ (ಪ್ರದಕ್ಷಿಣೆಯಲ್ಲಿನ ಉಪ ಬಲಿಗಳು)

* ದೊಂಪದ ಬಲಿ
* ತುಡಾರ್ ಬಲಿ
* ಬಂಡಿ ಬಲಿ
* ಬದ್ದನಿಗೆ ಬಲಿ
* ಪಾರ್ ಬಲಿ
* ಕಂಚಿಲ್ ಬಲಿ
* ಬೊಲ್ಗುಡೆ ಬಲಿ
* ಬದಿಕರ ಬಲಿ

೯. ಗುತ್ತು ಬಾರಿಕೆ ಲೆಪ್ಪುನು (ಊರು, ಮನೆತನಗಳನ್ನು ಗುರುತಿಸುವುದು)

೧೦. ತೆಂಬರೆ ಸಂಧಿ ನಲಿಕೆ (ಚರ್ಮವಾದ್ಯದೊಂದಿಗೆ ಸಂಧಿ ಹಾಡು)

೧೧. ವಾದ್ಯ ನಲಿಕೆ (ಸಂಗೀತ ಹಿಮ್ಮೇಳದೊಂದಿಗೆ ಕುಣಿತ)

೧೨. ಗಡಿಗೆ ಹೋಗುವುದು.

೧೩. ಇಂಡಿ ರಾಪವುನೆ (ಕೇಪುಳ ಹೂ, ಅಶ್ವತ್ಥ ಎಲೆಗಳ ಮಿಶ್ರಣವನ್ನು ಹಾರಿಸುವುದು)

೧೪. ಬಾರಣೆ ದೆತೊನುನೆ (ಆಹಾರ ಸೇವನೆ)

೧೫. ಬೂಳ್ಯ ಕೊರ್ಪುನೆ ಅಥವಾ ಕಟ್ಟುತ್ತರೊದ ಮದಿಪು (ಅಭಯ ನೀಡುವುದು)

೧೬. ಬುಡು ಬೂಳ್ಯ ಪತ್ತುನೆ (ಮುಕ್ತಾಯದ ವೀಳ್ಯ ಹಿಡಿಯುವುದು)

**೫.೨.** ದೈವಾರಾಧನೆಯಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಬಳಸುವ ಪರಿಕರಗಳು

**೫.೨.೧.** ಪ್ರಧಾನ ಪರಿಕರಗಳು

**೫.೨.೨.** ಅಧೀನ ಪರಿಕರಗಳು ಅಥವಾ ಅಲಂಕಾರಿಕ ಪರಿಕರಗಳು

೫.೨.೩. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ದೈವಾರಾಧನೆಯಲ್ಲಿ ತೆಂಬರೆಯ (ಚರ್ಮವಾದ್ಯ) ಮಹತ್ವ

೫.೨.೪. ತೆಂಬರೆಯ ರಚನೆ ಮತ್ತು ತೆಂಬರೆ ಬಡಿಯುವ ವಿಧಾನ

೫.೨.೫. ಗಗ್ಗರ (ಕಾಲ್ಕಡಗ)

೫.೨.೬. ಹಾಳೆಯ ಅಣಿ (ಪ್ರಭಾವಳಿ)

೫.೨.೭. ಬಲಿ ಮುದ್ರೆ

೫.೩. ಅಧೀನ ಪರಿಕರಗಳು ಅಥವಾ ಅಲಂಕಾರಿಕ ಪರಿಕರಗಳು

೫.೩.೧. ಕದ್‌ರ್ ಮುಡಿ

೫.೩.೨. ಅರ್ದಲ ಮತ್ತು ಮುಖ ಮುದ್ರಿಕೆ

೫.೩.೩. ಕೇಪುಲ ಹೂವಿನ ಪುಂಡಯಿ (ಕೇಪುಳ ಹೂವಿನ ಗುಚ್ಛ)

೫.೪. ದೈವಾರಾಧನೆಯಲ್ಲಿ ಸಂಧಿಯ ಮಹತ್ವ

೫.೪.೧. ಸಂಧಿಯ ಲಕ್ಷಣಗಳು

೫.೪.೨. ಸಂಧಿಯ ಲಯ, ಗೇಯ, ಧಾಟಿ ಮತ್ತು ಮಟ್ಟುಗಳು

೫.೪.೩. ಸಂಧಿಯ ವಿಧಗಳು

## ೫. ತುಳುನಾಡಿನಲ್ಲಿ ದೈವಾರಾಧನೆ ಮತ್ತು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ

ಸಂವಿಧಾನ, ಕಾನೂನು, ನ್ಯಾಯಾಲಯ ಇವ್ಯಾವುದೂ ಇಲ್ಲದಿದ್ದ ಪ್ರಾಚೀನ ತುಳುನಾಡಿನಲ್ಲಿ ಸಮಾಜ, ಸಮುದಾಯ, ಜನಜೀವನ, ರಾಜಕೀಯ, ಧಾರ್ಮಿಕ, ಆಡಳಿತ ವ್ಯವಸ್ಥೆಯನ್ನು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ದೈವಾರಾಧನೆಯನ್ನು ಕೈಗೊಳ್ಳುವ ಮೂಲಕ ಪರಿಣಾಮಕಾರಿಯಾಗಿ ನಿರ್ದೇಶಿಸುತ್ತಿತ್ತು. ಅದೇ ರೀತಿ ರಾಜಪ್ರಭುತ್ವದ ಅಧಿಕಾರ, ಸಂಪತ್ತು, ಅಂತಸ್ತು, ಹಂಚಿಕೆಗಳಲ್ಲೂ ಈ ಸಮುದಾಯ ನಿರ್ಣಾಯಕ ಪಾತ್ರವಹಿಸಿತ್ತು. ಹೀಗಾಗಿ ಕದಂಬ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರದ ಮುಂತಾದ ಪ್ರಭಾವೀರಾಜ–ಮಹಾರಾಜರ ಕಾಲದಲ್ಲೂ ದೈವಾರಾಧನೆಗೆ ಬಹಳಷ್ಟು ಮಾನ್ಯತೆ – ಮಹತ್ವವನ್ನು ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ತಂದು ಕೊಟ್ಟಿರುವುದು ಅವರ ಕಲಾತ್ಮಕತೆ, ಲೋಕದೃಷ್ಟಿ, ಸೃಜನಶೀಲತೆ, ಸಾಂಸ್ಕೃತಿಕ ಪರಿಕಲ್ಪನೆ, ಚಾರಿತ್ರಿಕ ಪ್ರಜ್ಞೆಗಳಿಗೆ ಸಾಕ್ಷಿಯಾಗಿದೆ.

ಕಣ್ಣಿಗೆ ಕಾಣದ ದೈವಿಕಶಕ್ತಿ, ಲೌಕಿಕ ಜಗತ್ತಿನಲ್ಲಿ ಕಾಣಿಸಿಕೊಳ್ಳುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ವ್ಯಕ್ತಿಯ ಮೂಲಕ ದೈವ, ಭೂತವಾಗಿ ಅಭಿವ್ಯಕ್ತಿಗೊಳ್ಳುತ್ತದೆ. ಹೀಗಾಗಿ ದೈವ ಮಧ್ಯಸ್ಥಗಾರರಾದ ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಆಯಾ ಭೂತ, ದೈವ, ನೇಮಕ್ಕೆ ತಕ್ಕಂತೆ ವಿಶಿಷ್ಟ ಮುಖವರ್ಣಿಕೆ, ವೇಷಭೂಷಣ, ಅಣಿ, ಅಡ್ಡಾಣ, ಕತ್ತಿ, ಖಡ್ಗ, ತಿರಿ ಸೂಟೆಗಳನ್ನು ಹಿಡಿದು ಹದಿನಾರು ಅವತಾರ ೧೬ ಬಗೆಯ ಸುತ್ತುಬಲಿ, ಅಟ್ಟಹಾಸ, ವಿಶಿಷ್ಟಲಯದ ಸಂಧಿ, ವಿಶಿಷ್ಟ ಛಾಪಿನ ತೆಂಬರೆಯ ಬಡಿತ, ಗಗ್ಗರ, ಗೆಜ್ಜೆಯನಾದ, ವಾದ್ಯ, ತಾಸೆ, ಡೋಲುಗಳ ಹಿಮ್ಮೇಳ ಸಂಗೀತದೊಂದಿಗೆ ಕಲಾತ್ಮಕವಾಗಿ ಕುಣಿದು ಭಕ್ತ ಸಮೂಹಕ್ಕೆ ಅಭಯ, ಸಾಂತ್ವನ, ಎಚ್ಚರಿಕೆಯ ನುಡಿಕೊಡುತ್ತಾ, ಭಕ್ತರ ಪಾಲಿಗೆ ಸಾಕ್ಷತ್ ದೈವವಾಗಿ (ಭೂತವಾಗಿ) ಕಾಣಲ್ಪಡುತ್ತಾರೆ. ಇವರ ಇಂತಹಾ ಕಲಾ ಪ್ರೌಢಿಮೆ, ಜವಾಬ್ದಾರಿ, ಸಾಮಾಜಿಕಹೊಣೆಗಾರಿಕೆಯಿಂದಾಗಿ ತುಳುನಾಡಿನ ದೈವಾರಾಧನೆ ಅಥವಾ ಭೂತಾರಾಧನೆಗೆ ಇಡೀ ಜಗತ್ತಿನಲ್ಲೇ ವಿಶಿಷ್ಟ ಸ್ಥಾನ ದೊರಕುವಂತಾಗಿದೆ.

**೫.೧ ಭೂತ ಅಥವಾ ನೇಮ (ಕೋಲ) ಕಟ್ಟುವ ಹಂತದಲ್ಲಿ ಅನುಸರಿಸುವ ಕ್ರಮಗಳು**

ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಹದಿನಾರನೇ ಸಂಖ್ಯೆಗೆ ಹೆಚ್ಚು ಮಹತ್ವವನ್ನು ಕೊಡುತ್ತಾರೆ. ಅವರು ನಡೆಸುವ ಯಾವುದೇ ಶುಭ ಕಾರ್ಯಗಳಲ್ಲಾಗಲೀ ಅಥವಾ ಇವರು ಅಕ್ಕಿಯ ಮೂಲಕ ಹೇಳುವ ಜ್ಯೋತಿಷ್ಯ, ಮಂತ್ರವಾದ, ಕ್ರಿಯಾ ವಿಧಿಗಳಲ್ಲಾಗಲೀ ಇದೇ ಸಂಖ್ಯೆಯನ್ನು ಶುಭ ಮತ್ತು ಲಾಭದ ಅದೃಷ್ಟ ಸಂಖ್ಯೆಯೆಂದು ಪರಿಗಣಿಸುತ್ತಾರೆ. ಹೀಗಾಗಿ ಶುಭ ಸಂಖ್ಯೆಯಾದ ಈ ಹದಿನಾರನ್ನು ಈ ಸಮುದಾಯ ಭೂತ ಅಥವಾ ದೈವಾರಾಧನೆಯ ವಿವಿಧ ಹಂತದಲ್ಲೂ ಬಳಸಿಕೊಳ್ಳುತ್ತಾರೆ. ಇದನ್ನು ದೈವದ "ಪದಿನಾಜಿ ಕಟ್ಟಳೆ" ಅಥವಾ "ಪದಿನಾಜಿ ಸೇವೆ" ಎಂದು ಮುಂತಾಗಿ ಕರೆಯುತ್ತಾರೆ.

ದೈವರಾಧನೆಯ ಈ ಹದಿನಾರು ವಿಧಿ ವಿಧಾನಗಳು ಎರಡು ವಿಧಗಳಿಂದ ಕೂಡಿರುತ್ತದೆ. ಅದು ನೇಮ ಕೈ ಗೊಳ್ಳುವ (ಕಟ್ಟುವ) ವ್ಯಕ್ತಿ ಸ್ನಾನಕ್ಕೆ ತೆರಳಿ ಎಣ್ಣೆ ಬೂಳ್ಯ ಹಿಡಿದು, ಮುಖವರ್ಣಿಕೆ ಹಾಕಿ ದೈವದ ಕೊಡಿನಾಡ್ ಅಥವಾ ಸಭಾ ಚಪ್ಪರಕ್ಕೆ ಬರುವ ಮೊದಲಿನ ಒಂದು ಹಂತವಾದರೆ, ದೈವದ ಕೊಡಿನಾಡ್ ಅಥವಾ ಕೊಡಿಯಡಿ (ಚಾವಡಿ ಚಪ್ಪರ) ಸಭೆಗೆ ಬಂದು ದೈವವಾಗಿ ಕೈಗೊಳ್ಳುವ ವಿಧಿ – ವಿಧಾನಗಳಿಂದ ಹಿಡಿದು ಮುಕ್ತಾಯದ "ಬುಡು ಬೂಳ್ಯ" ಹಿಡಿಯುವವರೆಗೆ ನಡೆಸುವ ಕ್ರಮಗಳು ಎರಡನೇ ಹಂತದ ಕ್ರಮಾಚರಣೆಗಳಾಗಿರುತ್ತವೆ. ಅವು ಈ ಕೆಳಗಿನಂತಿವೆ.

**೫.೧.೧. ದೈವ ಸಿದ್ಧಗೊಳ್ಳುವ ಮೊದಲ ಹಂತ**

೧. ಪಡಿಯಕ್ಕಿ ಹಿಡಿಯುವುದು.(ಪಡಿಯರಿ ಪತ್ತುನೆ)

೨. ಎಣ್ಣೆ ವೀಳ್ಯ ಹಿಡಿಯುವುದು.

೩. ಸ್ನಾನಕ್ಕೆ ಹೋಗುವುದು(ಸ್ನಾನ ಮಾಡುವುದು)

೪. ಗಣಪತಿ ಸ್ತುತಿ ಮಾಡಿ ಚೆಂಡು ಹಾಕುವುದು – (ಅಕ್ಕಿ, ತೆಂಗಿನಕಾಯಿಯನ್ನು ಬಾಳೆ ಎಲೆಯ ತುದಿಯಲ್ಲಿಟ್ಟು ಹಣತೆಯಲ್ಲಿ ದೀಪ ಹಚ್ಚಿ ತಲೆ ಚೆಂಡು ಹಾಕಿ ಸಿರಿ ಮುಡಿ ಅಥವಾ ತಲೆಪಟ ಕಟ್ಟಿಕೊಳ್ಳಲು ತಲೆ ಕೂದಲನ್ನು ನೆತ್ತಿಯ ಮೇಲೆ ಕಟ್ಟಿಕೊಳ್ಳುವುದು)

೬. ಮುಖ ವರ್ಣಿಕೆಗೆ ತೊಡಗುವುದು.

೭. ಐತೊ ಅಥವಾ ದುತ್ತೈತೊ ಆಗುವುದು– (ಶೃಂಗಾರಗೊಳ್ಳುವುದು)

೮. ಕುಕ್ಕೆಲ್ ಕಳೆಯುವುದು– (ದೀಪದ ಬತ್ತಿಯನ್ನು ಉರಿಸಿ ಗಣಪತಿ ಸುತ್ತಿಗೆಗೆ (ಗಣಪತಿ ಸ್ತುತಿ ಎಂದರೆ ಬಾಳೆ ಎಲೆಯಲ್ಲಿರಿಸಿದ ಅಕ್ಕಿ ತೆಂಗಿನ ಕಾಯಿಗೆ) ಗೆ ನೀವಳಿಸಿ ಅದರಿಂದ ಸ್ವಲ್ಪ ಅಕ್ಕಿ ತೆಗೆದು ನಾಲ್ಕು ದಿಕ್ಕಿಗೆ ಸಂಪ್ರೋಕ್ಷಿಸಿ ಬಳಿಕ ಉರಿವ ಬತ್ತಿಯನ್ನು ಸಹಾ ನಾಲ್ಕು ದಿಕ್ಕಿಗೆ ಆರತಿ ಮಾಡಿ ನಂತರ ಹಾಳೆಯಲ್ಲಿಯಲ್ಲಿರುವ ಅರಶಿನ ಮತ್ತು ಸುಣ್ಣ ಮಿಶ್ರಿತ ಕುರ್ದಿ ನಿರಿಗೆ ಮುಳುಗಿಸಿ ಬತ್ತಿ ನಂದಿಸಿ ಅನಿಷ್ಟ ಕಳೆಯುವ ಶಾಸ್ತ್ರ)

**೫.೧.೩. ದೈವವಾಗಿ ಕೈಗೊಳ್ಳುವ ಎರಡನೇ ಹಂತ**

ದೈವ ಕೊಡಿಯಡಿ(ದೈವದ ಮೊಗ, ಮೂರ್ತಿ, ಭಂಡಾರ ಇಡುವ ಸಣ್ಣ ಚಪ್ಪರದ ಚಾವಡಿ) ಅಥವಾ ಸಭಾ ಮಧ್ಯಕ್ಕೆ ಬಂದು ದೈವವಾಗಿ ಕೈಗೊಳ್ಳುವ ಎರಡನೇ ಹಂತದ ವಿಧಿ ವಿಧಾನ)

೧. ದೈವದ ಕೊಡಿಯಡಿ ಅಥವಾ ಕೊಡಿನಾಡ್ ಪ್ರವೇಶ

೨. ಕೈಬಾಯಿ ಶುದ್ಧಾಚಾರಗೊಳ್ಳುವುದು

೩. ಗಗ್ಗರದೆಚ್ಚಿ(ಗಗ್ಗರ ತೊಡುವ ಕ್ರಮ)

೪. ಅಣಿ ಅಥವಾ ಮುಡಿ ಏರುವುದು(ಪ್ರಭಾವಳಿ ಕಟ್ಟುವುದು)

೫. ಮೊಗ ಆಪುನು ಅಥವಾ ಮುಗ ದೀಪುನು(ಮುಖವಾಡ ಧರಿಸುವುದು)

೬. ಪೂ–ಅರಿ ಸಂದ್ಯೆತೊ(ಗ್ರಾಮಸ್ಥರು ಹಾಕುವ ಹೂ ಅಕ್ಕಿಯ ಮೂಲಕ ಅಹವಾಲು ಸ್ವೀಕಾರ)

೭. ದೀಟಿಗೆ ಪತ್ತುನೆ ಅಥವಾ ಅಗ್ಗಿ ಪತ್ತುನೆ(ದೀವಟಿಗೆ ಹಿಡಿಯುವುದು)

೮. ಅಬತಾರದೆಚ್ಚಿ (ಅವತಾರ)–ಕೈ ಗೊಳ್ಳುವುದು.

**೫.೩.೪ ಅವತಾರದಲ್ಲಿನ ವಿಧಗಳು :–**

* ಮೂಜಿ ಅಟ್ಟಾಸೊ–(ಮೂರು ಸಲ ಅಟ್ಟಹಾಸ)
* ಮೂಜಿ ಅರ್ಭಟೆ–(ಮೂರು ಸಲ ಅರ್ಭಟಿಸುವುದು)
* ಮೂಜಿ ಸುತ್ತು ಬಲಿ(ಮೂರು ಸುತ್ತು ಪ್ರದಕ್ಷಿಣೆಯ ಬಲಿಗಳು)

**೫.೧.೫ ಸುತ್ತು ಬಲಿ ಪ್ರದಕ್ಷಿಣೆಯಲ್ಲಿನ ಉಪಬಲಿ (ಪ್ರದಕ್ಷಿಣೆಗಳು) :**

* ದೊಂಪದ ಬಲಿ
* ತುಡಾರ್ ಬಲಿ
* ಬಂಡಿ ಬಲಿ
* ಬಧ್ಧನಿಗೆ ಬಲಿ
* ಪಾರ್ ಬಲಿ
* ಕಂಚಿಲ್ ಬಲಿ
* ಬೊಲ್ಗುಡೆ ಬಲಿ(ಬೊಲ್ಪುದ ಬಲಿ)
* ಬದಿಕರ ಬಲಿ

೯. ಗುತ್ತು– ಬಾರಿಕೆ ಲೆಪ್ಪುನೆ ಅಥವಾ ಪುರಪ್ಪು ಲೆಪುನೆ(ಊರ ಮನೆತನಗಳಿಗೆ ಮಾನ್ಯತೆ ಕೊಡುವುದು)

೧೦. ತೆಂಬರೆ– ಸಂಧಿದ ನಲಿಕೆ (ತೆಂಬರೆ, ಸಂಧಿಯೊಂದಿಗೆ ಕುಣಿತ)

೧೧. ವಾದ್ಯ ನಲಿಕೆ (ಸಂಗೀತ, ಹಿಮ್ಮೇಳನದೊಂದಿಗಿನ ಕುಣಿತ )

೧೨. ಗಡಿಕ್ಕ್ ಪೋಪುನೆ (ಗಡಿಯವರೆಗೆ ಹೋಗುವುದು)

೧೩. ಇಂಡಿರಾಪವುನು(ಹೂ ಹಾಗೂ ಕೇಪುಳು, ಅಶ್ವಥ ಎಲೆಗಳ ಮಿಶ್ರಣವನ್ನು ಹಾರಿಸುವುದು)

೧೪. ಬಾರಣೆ ದೆತೊನುನೆ(ಆಹರ ಸೇವನೆ)

೧೫. ಬೂಳ್ಯೋ ಕೊರ್ಪುನೆ ಅಥವಾ ಕಟ್ಟುತ್ತರೊದಮದಿಮ ಅಥವಾ ಮಾಯೊದ ಮದಿಮ (ಅಭಯ ಪ್ರಧಾನ)

೧೬. ಬುಡು ಬೂಳ್ಯ ಪತ್ತುನೆ ಅಥವಾ ಬಿರಿಪುನೆ(ಮುಕ್ತಾಯದ ವೀಳ್ಯ ಹಿಡಿಯುವುದು)

**೫.೨. ದೈವಾರಾಧನೆಯಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಬಳಸುವ ಪರಿಕರಗಳು**

ಅವಾಸ್ತವಿಕತೆಗೆ ದೈವಗಳ ಮೂಲಕ ಮೂರ್ತ ರೂಪಕೊಟ್ಟು ವಾಸ್ತವಿಕ ನೆಲೆಗಟ್ಟಿನಲ್ಲಿ ನಂಬಿಕೆ ಮತ್ತು ಆರಾಧನೆಯ ಸ್ವರೂಪ ನೀಡಲು ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗ ಸಾಕಷ್ಟು ಪ್ರಜ್ಞಾವಂತಿಕೆಯನ್ನು ಮೆರೆದಿದ್ದಾರೆ. ಅಂದರೆ ಕಾಣದ ಶಕ್ತಿಗೆ ಕಾಣಿಸಿಕೊಳ್ಳುವ ವ್ಯಕ್ತಿ ಮಧ್ಯಸ್ಥಗಾರನಾಗಿ ನಿಂತು ಭಕ್ತರ ಭಯ ನಿವಾರಿಸಿ ಅಭಯ ನೀಡುವ ಜವಾಬ್ದಾರಿ ಹೊತ್ತ ನಲ್ಕೆ

ಅಜಿಲ ಅಥವಾ ಪಾಣಾರ ಸಮುದಾಯ ಇದರ ಸಾಧ್ಯಾಸಾಧ್ಯತೆಗಳಿಗಾಗಿ ವಿಶಿಷ್ಟವಾದ ದೈವಗಳನ್ನು ಸೃಷ್ಟಿಸಿದೆ. ಹಾಗೂ ಅವುಗಳ ವೈಶಿಷ್ಟ, ಪ್ರಭಾವಕ್ಕೆ ಅನುಗುಣವಾಗಿ ಮುಖವರ್ಣಿಕೆ ಅಲಂಕಾರ ವೇಷಭೂಷಣ ಸಂಧಿ, ಕುಣಿತ, ಆವೇಶ, ಲಯಬದ್ಧ ಮಾತಿನ ಅಭಯ, ಬೆಂಕಿಯೊಡನೆ ಸರಸ, ಮುಂತಾದ ಭ್ರಾಮಕ ಸನ್ನಿವೇಶಗಳನ್ನು ಸೃಷ್ಟಿಸಿ ನಿರ್ದಿಷ್ಟ ಕಾಲ, ಸಂದರ್ಭ, ವಾತಾವರಣದಲ್ಲಿ ದೈವಿಕ ಶಕ್ತಿಯಾಗಿ ಅವುಗಳನ್ನು ಪ್ರದರ್ಶಿತಗೊಳಿಸುತ್ತದೆ. ಇದು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ದೈವರಾಧನೆಗೆ ಕಲಾತ್ಮಕ ಮೆರುಗನ್ನು ನೀಡಿದರೆ, ಇವರು ದೈವಾರಾಧನೆಯಲ್ಲಿ ಬಳಸುವ ಕೆಲವೊಂದು ಪರಿಕರಗಳೂ ಸಹಾ ಬಹಳಷ್ಟು ಪ್ರಾಮುಖ್ಯತೆಯನ್ನು ಪಡೆದುಕೊಂಡು ಸಾಂಸ್ಕೃತಿಕ ಸ್ವರೂಪವನ್ನು ಪ್ರದರ್ಶಿಸುತ್ತದೆ.

ದೈವಾರಾಧನೆಯಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಬಳಸುವ ಪರಿಕರಗಳು ದೈವಾರಾಧನೆಯಲ್ಲಿ ತೊಡಗಿಕೊಳ್ಳುವ ಇತರ ಜನಾಂಗದವರು ಬಳಸುವ ಪರಕರಗಳಿಗಿಂತ ಮಹತ್ವದ ಪಾತ್ರವನ್ನು ವಹಿಸಿಕೊಳ್ಳುತ್ತದೆ. ಏಕೆಂದರೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಬಳಸುವ ಕೆಲವೊಂದು ಪರಿಕರಗಳನ್ನು ದೈವಾರಾಧನೆಯ ವೇಳೆ ಕಡ್ಡಾಯವಾಗಿ ಉಪಯೋಗಿಸಲೇಬೇಕೆಂಬ ಕಟ್ಟು ಕಟ್ಟಳೆಗಳನ್ನು ಸ್ವತಃ ತಮಗೆ ತಾವೇ ರೂಡಿಸಿಕೊಂಡಿದ್ದಾರೆ. ಹೀಗಾಗಿ ಈ ಪರಿಕರಗಳ ಪೈಕಿ ಯಾವುದಾದರೂ ಒಂದರ ಲಭ್ಯತೆ ಇಲ್ಲದಿದ್ದರೂ ಸಹಾ ದೈವಾರಾಧನೆಯಲ್ಲಿ ತೊಡಗಿಕೊಳ್ಳುವುದು ನಿಷಿದ್ಧವೆಂಬ ವಿಧಿ ನಿಷೇಧಗಳ ಕಟ್ಟಲೆಗಳು ಇರುವುದೇ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ದೈವಾರಾಧನೆಯಲ್ಲಿ ಬಳಸುವ ಪರಿಕರಗಳ ವೈಶಿಷ್ಟ್ಯತೆ ಮತ್ತು ಮಹತ್ವವನ್ನು ತಿಳಿಸುತ್ತದೆ. ಹೀಗಾಗಿ ಈ ಸಮುದಾಯ ದೈವಾರಾಧನೆಯಲ್ಲಿ ಬಳಸಲಾಗುವ ಪರಿಕರಗಳನ್ನು ಪ್ರಧಾನ ಪರಿಕರಗಳು ಮತ್ತು ಅಧೀನ ಹಾಗೂ ಅಲಂಕಾರಿಕ ಪರಿಕರಗಳೆಂದು ಎರಡು ವಿಭಾಗಗಳಾನ್ನಾಗಿ ವಿಂಗಡಿಸಬಹುದು.

**೫.೨.೧. ಪ್ರಧಾನ ಪರಿಕರಗಳು**

೧. ತೆಂಬರೆ
೨. ಗಗ್ಗರ
೩. ಅಣಿ (ಪ್ರಭಾವಳಿ)
೪. ಬಲಿ ಮುದ್ರೆ

**೫.೨.೨. ಅಧೀನ ಪರಿಕರಗಳು ಅಥವಾ ಅಲಂಕಾರಿಕ ಪರಿಕರಗಳು**

೧. ಅರ್ದಲ ಅಥವಾ ಮುಖ ಮುದ್ರಿಕೆ
೨. ತಲೆಪಟ (ಕಿರೀಟ)ಅಥವಾ ತಲೆಮ್ಮಣಿ
೨. ಕದ್‌ರ್‌ಮುಡಿ
೩. ಕೇಪುಳ ಹೂವಿನ ಪುಂಡಯಿ
೪. ತಿರಿಲಂಗ ಅಥವಾ ಸಿರಿಲಂಗ
೫. ಎದೆಪಟ್ಟಿ
೬. ಕೆಬಿಯಣಿ (ಕಿವಿಯಣಿ)
೭. ಕೈದಂತೆ
೮. ಕೈ ಪುಂಡಯಿ
೯. ಬಲಿಮುದ್ರೆ
೧೦. ಮಣಿ – ಕಡ್ತಲೆ,
೧೧. ಮರದ ಮುಗ (ಮರದ ಮುಖವಾಡ)
೧೨. ಅಡ್ಡಣೊ (ಅಡ್ಡಾಣ)

೧೩. ತಡ್ಪೆದ ಬಾರಣೆ (ಗೆರೆಸೆಯಲ್ಲಿ ಬಾರಣೆ)

**೩.೨.೩. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ದೈವಾರಾಧನೆಯಲ್ಲಿ ತೆಂಬರೆಯ ಮಹತ್ವ**



ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಕೈಗೊಳ್ಳುವ ದೈವಾರಾಧನೆಯಲ್ಲಿ ತೆಂಬರೆ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತದೆ. ತೆಂಬರೆ ಬಡಿಯದೆ ಈ ಸಮುದಾಯ ಈ ದೈವರಾಧನೆಯಲ್ಲಿ ತೊಡಗಿಕೊಳ್ಳಬಾರದೆಂಬ ವಿಧಿ–ನಿಷೇಧವಿರುವುದರಿಂದ ತೆಂಬರೆ ಕೇವಲ ದೈವಾರಾಧನೆಯಲ್ಲಿ ಮಾತ್ರವಲ್ಲ ಈ ಸಮುದಾಯದ ಎಲ್ಲ ಶುಭ ಕಾರ್ಯಗಳಲ್ಲೂ ಶುಭ ಶಕುನದ ಸಂಕೇತವಾಗಿ, ಕುಲಲಾಂಛನವಾಗಿ ಮಹತ್ತರ ಸ್ಥಾನವನ್ನು ಪಡೆದುಕೊಂಡಿದೆ. ಪ್ರಾಚೀನ ಕಾಲದಲ್ಲಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಮದುವೆಯ ವೇಳೆ ವಧು ಮತ್ತು ವರರನ್ನು ಇದೇ ತೆಂಬರೆಯ ಮೇಲೆ ಕುಳ್ಳಿರಿಸಿ, ತೆಂಬರೆ ಬಡಿಯುತ್ತಾ ಧಾರೆ ಎರೆಯುವ ಸಂಪ್ರದಾಯವಿತ್ತು. ಇಂತಹಾ ತೆಂಬರೆಗೆ ಈ ಸಮುದಾಯ ಈಗಲೂ ಪವಿತ್ರ ಸ್ಥಾನವನ್ನು ನೀಡುತ್ತಿದೆ. ದೈವಾರಾಧನೆಯಲ್ಲಿ ತೊಡಗಿಕೊಳ್ಳುವ ಇತರ ಸಮುದಾಯಗಳು ದೈವಾರಾಧನೆಯ ವೇಳೆ ತೆಂಬರೆಯ ಬದಲು ಡೋಲನ್ನು ಬಡಿಯಬಹುದಾದರೂ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಮಾತ್ರ ತೆಂಬರೆಗೆ ಪವಿತ್ರ ಸ್ಥಾನವನ್ನು ನೀಡುವುದರಿಂದ ತೆಂಬರೆ ಬಡಿದೇ ದೈವದ ಕೋಲ, ನೇಮಗಳಲ್ಲಿ ತೊಡಗಬೇಕೆಂಬ ನಿಯಮವಿದೆ. ಹೀಗಾಗಿ ತಾವು ನಡೆಸುವ ಕಾಲಬದ್ಧ, ಋತುಮಾನೀಯ, ಆಚರಣಾಬದ್ಧ ಮತ್ತು ಆರಾಧನಾತ್ಮಕ ಮನೆಮನೆಗಳ ಕುಣಿತದ ವೇಳೆಯೂ ಈ ತೆಂಬರೆಯನ್ನು ಬಡಿಯುವ ಹಕ್ಕನ್ನು ಈ ಜನಾಂಗ ಮಾತ್ರ ಪಡೆದುಕೊಂಡಿದ್ದಾರೆ.

ಶ್ರೀಲಂಕಾದಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ತುಳುನಾಡಿನಂತೆ ದೈವಾರಾಧನೆಯಲ್ಲಿ ತೊಡಗಿಕೊಂಡಿದ್ದು ಶ್ರೀಲಂಕಾದಲ್ಲಿ ಈ ಸಮುದಾಯದವರನ್ನು ಸಿಂಹಳೀ ಭಾಷೆಯಲ್ಲಿ ಯಕ್ಕ ಅಮರ ಅಥವಾ ಯಕ್ಕದೆಸಾ ಎಂದು ಕರೆಯುತ್ತಾರೆ. ತುಳುನಾಡಿನಂತೆ ಅಲ್ಲಿಯೂ ಭೂತದ ಕೋಲ ಮತ್ತು ಯಕ್ಷ ಕೋಲಗಳು ನಡೆಯುತ್ತಿದ್ದು ಯಕ್ಷಕೋಲಗಳಿಗೆ "ಯಕುಮ" ಅಥವಾ ಯಕ್ಕುಂಟುನಟನವ (ಯಕ್ಷ ನಾಟ್ಯ) ಎಂದು ಕರೆಯುತ್ತಾರೆ. ಯಕ್ಷಕೋಲದ ವೇಳೆ ಬಳಸುವ ವಾದನಕ್ಕೆ ಶ್ರೀಲಂಕಾದಲ್ಲಿ "ಯಕ್ಕಬೆರೆ" ಎಂದು ಕರೆಯುತ್ತಾರೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಪ್ರಾಚೀನ ಕಾಲದಲ್ಲಿ ಶ್ರೀಲಂಕಾದಿಂದಲೇ ತಮಿಳುನಾಡಿನ ಮೂಲಕ ತುಳುನಾಡಿಗೆ ಬಂದ ಕಾರಣ ತಮ್ಮ ಮೂಲ ನೆಲೆ

ಶ್ರೀಲಂಕಾದಲ್ಲಿ ಕರೆಯಲಾಗುತ್ತಿದ್ದ "ಯಕ್ಕಬೆರೆ" ಎಂಬ ವಾದನಕ್ಕೆ ತುಳುನಾಡಿನಲ್ಲಿ "ತೆಂಬರೆ" ಎಂದು ಕರೆದರು. ತುಳುನಾಡಿನಲ್ಲಿ ತೆಂಬರೆಯೆಂದು ಕರೆಯಲಾಗುವ ವಾದನಕ್ಕೆ ತೆಲುಗಿನಲ್ಲಿ ಪೆಂಬ ಎಂದೂ, ತಮಿಳಿನಲ್ಲಿ ಪರೈ ಅಥವಾ ಪಂಬೈ ಎಂದೂ, ಕೇರಳದಲ್ಲಿ ಡೋಲು ಅಥವಾ ಕರಂಡೆ ಎಂದೂ, ತುಳುನಾಡಿನ ಉತ್ತರ ಭಾಗದಲ್ಲಿ (ಕುಂದಾಪುರ ಭಾಗದಲ್ಲಿ ) ಡಕ್ಕೆ ಬಲಿ ಮತ್ತು ನಾಗನ ಕೋಲಕ್ಕೆ ಬಳಸುವ ವಾದನಕ್ಕೆ ಉಡುಡ್ಕು ಅಥವಾ ಡಕ್ಕೆ ಎಂದೂ ಅದೇ ರೀತಿ ಪಾಣಾರಾಟಕ್ಕೆ ಬಳಸುವ ವಾದನಕ್ಕೆ ಕರಂಡೆ ಅಥವಾ ತೆಂಬರೆಯೆಂದೂ ಕರೆಯುತ್ತಾರೆ.

**೩.೨.೪. ತೆಂಬರೆಯ ರಚನೆ ಮತ್ತು ತೆಂಬರೆ ಬಡಿಯುವ ವಿಧಾನ**



ಒಂದು ಅಥವಾ ಒಂದೂವರೆ ಪೀಟು ಉದ್ದ ಮತ್ತು ಸುಮಾರು ಹದಿನೈದು ಸೆಂಟಿ ಮೀಟರ್‌ನಷ್ಟು ಅಗಲ ವ್ಯಾಸದ ಟೊಳ್ಳಾದ ಹಲಸು ಅಥವಾ ಹೊನ್ನೆ ಮರದ ಕಲಸಿಗೆ ಎರಡೂ ಕಡೆ ಕಾಡುಕುರಿ ಅಥವಾ ಆಡಿನ ಚರ್ಮವನ್ನು ವೃತ್ತಾಕಾರವಾಗಿ ಹೊದಿಸಿ ದಡ್ಡಲು ಮರದ ಅಥವಾ "ಮುಡ್ತರ್" ಎಂಬ ಬಿಳಲಿನ ನಾರಿನಿಂದ ತಯಾರಿಸಿದ ಗಟ್ಟಿಯಾದ ಹಗ್ಗದಿಂದ ಪೋಣಿಸಿ ತಯಾರಿಸುತ್ತಾರೆ. ಆದರೆ ತೆಂಬರೆಗೆ ದನ, ಹಾಗೂ ಕೋಣ ಇತರ ಪ್ರಾಣಿಗಳ ಚರ್ಮವನ್ನು ಮುಚ್ಚುವುದು ನಿಷಿದ್ಧವಾಗಿದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ತೆಂಬರೆ ಬಡಿಯುತ್ತಾ ಸಂಧಿ ಹೇಳುವುದರಲ್ಲಿ ಎತ್ತಿದ ಕೈ ಅದರಲ್ಲೂ ಈ ಸಮುದಾಯದ ಮಹಿಳೆಯರು ತೆಂಬರೆಯನ್ನು ಹಿಡಿದು ಸಂಧಿ ಹೇಳುತ್ತ ತೆಂಬರೆ ಬಡಿಯುತ್ತಿದ್ದಂತೆ ಅವರ ಮಧುರ ಸ್ವರದ ಜೊತೆ ತೆಂಬರೆ ಬಡಿತದ ವಿಶಿಷ್ಟ ಛಾಪು ಮೇಳೈಸಿ ಅಲ್ಲಿ ಹೊಸದೊಂದು ಲೋಕವೇ ಸೃಷ್ಟಿಯಾದಂತೆ ಗೋಚರವಾಗುತ್ತದೆ.

ಬಲದ ಕೈಯಲ್ಲಿ ತೆಂಬರೆ ಬಡಿಯಲೆಂದು ಮಾಡಿದ ಸಣ್ಣ ಕೋಲಿನಿಂದ ಬಡಿಯುತ್ತಾ ಎಡದ ಕೈಯನ್ನು ಎಡ ಬದಿಯ ತೆಂಬರೆಯ ಮುಚ್ಚಿಗೆಗೆ ಛಾಪು (ಒತ್ತು) ನೀಡುತ್ತಾ ನಿರ್ದಿಷ್ಟ ತಾಳಗತಿಯಲ್ಲಿ ಬಡಿಯಲಾಗುತ್ತದೆ. ಆದರೆ ವಿವಿಧ ದೈವಗಳ ಸಂಧಿಯ ಧಾಟಿ ವಿವಿಧ ರೀತಿಯಯಲ್ಲಿರುವುದರಿಂದ ಆಯಾ ಧಾಟಿಗಳಿಗೆ ಅನುಗುಣವಾಗಿ ಲಯ ಬದ್ಧವಾಗಿ ತೆಂಬರೆಯನ್ನು ಬಡಿಯಬೇಕಾಗುವುದರಿಂದ ತೆಂಬರೆ ಬಡಿಯುವುದು ಅಷ್ಟು ಸುಲಭವಲ್ಲ. ಆದರೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಗೆ ಸಂಗೀತ, ವಾದನ, ಕುಣಿತಗಳು ರಕ್ತಗತವಾಗಿ ವಂಶಪಾರಂಪಾರ್ಯವಾಗಿ ಬಂದಿರುವುದರಿಂದ ತೆಂಬರೆ ಬಡಿಯುವುದಕ್ಕಾಗಲೀ ಅಥವಾ ಸಂಧಿ ಹೇಳುವುದಕ್ಕಾಗಲೀ, ನರ್ತನಾದಿ ಕುಣಿತಗಳಿಗಾಗಲೀ ಯಾವುದಕ್ಕೂ ಇವರು ಪ್ರತ್ಯೇಕವಾಗಿ ತರಬೇತಿ ಪಡೆಯುವುದಿಲ್ಲ. ಇದು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಕಲಾಕೌಶಲ್ಯ, ಜಾಣ್ಮೆ ಸೃಜನಶೀಲತೆಯನ್ನು ಪ್ರತಿಬಿಂಬಿಸುತ್ತದೆ.

### ೫.೨.೫. ಗಗ್ಗರ



ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಕೈಗೊಳ್ಳುವ ದೈವಾರಾಧೆಯಲ್ಲಿ ಬಳಸುವ ಪರಿಕರಗಳಲ್ಲಿ ಗಗ್ಗರವೂ ಅತ್ಯಂತ ಹೆಚ್ಚಿನ ಮಹತ್ವವನ್ನು ಪಡೆದುಕೊಂಡಿದೆ. ಗಗ್ಗರವೆಂಬುದು ಕುಣಿತದ ವೈಭವಿಕರಣ ಮತ್ತು ನಾಟ್ಯದ ಲಯಗತಿಗೆ ಮೆರುಗು ನೀಡಲು ಬಳಸುವ ಕಾಲ್ಗಡವಾಗಿದೆ. ಆದಿ ಮಾನವನ ಕಲ್ಲಿನ ಯುಗದ ವೇಳೆ ಕುಣಿತಕ್ಕೆ ಗೆಜ್ಜೆ ಅಥವಾ ಗಗ್ಗರದ ಬಳಕೆ ಇರಲಿಲ್ಲವಾದರೂ ನಂತರದ ಲೋಹ ಯುಗದ ಹಂತದಲ್ಲಿ ದೈವಾರಾಧನೆಗೆ ಗಗ್ಗರವನ್ನು ಬಳಕೆಗೆ ತರಲಾಗಿರುವ ಸಾಧ್ಯತೆಗಳಿವೆ. ಯಾಕೆಂದರೆ ಜಗತ್ತಿನ ಯಾವುದೇ ಭಾಗದ, ಯಾವುದೇ ಪ್ರಕಾರದ ನಾಟ್ಯ, ಕುಣಿತಗಳಿಗೆ ಬಳಸದ ಈ ಗಗ್ಗರ ದೈವಾರಾಧನೆಯ ಕುಣಿತದಲ್ಲಿ ಮಾತ್ರ ಬಳಸಲಾಗುತ್ತಿರುವುದೇ ಅತ್ಯಂತ ಆಶ್ಚರ್ಯವೆನಿಸುತ್ತದೆ. ಪ್ರಾಚೀನ ಕಾಲದಲ್ಲಿ ದೈವಾರಾಧನೆಯ ಸಂದರ್ಭದಲ್ಲಿ ಈಗಿನ ಹಾಗೆ ವಿವಿಧ ಗಾಳಿ ವಾದ್ಯಗಳಾಗಲೀ, ಅಥವಾ ಚರ್ಮವಾದ್ಯಗಳಾಗಲೀ ಇರುತ್ತಿರಲಿಲ್ಲ. ಹಾಗಾಗಿ ಗೆಜ್ಜೆಗಿಂತಲೂ ಗಂಭೀರ, ಸ್ಪಷ್ಟ ದೊಡ್ಡ ವಿಶಿಷ್ಟ ಸ್ವರವನ್ನು ಹೊರಡಿಸುವ ಈ ಗಗ್ಗರ ಆಗಿನ ಸನ್ನಿವೇಶದಲ್ಲಿ ನಾಟ್ಯ, ಕುಣಿತದ ಗತ್ತುಗಾರಿಕೆಯನ್ನು ಪ್ರದರ್ಶಿಸುತ್ತಿತ್ತು.

ಹೆಚ್ಚಾಗಿ ಗಗ್ಗರವನ್ನು ಹಿತ್ತಾಳೆ ಮತ್ತು ಕಂಚಿನಿಂದಲೇ ತಯಾರಿಸಲಾಗುತ್ತದೆ. ಜಗತ್ತಿನ ಯಾವ ನಾಟ್ಯ, ಕುಣಿತಗಳಲ್ಲೂ ಬಳಕೆಯಲ್ಲಿರದ ಕಾಲಿಗೆ ಕಟ್ಟಿಕೊಳ್ಳುವ ಈ ಗಗ್ಗರದ ವಿಶಿಷ್ಟ ಆಕಾರ ಹಾಗೂ ಕಲ್ಪನೆಯೇ ಬಹಳ ವಿಶೇಷವಾಗಿದೆ. ತೀರಾ ವೃತ್ತಾಕಾರವಲ್ಲದ ಹಾಗೂ ಎರಡು ಕಮಾನುಗಳು ಪರಸ್ಪರ ಜೋಡಿಸ್ಪಟ್ಟ ರೀತಿಯ ರಚನೆಯಿರುವ ಗಗ್ಗರದ ಎರಡೂ ಭಾಗದಲ್ಲೂ ನಡುವೆ ಹೊರ ಮೈ ಒಂದೂವರೆ ಇಂಚಿನಷ್ಟು ಉದ್ಧಕ್ಕೆ ಮತ್ತು ಅರ್ಧ ಸೆಂ. ಮೀ ನಷ್ಟು ಅಗಲ ತೆರೆದುಕೊಂಡಿದ್ದು ಅದರೊಳಗೆ ಕಂಚು ಅಥವಾ ಹಿತ್ತಾಳೆಯ ಗುಂಡುಗಳಿರುತ್ತವೆ. ಮತ್ತು ಗಗ್ಗರದ ಮುಂಭಾಗ ಮತ್ತು ಹಿಂಭಾಗದಲ್ಲಿ ಹಗ್ಗವನ್ನು ಕಟ್ಟುವ ಎರಡು ಕೊಂಡಿಗಳಿರುತ್ತವೆ. ಗಗ್ಗರದ ಇನ್ನೊಂದು ವಿಶಿಷ್ಟವೆಂದರೆ ಯಾವುದೇ ಗಗ್ಗರವು ಎಷ್ಟೇ ದಪ್ಪದ ವ್ಯಕ್ತಿಯ ಕಾಲಿಗೂ ಸಲೀಸಾಗಿ ನುಸುಳುತ್ತದೆ. ಅದೇ ರೀತಿ ಎಷ್ಟೇ ತೆಳ್ಳಗೆ ವ್ಯಕ್ತಿಯ ಕಾಲಿಗೂ ನುಸುಳಿ ಸುಲಭವಾಗಿ ಕೆಳಗೆ ಜಾರದಂತೆ ಕಾಲಲ್ಲೇ ಅಡಕವಾಗುತ್ತದೆ.

ದೈವಕ್ಕೆ ನೇಮ ಕೈಗೊಳ್ಳುವ ವ್ಯಕ್ತಿ ಕಾಲಿಗೆ ಗಗ್ಗರ ಕಟ್ಟಿದ ಬಳಿಕವೇ ದೈವ ಮೈಮೇಲೆ ಆವಾಹನೆಯಾಗುವುದೆಂಬ ನಂಬಿಕೆಯಿರುವುದರಿಂದ ದೈವಾರಾಧನೆಯಲ್ಲಿ ಗಗ್ಗರಕ್ಕೆ ಅತ್ಯಂತ ಪೂಜ್ಯ ಸ್ಥಾನವಿದೆ. ದೈವಕ್ಕೆ ಕೋಲ ಕಟ್ಟುವ ಇತರ ಸಮುದಾಯಗಳಿಗೆ ಗ್ರಾಮ ದೈವದ ಗಗ್ಗರವನ್ನು ತಮ್ಮಲ್ಲೇ ಇಟ್ಟುಕೊಳ್ಳುವ ಹಕ್ಕು ಇರುವುದಿಲ್ಲ. ಆದರೆ ಗ್ರಾಮ ದೈವದ

ನೇಮ ಕಟ್ಟುವ ಜವಾಬ್ದಾರಿ ಹೊತ್ತಿರುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಗೆ ಮಾತ್ರ ಗ್ರಾಮ ದೈವದ ಗಗ್ಗರವನ್ನು ತನ್ನ ಮನೆಯಲ್ಲಿಟ್ಟುಕೊಳ್ಳುವ ಅಧಿಕಾರವಿದೆ. ಹೀಗೆ ಪೂಜ್ಯ ಭಾವನೆಯಿಂದ ಕಾಣಲಾಗುವ ಗಗ್ಗರವನ್ನು ದೈವದ ನೇಮ (ಕೋಲ) ನಡೆಯುವಾಗ ತೆಗೆದುಕೊಳ್ಳವ ಮೊದಲು ಮತ್ತು ಕಾಲಿಗೆ ಕಟ್ಟಿಕೊಳ್ಳುವ ಮೊದಲು ಕೆಲವೊಂದು ಕ್ರಮಗಳನ್ನು ಅನುಸರಿಸಲಾಗುತ್ತದೆ. ಇದನ್ನು "ಗಗ್ಗರದೆಚ್ಚಿ" ಎನ್ನಲಾಗುತ್ತದೆ. ಈ ಕ್ರಮಗಳನ್ನು ಅನುಸರಿಸಿನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಗಗ್ಗರವನ್ನು ದೈವಾರಾಧನೆಯಲ್ಲಿ ಬಳಕೆ ಮಾಡುತ್ತಾರೆ. ಅದೇ ರೀತಿ ಗಗ್ಗರದ ಬಗ್ಗೆ ಕೆಲವೊಂದು ವಿಧಿ ನಿಷೇಧಗಳು ಚಾಲ್ತಿಯಲ್ಲಿದ್ದು ಸೂತಕವಿರುವ ಹೆಂಗಸರು ಗಗ್ಗರವನ್ನು ಮುಟ್ಟುವುದಿಲ್ಲ. ಅದೇ ರೀತಿ ಇತರ ಸಂಧರ್ಭಗಳಲ್ಲಿಯೂ ಯಾರೂ ಕೂಡಾ ಗಗ್ಗರವನ್ನು ಅಪವಿತ್ರಗೊಳಿಸುವಂತಿಲ್ಲ, ಮಾತ್ರವಲ್ಲ ಈ ಗಗ್ಗರವನ್ನು ಸಾವುಕೋಲ, ಕಾಲೆಕೋಲಗಳಂತಹಾ ಸಣ್ಣ ಕೋಲಗಳಲ್ಲಿ ಬಳಕೆ ಮಾಡುವಂತಿಲ್ಲ. ಅಲ್ಲದೆ ಗಗ್ಗರಕ್ಕೆ ನಮಸ್ಕರಿಸಿಯೇ ಗಗ್ಗರವನ್ನು ಕಟ್ಟಿಕೊಳ್ಳಬೇಕೆಂಬ ಕಟ್ಟುಕಟ್ಟಳೆಗಳನ್ನು ಪಾಲಿಸಿಕೊಂಡು ಬಂದಿದ್ದಾರೆ. (ಶ್ರೀಲಂಕಾದಲ್ಲಿ ಗಗ್ಗರಕ್ಕೆ "ಶಿಲಂಬು" ಎಂದು ಕರೆಯುತ್ತಾರೆ. ಅದೇ ರೀತಿ ಕೇರಳದಲ್ಲಿ ಗಗ್ಗರವನ್ನು "ಚಲಂಗು" ಎಂದೂ, ತುಳುನಾಡಿನಲ್ಲಿ "ಗಗ್ಗರ" ಎಂದೂ, ಕುಂದಾಪುರದ ಕಡೆ "ಕಾಲ್ಗಡಗ" ಎಂದೂ ಕರೆಯಲಾಗುತ್ತದೆ.)

**೩.೨.೬ ಹಾಳೆಯ ಅಣಿ (ಪ್ರಭಾವಳಿ)**





ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಕೈಗೊಳ್ಳುವ ದೈವಾರಾಧನೆಯಲ್ಲಿ ಬಳಕೆಯಲ್ಲಿರುವ ಪರಿಕರಗಳ ಪೈಕಿ ಇನ್ನೊಂದು ಅತ್ಯಂತ ಪ್ರಾಮುಖ್ಯತೆ ಪಡೆದಿರುವ ಅಲಂಕಾರಿಕ ವಸ್ತುವೆಂದರೆ ಅಡಿಕೆ ಹಾಳೆಯಿಂದಲೇ ಮಾಡಲ್ಪಡುವ ಅಣಿ ಅಥವಾ ಪ್ರಭಾವಳಿ. ಅಡಿಕೆ ಹಾಳೆಯ ಅಣಿಯನ್ನೇ ತಾವು ಕೈಗೊಳ್ಳುವ ದೈವಾರಾಧನೆಯಲ್ಲಿ ಬಳಸಬೇಕೆಂಬ ಕಟ್ಟುಕಟ್ಟಳೆಗಳನ್ನು ಈ ಸಮುದಾಯದವರು ಅತ್ಯಂತ ಪ್ರಾಚೀನ ಕಾಲದಲ್ಲೇ ರೂಢಿಸಿಕೊಂಡಿದ್ದರಿಂದ ಈ ಸಮುದಾಯ ಇಂದಿಗೂ ಇದೇ ನಿಯಮವನ್ನು ಅನುಸರಿಸಿಕೊಂಡು ಬರುತ್ತಿದ್ದಾರೆ.

ಅಡಿಕೆ ಹಾಳೆಗಳನ್ನು ಒಣಗಿಸಿ ಬಳಿಕ ನೀರು ಚಿಮುಕಿಸಿ ಹದ ಮಾಡಿ ಅರ್ಧ ವೃತ್ತಕಾರವಾಗಿ ಕತ್ತರಿಸಿ ಗಟ್ಟಿಯಾಗಿ ನಿಲ್ಲಲು ಅರ್ಧ ವೃತ್ತಕಾರದಲ್ಲೇ ಹಾಳೆಗಳ ಒಳ ಮತ್ತು ಹೊರಭಾಗಕ್ಕೆ ತೆಳುವಾದ ಬಿದಿರಿನ ಕಡ್ಡಿಗಳನ್ನಿಟ್ಟು ದಡ್ಡಲ್ ಮರದ ಅಥವಾ ಮುಡ್ತರ್ ಬಿಳಲಿನ ನಾರಿನ ಹಗ್ಗದಿಂದ ಹೊಲಿಯುತ್ತಾರೆ. ನಂತರ ಅರ್ಧ ವೃತ್ತಕಾರದ ಮಧ್ಯಭಾಗದಲ್ಲಿ ಬೆನ್ನು ನುಸುಳುವಷ್ಟು ಅಂತರದಲ್ಲಿ ಕತ್ತರಿಸಿ ಬೆನ್ನು ಮತ್ತು ಹೆಗಲಿನ ಭಾಗದಲ್ಲಿ ಅಣಿಯ ಹಿಂಬದಿಯಿಂದ ಅಡ್ಡವಾಗಿ ಎರಡು ಬಿದಿರಿನ ಕೋಲುಗಳನ್ನು ಬೆನ್ನಿನ ನಡುವಿಗೆ ಸಿಗುವಂತೆ ಕೆಳಭಾಗದಿಂದ ಮೇಲ್ಭಾಗದವರೆಗೆ ಅಣಿಯ ಹಿಂಬದಿಯಿಂದ

ಜೋಡಿಸಿ ಹೊಲಿಯಲಾಗುತ್ತದೆ. ನಂತರ ಹೆಗಲಿನ ಎಡ ಮತ್ತು ಬಲ ಭಾಗಗಳಿಗೆ ಆಧಾರವಾಗಿ ನಿಲ್ಲುವ ಬಿದಿರಿನ ಕೋಲುಗಳಿಗೆ ಎರಡೂ ಕಡೆ ದಪ್ಪನೆಯ ಬಟ್ಟೆ ಅಥವಾ ಸೀರೆಯನ್ನು ಹಗ್ಗದಂತೆ ಇಳಿಯ ಬಿಡಲಾಗುತ್ತದೆ. ಬಳಿಕ ವಿವಿಧ ಬಣ್ಣಗಳಿಂದ ಅಣಿಯ ಮುಂಬಾಗದಲ್ಲಿ ಚಿತ್ರ ಬರೆದು ಹಿಂಭಾಗದಲ್ಲಿ ಕೆಂಪು ಬಟ್ಟೆಯಿಂದ ಅಲಂಕರಿಸಲಾಗುತ್ತದೆ. ಮತ್ತು ಅಣಿಯ ಮೇಲ್ಭಾಗದಲ್ಲಿ ಸತ್ತಿಗೆಯನ್ನೂ ಉಳಿದೆಡೆ ಬೇರೆ ಬೇರೆ ಆಕಾರದ ಬಾವುಟಗಳನ್ನು ಸಿಕ್ಕಿಸಲಾಗುತ್ತದೆ. ಅದೇ ರೀತಿ ಸೊಂಟದ ಕೆಳಗೆ ಮುಂಭಾಗದಿಂದ ಕಟ್ಟಿಕೊಳ್ಳುವ ಅಣಿಯನ್ನು ಸಹಾ ತಯಾರಿಸಲಾಗುತ್ತದೆ. ಈ ಸಣ್ಣ ಅಣಿಯನ್ನು "ಜಕ್ಕೆಲಣಿ" ಎಂದು ಕರೆಯುತ್ತಾರೆ. ಇದರ ಗ್ರಾತ್ರ ಬಹಳ ಸಣ್ಣದಾಗಿದ್ದು ಇದನ್ನು ಸಹಾ ಅಡಿಕೆ ಹಾಳೆ ಮತ್ತು ಬಿದಿರಿನ ಕಡ್ಡಿಗಳಿಂದಲೇ ತಯಾರಿಸಲಾಗುತ್ತದೆ. ನಂತರ ಇದಕ್ಕೆ ಬಣ್ಣ ಕೊಟ್ಟು ದೈವ ಕಟ್ಟುವ ವೇಳೆ ಇದರ ಮುಂಭಾಗಕ್ಕೆ ಸೀಳಲ್ಪಟ್ಟ ತೆಂಗಿನ ಎಳೆ ಸಿರಿಯ ಅಲಂಕಾರವನ್ನು ಮಾಡಲಾಗುತ್ತದೆ.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರೇ ಮೊತ್ತ ಮೊದಲ ಬಾರಿಗೆ ದೈವರಾಧನೆಯನ್ನು ಹುಟ್ಟು ಹಾಕಿದವರಾದ್ದರಿಂದ ಮತ್ತು ಆಗ ತುಳುನಾಡಿನಾದ್ಯಂತ ಅಡಿಕೆ ತೋಟಗಳು ವಿಫಲವಾಗಿ ಇದ್ದುದರಿಂದ ಹಾಗೂ ಹಾಳೆಯ ಅಣಿಗಳು ದೀರ್ಘಕಾಲ ಬಾಳಿಕೆ ಬರುವುದರಿಂದ ಈ ಸಮುದಾಯ ದೈವಾರಾಧನೆಯಲ್ಲಿ ಆಗ ಲಭ್ಯವಿದ್ದ ಅಡಿಕೆ ಹಾಳೆಯನ್ನೇ ಅಣಿ ಮಾಡಲು ಉಪಯೋಗಿಸಿಕೊಂಡರು. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಅಡಿಕೆ ಹಾಳೆಯ ಅಣಿ ಮಾಡಲು ಎಷ್ಟು ಪರಿಣತರೋ ಅಷ್ಟೇ ತೆಂಗಿನ ಎಳೆ ಸಿರಿಯ ಗರಿಗಳಿಂದಲೂ ಅಣಿ (ಪ್ರಬಾವಳಿ) ಮಾಡಲು ಪರಿಣತರಾಗಿದ್ದಾರೆ. ಬಹುದೂರದ ಊರಿನಲ್ಲಿ ದೈವಗಳಿಗೆ ನೇಮ(ಕೋಲ)ಗಳು ಇದ್ದ ಸಂಧರ್ಭ ಹಾಳೆಯ ಅಣಿಗಳನ್ನು ತೆಗೆದುಕೊಂಡು ಹೋಗುವುದು ಕಷ್ಟವಾಗುತ್ತಿದ್ದ ಸಂಧರ್ಭ ಇವರು ತೆಂಗಿನ ಎಳೆ ಸಿರಿಯ ಗರಿಯಿಂದಲೂ ಅಷ್ಟೇ ನಾಜೂಕಾಗಿ ಅಣಿಯನ್ನು ತಯಾರಿಸುತ್ತಾರೆ. ಆದರೂ ಇವರ ಮೊದಲ ಪ್ರಾಶಸ್ತ್ಯ ಹಾಳೆಯ ಅಣಿಗೇ ಆಗಿರುತ್ತದೆ. ಹೀಗಾಗಿಯೇ ಇಡೀ ದೈವಾರಾಧನೆಯಲ್ಲಿ ತೊಡಗಿಕೊಳ್ಳುವ ಇತರ ಸಮುದಾಯಗಳಿಂತಲೂ ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಗೆ ಮಾತ್ರವೇ ಸಾವಿರದ ಒಂದು ಹಾಳೆಯ ಬೃಹತ್ ಅಣಿಯನ್ನು ಹೊತ್ತುಕೊಳ್ಳುವ ಅಧಿಕಾರ ಕೊಡಲ್ಪಟ್ಟಿರುವುದಾಗಿದೆ.

**೫.೨.೭. ಬಲಿ ಮುದ್ರೆ**



ತೆಂಗಿನ ಮಡಲಿನ ಎಳೆ ಸಿರಿಯಿಂದ ಮತ್ತು ಬಾಳೆ ದಂಡಿನಿಂದ ಕಲಾತ್ಮಕವಾಗಿ ಬಲಿಯನ್ನು ತಯಾರಿಸಿ ಅದರೊಳಗೆ ಬಾಳೆ ಎಲೆಯಲ್ಲಿ ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ, ದೀಪ ಹಚ್ಚಿ ಗಣಪತಿ ಸುತ್ತಿಗೆ ಇಟ್ಟು ದೈವದ ಕೋಲ (ನೇಮಗಳನ್ನು) ಕೈಗೊಳ್ಳುವ ಅಧಿಕಾರ ಹಾಗೂ ಅದೇ ರೀತಿ ಬಲಿ ತಯಾರಿಸಿ ಅದರೊಳಗೆ ಉಪ್ಪು ಹಾಕದ ಬೆಳ್ತಿಗೆ ಅನ್ನ ಉಪ್ಪು ಹಾಕದ ದೋಸೆ ಹೊದ್ಲುಗಳನ್ನು ಕುಂಕುಮದ ನೀರು ಮತ್ತು ಸುಣ್ಣ ಮಿಶ್ರಿತ ಅರಶಿನದ ನೀರನ್ನು (ಕುರ್ದಿ) ಹಾಕಿ ಬಲಿ ಮುದ್ರೆ ಇಟ್ಟು ದೈವದ ಸೇವೆ ಕೈಗೊಳ್ಳುವ ಅಧಿಕಾರವನ್ನು ಮೊದಲು ಪಡೆದುಕೊಂಡಿರುವುದು ಸಹಾ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೇ ಆಗಿದ್ದಾರೆಂದು ವಕ್ತೃಗಳ ಮಾಹಿತಿಯಾಗಿರುತ್ತದೆ.

**೫.೩. ಅಧೀನ ಪರಿಕರಗಳು ಅಥವಾ ಅಲಂಕಾರಿಕ ಪರಿಕರಗಳು**

**೫.೩.೧. ಕದ್‌ರ್ ಮುಡಿ**



ಕದ್‌ರ್ ಮುಡಿ ಧರಿಸಿದ ದೈವಗಳು

ಕದ್‌ರ್ ಎಂದರೆ ತುಳುವಿನಲ್ಲಿ "ಅಂತರ" ಎಂದರ್ಥ. ಮುಡಿ ಎಂದರೆ ಕಿರೀಟ ಎಂಬರ್ಥ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಕೈಗೊಳ್ಳುವ ಪ್ರಧಾನ ದೈವಗಳ ನೇಮಗಳಲ್ಲಿ ತೆಂಗಿನ ಮಡಲಿನ ಎಳೆ ಸಿರಿ ಮತ್ತು ಬಾಳೆದಿಂಡನ್ನು ಉಪಯೋಗಿಸಿ ತಯಾರಿಸುವ ಕದ್‌ರ್ ಮುಡಿಗೆ ಬಹಳ ಮಹತ್ವವಿದೆ. ತೆಂಗಿನ ಮಡಲಿನ ಎಳೆ ಸಿರಿಯನ್ನು ಕಲಾತ್ಮಕವಾಗಿ ಸಣ್ಣ ಕತ್ತಿಯಿಂದ (ಐತ್ತೊದ ಕತ್ತಿ) ಕತ್ತರಿಸಿ ಬಾಳೆ ದಿಂಡಿನ ಸುತ್ತಲೂ ಅಳವಡಿಸಲಾಗುತ್ತದೆ. ನಂತರ ಇದನ್ನು ಪಾಂದಲ್‌ನಿಂದ ನಾಜೂಕಾಗಿ ಹೊಲಿಯಲಾಗುತ್ತದೆ. ಹೀಗೆ ತಯಾರಿಸಲಾದ "ಕದ್‌ರ್‌ಮುಡಿ" ಬಹಳ ಕಲಾತ್ಮಕ ಕುಸುರಿ ವಿನ್ಯಾಸದ ಕಿರೀಟದಂತೆ ಇರುತ್ತದೆ. ಇದನ್ನು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಕೈಗೊಳ್ಳುವ ರಾಜನ್ ದೈವ, ಬಸ್ತಿ ನಾಯಕ, ಕಲ್ಕುಡ ಮುಂತಾದ ದೊಡ್ಡ ದೈವಗಳಿಗೆ ಮಾತ್ರ ಕಿರೀಟವಾಗಿ ಬಳಸುತ್ತಾರೆ. ಇವರು ಕೈಗೊಳ್ಳುವ ಕಲ್ಕುಡ ದೈವದ ಕದ್‌ರ್‌ಮುಡಿ ಬಹಳ ವಿಶಿಷ್ಟಪೂರ್ಣವಾಗಿರುತ್ತದೆ.

**೫.೩.೨ ಅರ್ದಲ ಮತ್ತು ಮುಖ ವರ್ಣಿಕೆ :**



ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಕೈಗೊಳ್ಳುವ ದೈವಗಳಿಗೆ ತಕ್ಕಂತೆ ಮುಖವರ್ಣಿಕೆ ಮಾಡಿಕೊಳ್ಳುವುದರಲ್ಲೂ ವಿಶಿಷ್ಟತೆಯನ್ನು ಮೆರೆಯುತ್ತಾರೆ. ಪ್ರಾಚೀನ ಕಾಲದಲ್ಲಿ ಕಾಡಿನಲ್ಲಿ ಸಿಗುವ ಅರ್ದಲದ ಮರದ (ಬಣ್ಣದ ಮರ) ತೊಗಟೆ, ಎಲೆ, ಕಾಯಿ, ಹೂಗಳಿಂದ ಮುಖವರ್ಣಿಕೆಗೆ ಬೇಕಾದ ಬಣ್ಣವನ್ನು ಈ ಸಮುದಾಯ ತಾವೇ ತಯಾರಿಸಿಕೊಳ್ಳುತ್ತಿದ್ದರು. ಎಲ್ಲಿಯೂ ದೈವಿಕ ನಂಬಿಕೆ, ಆರಾಧನಾ ಕಟ್ಟುಕಟ್ಟಳೆಗಳಿಗೆ ತೊಡಕಾಗದ ರೀತಿಯಲ್ಲಿ, ಎಲ್ಲಿಯೂ ನಾಟಕೀಯತೆ ಮೆರೆಯದೆ ಮುಖವರ್ಣಿಕೆ ಮಾಡಿಕೊಳ್ಳುವುದರಲ್ಲಿ ಇವರು ನಿಸ್ಸೀಮರು. ದೈವಾರಾಧನೆಯಲ್ಲಿ ತೊಡಗಿರುವ ಇತರ ಸಮುದಾಯಗಳಿಗೆ ನಿರ್ದಿಷ್ಟ ದೈವಗಳನ್ನು ಮಾತ್ರ ಕಟ್ಟಬೇಕೆಂಬ ನಿರ್ಬಂಧವಿದೆ. ಆದರೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಗೆ ಈ ರೀತಿಯ ಯವುದೇ ನಿರ್ಬಂಧವಿರುವುದಿಲ್ಲ. ಹಾಗಾಗಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಯಾವುದೇ ದೈವಗಳನ್ನು ಕೈಗೊಳ್ಳಲು ಅರ್ಹತೆ ಪಡೆದಿರುತ್ತಾರೆ. ಆದುದರಿಂದಲೇ ಅತ್ಯಂತ ಪ್ರಾಚೀನ ಕಾಲದಲ್ಲೇ ಮುಖಕ್ಕೆ ಸಾವಿರದ ಒಂದು ಪುಳ್ಳಿ (ಮುಖ ಚುಕ್ಕಿ) ಇಟ್ಟು ಸಾವಿರದ ಒಂದು ಹಾಳೆಯ ಬೃಹತ್ ಅಣಿಯನ್ನು ಕಟ್ಟಿಕೊಳ್ಳುವ ಅಧಿಕಾರವನ್ನು ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಪಡೆದುಕೊಂಡಿದ್ದಾರೆಂದು ಈ ಜನಾಂಗದವರು ಸ್ಮರಿಸಿಕೊಳ್ಳುತ್ತಾರೆ.

**೫.೩.೩ ಕೇಪುಳ ಹೂವಿನ ಪುಂಡಯಿ**

ಕಾಡಿನಲ್ಲಿ ಸಿಗುವ ಕೇಪುಳ ಹೂವು ದೇವರ ಸ್ವರೂಪಿ "ಸತ್ಯದ ಹೂ" ಎಂಬ ನಂಬಿಕೆಯಿದೆ. ಹಾಗಾಗಿ ಈ ಹೂವನ್ನು ಶುಭ ಕಾರ್ಯಗಳ ಶಕುನ (ಪುರ್ಪ ನೋಡುವ ಅಥವಾ ಸಲೊಲಿ ನೋಡುವ) ಕ್ರಮಕ್ಕೆ ಅಗತ್ಯವಾಗಿ ಇರಲೇಬೇಕೆಂಬ ನಿಯಮವಿದೆ. ಇದರಿಂದಾಗಿಯೇ ದೈವಿಕ ನೆಲೆಯಲ್ಲಿ ಮಹತ್ತರ ಸ್ಥಾನ ಪಡೆದಿರುವ ಈ ಕೇಪುಳ ಹೂವು ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗದವರು ಕೈಗೊಳ್ಳುವ ದೈವಾರಾಧನೆಯಲ್ಲೂ ಪ್ರಮುಖ ಪಾತ್ರವನ್ನು ವಹಿಸಿದೆ. ಒಂದು ಹಿಡಿಯಷ್ಟು ಗಾತ್ರ ಮತ್ತು ಒಂದು ಮಾರಿನಷ್ಟು ಉದ್ದನೆಯ ಬೈ ಹುಲ್ಲು ಅಥವಾ ಮುಳಿ ಹುಲ್ಲಿನ ಎರಡೂ ಕಡೆಯ ತುದಿಗಳನ್ನು ಸಮಾನಾಂತರವಾಗಿ ಕತ್ತರಿಸಿ ಆ ಮುಳಿ ಹುಲ್ಲನ್ನು ಓರಣವಾಗಿ ಹಿಡಿದು ಅವುಗಳ ಮೇಲ್ಭಾಗದಲ್ಲಿ ಕೇಪುಳ ಹೂ ಗೊಂಚಲನ್ನು ಜೋಡಿಸುವುದೇ "ಪುಂಡಯಿ", ಇದನ್ನು ಕೈಗಳಿಗೂ ಮತ್ತು ತಲೆಯ ಮುಂಭಾಗಕ್ಕೂ ಕಟ್ಟಿ ಕೊಳ್ಳಲಾಗುತ್ತದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಕೈಗೊಳ್ಳುವ ದೈವಗಳ ಎಲ್ಲಾ ನೇಮಗಳಲ್ಲೂ ಈ ಕೇಪುಳ ಹೂವಿನ ಪುಂಡಯಿ ಅಥವಾ ಒಂದು ಕೇಪುಳ ಹೂವಾದರೂ ಕಡ್ಡಾಯವಾಗಿ ಬೇಕೇ ಬೇಕೆಂಬ ನಿಯಮವಿದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಕೇಪುಳ ಹೂವಿಗೆ ಎಷ್ಟು ಪೂಜ್ಯನೀಯ ಸ್ಥಾನವನ್ನು ಕೊಡುತ್ತಾರೆಂದರೆ ಈ ಜನಾಂಗದ ಮಂತ್ರವಾದಿಗಳಿಗೆ, ಜ್ಯೋತಿಷಿಗಳ ಜ್ಯೋತಿಷ್ಯಕ್ಕೆ, ನೀರಿನ ಮೂಲವನ್ನು ತಿಳಿಯಲು, ಶುಭಕಾರ್ಯಗಳ ಫಲಾಫಲ ತಿಳಿಯಲು ಇತ್ಯಾದಿಗಳಿಗೆ ಈ ಹೂವು ಅತ್ಯಗತ್ಯವಾಗಿದೆ. ಇನ್ನುಳಿದಂತೆ ಸೀಳಲ್ಪಟ್ಟ ತೆಂಗಿನ ಮಡಲಿನ ಎಳೆ ಸಿರಿಯಿಂದ ತಯಾರಿಸಲಾಗುವ ತಿರಿಲಂಗ ಅಥವಾ ಸಿರಿಲಂಗ, ಕಿವಿಯ ಮುಂಭಾಗದಲ್ಲಿ ಕಟ್ಟಿಕೊಳ್ಳುವ ಕೆಬಿಯಣಿ, ಅಡ್ಡಣ, ಸವಲೊ, ಒಡಿಪಟ್ಟಿ ಮುಂತಾದ ಅಲಂಕರಣ ಪರಿಕರಗಳು ಸಹಾ ಈ ಜನಾಂಗದ ದೈವಾರಾಧನೆಯಲ್ಲಿ ವೈಶಿಷ್ಟ್ಯತೆಯನ್ನು ಪಡೆದುಕೊಳ್ಳುತ್ತದೆ. ಇದರಲ್ಲೂ ದೈವಾರಾಧನೆಯಲ್ಲಿ ತೊಡಗಿಕೊಳ್ಳುವ ಇತರ ಸಮುದಾಯಗಳಿಗೆ ಇರದ ಗೆರೆಸೆ (ತಪ್ಪೆ)

ಯಲ್ಲಿ ಬಾರಣೆ ತೆಗೆದುಕೊಳ್ಳುವ, ಮರದ ಮುಗ (ಮರದ ಮುಖವಾಡ) ಹಿಡಿಯುವ ಅಧಿಕಾರಗಳೆಲ್ಲ ಇರುವುದು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಗೆ ಮಾತ್ರವೇ ಆಗಿದೆ.

**೫.೪. ದೈವಾರಾಧನೆಯಲ್ಲಿ ಸಂಧಿಯ ಮಹತ್ವ**



ದೈವಾರಾಧನೆಯಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ಸಂಧಿ ಗತಕಾಲದ ಧ್ವನಿಯಾಗಿ, ವರ್ತಮಾನದ ತೀಕ್ಷ್ಣ ಪ್ರತಿಧ್ವನಿಯಾಗಿ, ಭವಿಷ್ಯತ್ತಿನ ಭರವಸೆ, ಭಾವನೆಗಳನ್ನು ರೂಪಿಸುವ ಶಕ್ತಿಯಾಗಿ, ಚರಿತ್ರೆ ಕಟ್ಟುವ ಆಕರಗಳಾಗಿಯೂ, ಸಂಸ್ಕೃತಿಯನ್ನು ಅನಾವರಣಗೊಳಿಸುವ ಮಾಧ್ಯಮವೂ, ಪರಂಪರೆಯ ಸಂಹನವೂ, ಸಂಸ್ಕೃತಿಯ ಜೀವಾಳವೂ ಆಗಿರುತ್ತದೆ. ತುಳುನಾಡಿನಲ್ಲಿ ಮೊತ್ತ ಮೊದಲ ಬಾರಿಗೆ ದೈವಗಳ ನೇಮ, ಕೋಲಗಳನ್ನು ರೂಪಿಸಿ ದೈವಾರಾಧನೆಗೆ ವಿಶಿಷ್ಟ ಮೂಡಿಸಿದ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದಿಂದಲೇ ಸೃಷ್ಟಿಯಾದ “ಸಂಧಿ” ಜಗತ್ತಿನ ಅತೀ ವಿಶಿಷ್ಟ ಜನಪದ ಮೌಖಿಕ ಮಹಾಕಾವ್ಯವೆನಿಸಿಕೊಂಡಿದೆ.

“ಸಂಧಿ” ಎಂದರೆ ಕನ್ನಡ ಭಾಷೆಯಲ್ಲಿ “ವಿಭಾಗ”, “ಮಧ್ಯೆ”, “ಅಂತರ” ಎಂದು ಮುಂತಾದ ಅರ್ಥಗಳಿದ್ದರೆ ತುಳುವಿನಲ್ಲಿ “ಸಂಧಿ” ಎನ್ನುವ ಪದಕ್ಕೆ “ಔಚಿತ್ಯ ಪೂರ್ಣವಾದ ಹಾಡನ್ನು ಹಂತ” ಅಥವಾ “ವಿಸ್ತಾರವಾಗಿ ಲಯಬದ್ಧವಾಗಿ ಸರಿ ಹೊಂದಿಸಿ ಹಾಡು ಎಂದರ್ಥವಿದೆ. ಹಾಗಾಗಿ ತುಳುನಾಡಿನ ಪ್ರಾಚೀನ ಚಾರಿತ್ರಿಕ ಘಟನೆ ರಾಜ ಮಹಾರಾಜರ ಅಧಿಕಾರ ಅಂತಸ್ತು, ಸಾಮಾಜಿಕ, ಆರ್ಥಿಕ ವ್ಯವಸ್ಥೆ ದಬ್ಬಾಳಿಕೆ, ದೌರ್ಜನ್ಯ, ದರ್ಬಾರು, ಬದುಕು, ಬವಣೆಗಳನ್ನು ವಿಸ್ತಾರವಾಗಿ, ಲಯಬದ್ಧವಾಗಿ ಸರಿ ಹೊಂದಿಸಿ ಹೇಳಲ್ಪಡುವುದೇ ಅಥವಾ ಔಚಿತ್ಯಪೂರ್ಣವಾದ ಹಾಡನ್ನು ಹಂತ–ಹಂತವಾಗಿ ಹಾಡಲ್ಪಡುವುದೇ ಸಂಧಿ ಎನಿಸಿದೆ. ಆದರೆ ಈ ರೀತಿಯ ವಿಶಾಲ ಅರ್ಥವುಳ್ಳ “ಸಂಧಿ” ಯನ್ನು ಬಹುತೇಕರು “ಪಾಡ್ದನ” ವೆಂದು ಕರೆಯುವ ಮೂಲಕ “ಸಂಧಿ” ಗಿರುವ ಅರ್ಥ ವೈಶಾಲ್ಯವನ್ನು ಸಂಕುಚಿತ ದೃಷ್ಟಿಯಲ್ಲಿ ನೋಡಿದಂತೆ ಕಾಣುತ್ತಿದೆ “ಪಾಡ್ದನ” ಎಂದರೆ ತುಳುವಿನಲ್ಲಿ ಹೇಳಲ್ಪಡುವ “ಪಾರ್ತನ”ದ ಕನ್ನಡ ರೂಪವಾಗಿದೆ. “ಪಾರ್ತನ” ವೆಂದರೆ ಕೆಲಸದ ಏಕತಾನತೆ, ಆಯಾಸ ಪರಿಹಾರ್ಥವಾಗಿ ಹಾಡಲ್ಪಡುವ ಹಾಡಾಗಿರುತ್ತದೆ. ಶ್ಲೇಷಾತ್ಮಕವಾಗಿರುವ ಈ ಪಾರ್ತನಹಾಡು ಲೇ.... ಲೇ..... ಎಂಬ ಪದದಿಂದ ಆರಂಭಗೊಳ್ಳುತ್ತದೆ. ಪಾರ್ತನ ಭತ್ತ, ಗದ್ದೆ,

ನಾಟಿ, ಬೇಸಾಯದ ಸಮಯ, ಓ ಬೇಲೆ, ಉರಲ್, ಮುಗೇರರ ದುಡಿಕುಣಿತಗಳಲ್ಲಿ ಹಾಡಲ್ಪಡುತ್ತದೆ. ಆದರೆ "ಸಂಧಿ" ಎನ್ನುವುದು "ಪಾರ್ತನ"ಕ್ಕಿಂತ ತೀರಾ ಭಿನ್ನ ನೆಲೆಯಲ್ಲಿ ರೂಪುಗೊಂಡಿದ್ದು ದೈವಿಕ ನೆಲೆಯ ಉಗಮ ಕಾರಣಿಕ, ಪ್ರಸರಣ, ಹೋರಾಟ, ಸಾಹಸ, ಪ್ರತಿಭಟನೆ – ಹೀಗೆ ಘಟನೆ, ನಂಬಿಕೆ, ಆರಾಧನೆ, ಭಾವನೆಗಳಿಗೆ ಪ್ರತಿಕ್ರಿಯೆ ರೂಪದಲ್ಲಿರುವ ಕಥನವನ್ನು ಪೂರ್ಣವಾಗಿ ಹಂತ ಹಂತವಾಗಿ ಲಯ ಬದ್ಧವಾಗಿ ವಿಸ್ತಾರವಾಗಿ ಹಾಡಲ್ಪಡುವುದಾಗಿದೆ.

ಪ್ರಾಚೀನ ಕಾಲದಲ್ಲಿ ತುಳುನಾಡಿನಾದ್ಯಂತ ದೈವಿಕ ಶಕ್ತಿಗಳಾದ ಭೂತ ದೈವಗಳನ್ನು ಮಂಜ, ಅಗೇಲು, ತಂಬಿಲಗಳಿಂದಷ್ಟೇ ಆರಾಧಿಸುತ್ತಿದ್ದರು ಈ ವೇಳೆ ತುಳುನಾಡಿಗೆ ಮೊತ್ತ ಮೊದಲ ಬಾರಿಗೆ ಪ್ರವೇಶಿಸಿದ ಈ ಸಂಗೀತ, ನರ್ತನ ಮತ್ತು ಮಾತುಗಾರಿಕೆಯಲ್ಲಿ ನಿಪುಣರಾಗಿದ್ದ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಆಗ ಇಲ್ಲಿನ ಸ್ಥಳೀಯ ಐತಿಹ್ಯ, ನಂಬಿಕೆ, ಆಚಾರ ವಿಚಾರಗಳನ್ನು ಕೇಂದ್ರವಾಗಿಟ್ಟುಕೊಂಡು "ಸಂಧಿ" ಯೆಂಬ ಮೌಖಿಕ ಖಂಡ ಕಾವ್ಯಗಳನ್ನು ಅಶುಕವಿಗಳಂತೆ ತಾವೇ ರಚಿಸಿ ಸ್ಮರಣೆಯಲ್ಲಿರಿಸಿಕೊಂಡು ಅದನ್ನು ಉಳಿಸಿ ಬೆಳೆಸಿಕೊಂಡು ಬಂದರು. ಹಾಗಾಗಿ ಸಾಗರೋಪಮವಾದ ಇಂತಹಾ ಮೌಖಿಕ ಕಂಠಸ್ಥ ಪರಂಪರೆಯ ಬಗ್ಗೆ ಕಣ್ಣು ಹಾಯಿಸಿ ಅದರ ಬೆಡಗು ಬಿನ್ನಾಣಗಳನ್ನು, ಒನಪು ವಯ್ಯಾರಗಳನ್ನು ನಿರ್ಮಲವೂ ಆದ ಭಾವನೆಗಳನ್ನು ವಿಶ್ವತೋಮುಖವಾದ ಅನುಭವ ವೈವಿಧ್ಯಗಳನ್ನು ಸರಳತೆ, ಜೀವನದರ್ಶನವಿಶ್ವತೋಮುಖ ಅನುಭವವನ್ನು ಮನಗಂಡ ಯಾರಿಗಾದರೂ ದಿಗ್ಭ್ರಮೆಯಾಗದಿರದು. ಹಲಗೆ ಬಳಪವ ಹಿಡಿಯದೇ ಶಿಷ್ಟ ಸಂಪ್ರದಾಯದಿಂದ ಬಹುದೂರ ಇದ್ದು ಅಸ್ಪೃಶ್ಯರು, ನಿಕೃಷ್ಟರು ಎಂದೆಲ್ಲ ಉಪೇಕ್ಷೆಗೆ ಗುರಿಯಾಗಿ ವಿದ್ಯಾವಂತ ಪಂಡಿತ, ವೈದಿಕ, ಪುರೋಹಿತರು, ಶ್ರೀಮಂತರಿಂದ ನಿರಂತರ ಶೋಷಣೆ, ಸುಲಿಗೆಗೊಳಗಾಗಿ, ಗುಲಾಮರಾಗಿ ದುಡಿದು ಬದುಕುತ್ತಿರುವ ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ಜ್ಞಾನ ಮತ್ತು ಕರ್ಮದ ಹೊಂದಾಣಿಕೆ, ನಡೆ, ಮಾತು ಮತ್ತು ಹಾಡಿನ ನುಡಿಯ ರೂಪ ತಾಳಿ, ಒಡಲಾಳದಿಂದ ಸಂಧಿಯಾಗಿ ಮೂಡಿರುವುದು ಅಚ್ಚರಿಯೆನಿಸುತ್ತದೆ.

**೩.೪.೧. ಸಂಧಿಯ ಕ್ಷಣಗಳು :**

- ಸಂಧಿ – ತುಳುನಾಡಿನ ರಾಜಕೀಯ ಆಡಳಿತ ವ್ಯವಸ್ಥೆಯ ಚಾರಿತ್ರಿಕ ಘಟನೆಗಳ ದಾಖಲೆಯಾಗಿದೆ.
- ಸಂಧಿ – ಲೌಕಿಕ ಜಗತ್ತು ಮತ್ತು ಅಲೌಕಿಕ ಜಗತ್ತಿನ ನಡುವಿನ ಸಂವಹನ ಮಾಧ್ಯಮವಾಗಿದೆ.
- ಇದು ಒಬ್ಬ ರಾಜ ಅಥವಾ ವೀರ ಅಥವಾ ವ್ಯಕ್ತಿಯ ಜೀವಿತದ ರೀತಿ ಮತ್ತು ಆತ ಮೃತ ಪಟ್ಟು ದೈವತ್ವಕ್ಕೇರಿ ಮಾಯಾ ಸ್ವರೂಪಿಯಾಗಿ ನಂಬಲ್ಪಡುವುದರ ಧ್ಯೋತಕವಾದ ಕಥನ ಕಾವ್ಯವಾಗಿದೆ.
- ಪೌರಾಣಿಕ ದೈವಗಳಲ್ಲಿ ಸ್ಥಳೀಯ ನಿಶ್ಚಿತ ಪ್ರದೇಶದಲ್ಲಿ ಪ್ರಭಾವ ಮೆರೆದವರ ಕಥೆ–ವ್ಯಥೆಯನ್ನು ಒಳಗೊಂಡಿದೆ.
- ಸಂಧಿಯಲ್ಲಿ ಅಲೌಕಿಕ, ಭ್ರಮಾತ್ಮಕ, ವಾಸ್ತವ, ಅವಾಸ್ತವ, ಚಾರಿತ್ರಿಕ ಸನ್ನಿವೇಶಗಳ ಅಂಶವೂ ಅಡಕವಾಗಿರುತ್ತದೆ.
- ಲಯ, ಗೇಯ, ಮಟ್ಟುಗಳಿಂದಾಗಿ ಇಂಪಾಗಿ ಹಾಡಲು ಅನುಕೂಲವಾಗಿದೆ
- ಸಂಧಿ ಕಥನಾತ್ಮಕ ಹಾಡ್ಗತೆಯಾಗಿದ್ದು ರೂಪ, ವಸ್ತು, ವಿಷಯ, ಕ್ರಿಯಗಳೇ ಇಲ್ಲಿ ಪ್ರಧಾನವಾಗಿರುತ್ತದೆ.
- ಕಂಠಸ್ಥವಾಗಿ ತಲೆಮಾರಿನಿಂದ ತಲೆಮಾರಿಗೆ ಸಂವಹನಗೊಳ್ಳುವಂತಾಗಿದ್ದು
- ಸಂಪ್ರದಾಯಿಕ ಮತ್ತು ಅಲಂಕಾರಿಕ ಭಾಷೆಯಲ್ಲಿ ಅಸಾಧಾರಣ ವ್ಯಕ್ತಿ ಶಕ್ತಿಗಳ ಸಾಹಸ ಅನ್ಯಾಯದ ವಿರುದ್ಧದ ಹೋರಾಟ, ಪವಾಡಗಳ ಕುರಿತು ಕಥನ ರೂಪದ ಮೌಖಿಕ ಮಹಾಕಾವ್ಯವೆನಿಸಿಕೊಂಡಿದೆ.
- ನವರಸ ಸಾದೃಶ್ಯ ಪೂರ್ಣ ಗೇಯತೆಯನ್ನು ಹೊಂದಿದೆ.

**೫.೪.೨. ಸಂಧಿಯ ಲಯ, ಗೇಯ, ದಾಟಿ, ಮತ್ತು ಮಟ್ಟುಗಳು**

ಲಯ ಎಂದರೆ ಹಾಡುವ ವಿವಿಧ ಘಟ್ಟ ಅಥವಾ ವಿವಿಧ ಹಂತಗಳು ಎಂದರ್ಥ. ಯಾವುದೇ ಹಾಡುಗಾರ ಹಾಡುವ ಸಂದರ್ಭದಲ್ಲಿ ಸಂದರ್ಭಕ್ಕನುಸಾರವಾಗಿ ಭಯ, ಸಂತೋಷ, ರೌದ್ರ ಭಾವನೆಗಳಿಗೆ ರೂಪ ಕೊಡಲು ವಿವಿಧ ಹಂತಗಳಲ್ಲಿ ಹಾಡಬೇಕಾಗುತ್ತದೆ. ಅಂದರೆ ಹಾಡುಗಾರ ಹಾಡುವ ವೇಳೆ ಲಯಾತ್ಮಕ ಗುಣಗಳನ್ನು ಅಳವಡಿಸಿಕೊಂಡಿರುತ್ತಾನೆ. ಅದೇ ರೀತಿ ಸಂಧಿ ಹೇಳುವ ಸಂದರ್ಭದಲ್ಲೂ ಇಂತಹಾ ಲಯಾತ್ಮಕ ಗುಣಗಳನ್ನು ಅನುಸರಿಸಲಾಗುತ್ತದೆ. ಮಾಧುರ್ಯ ಮತ್ತು ಇಂಪಾಗಿ ಹಾಡುಹಾಡುವುದನ್ನು ಗೇಯ ಎನ್ನಲಾಗುತ್ತದೆ. ಈ ಗೇಯತೆ ಸಂಧಿಯಲ್ಲೂ ಅಡಕವಾಗಿದೆ. ಶಿಷ್ಟ ಸಾಹಿತ್ಯದಂತೆ ಸಂಧಿಯಲ್ಲಿ ಬಲವಂತದ ಶಬ್ದಾಲಂಕಾರಗಳನ್ನಾಗಲೀ, ಅರ್ಥಾಂಲಂಕಾರಗಳನ್ನಾಗಲೀ ತುರುಕಿಸದೆ ಭಾವಕ್ಲಿಷ್ಟತೆ ಇಲ್ಲದಿರುವುದರಿಂದ ಅತ್ಯಂತ ಸುಮಧುರ ಮತ್ತು ಸಹಜ ಭಾವನೆಗಳಿಂದ ಸುಶ್ರಾವ್ಯವಾಗಿ ಹಾಡಬಹುದು.

ಹಾಡುವ ವಿಧಾನ ಅಥವಾ ರೀತಿಯನ್ನು ಧಾಟಿ ಎನ್ನಲಾಗುತ್ತದೆ. ಜನಪದ ಗೀತೆಗಳಲ್ಲಿ ಕುಣಿತದ ಹಾಡೇ ಅಂತ್ಯಂತ ಪ್ರಚೀನವಾದ್ದರಿಂದ ಕುಣಿತ ಮತ್ತು ಹಾಡು ಒಂದೇ ಭಾವದ ಕವಲುಗಳಾಗಿವೆ. ಹೀಗಾಗಿ ಸಂಧಿಯೂ ಕುಣಿತಕ್ಕಾಗಿ ಕಟ್ಟಿರುವ ಹಾಡಾಗಿರುವುದರಿಂದ ಹಾಡುವ ಧಾಟಿ ಬಹಳ ರಾಗ ಬದ್ಧವಾಗಿರುತ್ತದೆ. "ಮಟ್ಟು" ಎಂದರೆ ಸ್ವರೂಪ, ವಿನ್ಯಾಸ ಅಥವಾ ರೀತಿ ಎಂದರ್ಥ. ಹಾಡಿನ ಏಕ ತಾನತೆಯನ್ನು ಹೋಗಲಾಡಿಸಲು ಹಾಡಿನ ಕಥಾ ವಸ್ತು, ಸಂವಿಧಾನ, ಸಂದರ್ಭಕ್ಕೆ ಅನುಸಾರವಾಗಿ ಹಾಡುಗಾರ ಹಾಡುವ ರಾಗದಲ್ಲಿ ಕೆಲವೊಂದು ರೀತಿಯ ಸ್ವರೂಪ ಹೊಸ ಹೊಸ ವಿನ್ಯಾಸಗಳನ್ನು ಬಳಸುತ್ತಾನೆ. ಅದೇ ರೀತಿ ಸಂಧಿಯಲ್ಲೂ ಹಾಡುಗಾರ ಸಾಂದರ್ಭಿಕ ವಿನ್ಯಾಸದಲ್ಲಿ ಮಾರ್ಪಾಟುಗಳನ್ನು ಮಾಡಿಕೊಂಡು ಹಾಡುತ್ತಾನೆ. ಪುನರಾವರ್ತನೆ ಸಂಧಿಯ ಇನ್ನೊಂದು ಗುಣವಾಗಿರುವುದರಿಂದ ಇಲ್ಲಿ ಭಾವಗಳ ಪುನರುಕ್ತಿ ಅನುಕರಣಗೊಳ್ಳುತ್ತಿದೆ. ಹೀಗಾಗಿ ಪಾರ್ದನ (ಪಾರ್ತನ) ಲೇ..... ಲೇ..... ಎಂಬ ಪದದಿಂದ ಆರಂಭವಾದರೆ. "ಸಂಧಿ" ಇಡೀ ಜನಪದಗೀತೆಗಳಲ್ಲೇ ಇರದ "ಡೆನ್ನಾನಾ" ಎಂಬ ಶಬ್ದದಿಂದ ಆರಂಭಗೊಳ್ಳುತ್ತಿರುವುದೇ "ಪಾರ್ತನ" (ಪಾಡ್ದನ) ಕ್ಕಿಂತ "ಸಂಧಿ" ಭಿನ್ನ ಮತ್ತು ಅತೀ ವಿಶಿಷ್ಟ ಪ್ರಕಾರವೆನಿಸಲು ಕಾರಣವಾಗಿದೆ.

**೫.೪.೩. ಸಂಧಿಯ ವಿಧಗಳು**

ಸಂಧಿಯು ಒಳಗೊಂಡಿರುವ ಅಂಶಗಳನ್ನು ಉಲ್ಲೇಖಿಸಿ ಸಂಧಿಯ ವಿಧಗಳನ್ನು ಕೆಳಕಂಡಂತೆ ವರ್ಗೀಕರಿಸಬಹುದು ಅವು ಯಾವುದೆಂದರೆ,

೧. ಚಾರಿತ್ರಿಕ ವಸ್ತು ವಿಷಯವುಳ್ಳ ಸಂಧಿ
೨. ಪೌರಾಣಿಕ ವಸ್ತು ವಿಷಯವುಳ್ಳ ಸಂಧಿ
೩. ಅತಿಮಾನುಷ ವಸ್ತು–ವಿಷಯವುಳ್ಳ ಸಂಧಿ
೪. ದೈವದ ಕಾರಣಿಕದ ಐತಿಹ್ಯವುಳ್ಳ ಸಂಧಿ
೫. ಪ್ರಾಣಿ–ಪಕ್ಷಿಗಳು ದೈವತ್ವಕ್ಕೇರಿದ ವಿಷಯವುಳ್ಳ ಸಂಧಿ
೬. ಮೃತ ಪಟ್ಟ ವೀರ ದೈವವಾಗಿ ಕಾರಣಿಕ ಮೆರೆದ ವಿಷಯವುಳ್ಳ ಸಂಧಿ
೭. ದೇವರ ಕಾರಣಿಕದ ವಿಷಯವುಳ್ಳ ಸಂಧಿ.
೮. ದೇವರ ಗಣಗಳಾಗಿ ದೈವಗಳು ನಡೆಸಿದ ಪವಾಡಗಳಿರುವ ಸಂಧಿ.

## ಅಧ್ಯಾಯ – ೬

೬. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಕುಣಿತಗಳು

೬.೧. ಧಾರ್ಮಿಕ ಮತ್ತು ಆರಾಧನಾ ನೆಲೆಯ ಕುಣಿತಗಳು

೬.೧.೧. ಗುರು ಉಳ್ಳಾಲ್ತಿ ನೇಮ

೬.೧.೨. ಗುರು ಉಳ್ಳಾಲ್ತಿ ನೇಮದ ವಿಧಿ ವಿಧಾನ

೬.೧.೩. ಪಾಣಾರಾಟ (ಸ್ವಾಮಿ ಕೋಲ)

೬.೧.೪. ಪಾಣರಾಟ ಅಥವಾ ಸ್ವಾಮಿ ಕೋಲದ ವಿಧಿ ವಿಧಾನಗಳು

೬.೧.೫. ಭೂತ ಕೋಲ

೬.೧.೬. ಢಕ್ಕೆ ಬಲಿ ಅಥವಾ ಮಂಡಲ ಭೂತ

೬.೧.೭. ಮಂಡಲ ಬರೆಯುವ ವಿಧಾನ

೬.೧.೮. ಡಕ್ಕೆ ಬಲಿಯ ಮಂಡಲ ಭೋಗದ ಕ್ರಮಾಚರಣೆಗಳು

೬.೧.೯. ಡಕ್ಕೆ ಬಲಿಯ ನರ್ತನ ಶೈಲಿ

೬.೧.೧೦. ಡಕ್ಕೆ ಬಲಿ ಅಥವಾ ಮಂಡ್ಲ ಭೋಗ ನಡೆಯುವ ಸಂದರ್ಭ

೬.೧.೧೧. ಕೊಡ್ನೀರು ಸ್ನಾನ (ಕಲಶ ನೀರು ಸ್ನಾನ)

೬.೧.೧೨. ಮಾಂಕಾಳಿ ಮುಡ

೬.೧.೧೩. ನಾಗ ಕೋಲ

೬.೧.೧೪. ಹುಗ್ಗಿ ಪೂಜೆ (ನೇಜ ಪೂಜೆ)

೬.೧.೧೫. ದೇಯಿ ನಲಿಕೆ (ದೇಯಿ ಕುಣಿತ)

೬.೧.೧೬. ದೇಯಿ ನಲಿಕೆಯ ಆರಾಧನ ಕ್ರಮ

೬.೧.೧೭. ಕೊಡಿ ಏರುವುದು (ಧ್ವಜಾರೋಹಣ)

೬.೨. ಋತುಮಾನೀಯ ಮಾಂತ್ರಿಕ ಹಿನ್ನೆಲೆಯ ಕುಣಿತಗಳು

೬.೩.೧. ಆಟಿ ಕಳೆಂಜಿ

೬. ೩.೨ ಆಟಿ ಕಳೆಂಜಿ ದೈವದ ನರ್ತನಾ ವಿಧಾನ

೬.೩.೩. ಸಾವುಕೋಲ

೬.೩.೪. ಸಾವು ಕೋಲದ ಅಲಂಕಾರಣ ಮತ್ತು ನರ್ತನಾ ವಿಧಾನ

೬.೩.೫. ಕಾಲೆ ಕೋಲ

೬.೩.೬. ಕಾಲೆ ಕೋಲದ ಅಲಂಕರಣ  ಮತ್ತು ನರ್ತನ ವಿಧಾನ

೬.೩. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಬೇಸಾಯ ಸಂಬಂಧಿ ಕುಣಿತಗಳು

೬.೩.೧. ಕಂಡ ಕೋರಿ ಅಥವಾ ಗದ್ದೆ ಗೋರುವ ಜಾತ್ರೆ

೬.೩.೨. ಕಂಡ ಕೋರಿ ಜಾತ್ರೆಗೆ ಆಹ್ವಾನ ನೀಡುವ ಕೊರಗ ಕೋಲ

೬.೩.೩. ನಾಗನಿಮು (ನಾಗತಣಿಮು)

೬.೩.೪. ಪೂಕರೆ ಹಾಕುವುದು

೬.೩.೫. ಏರುಕೋಲ

೬.೩.೬. ಕುದುರೆ ಕೋಲ

೬.೩.೭. ಮಾಲೊದ ಕಿರಿಯೊ ಅಥವಾ ಮಾಲೊಕಾರ್‍ಯೊ

೬.೪. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ವಾರ್ಷಿಕಾವರ್ತನದ ಕುಣಿತಗಳು

೬.೪.೧. ಸ್ತ್ರೀಯರ ಕುಣಿತಗಳು – ಪೊಲ್ಸೊಡಿ ನಲಿಕೆ

೬.೪.೨. ಪೊಲ್ಸೊಡಿ ನಲ್ಕೆಯ ವಿಧಿ ವಿಧಾನ

೬.೪.೩. ಮಾದಿರೊ ನಲಿಕೆ

೬.೪.೪. ಮದಿರೊ ನಲಿಕೆಯ ವಿಧಾನ

೬.೪.೫. ಕನ್ಯಾಪು ನಲಿಕೆ

೬.೫. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ವಾರ್ಷಿಕ ಆವರ್ತನದ ಪುರುಷರ ಕುಣಿತಗಳು

೬.೫.೧. ಸೋಣದ ಜೋಗಿ ಪುರುಷೆರೆ ಕುಣಿತ

೬.೫.೨. ವಿಧಿ ನಿಷೇಧಗಳು

೬.೫.೩. ಜೋಗಿ ಪುರುಷೆರೆ ಕುಣಿತ

೬.೫.೪. ಕಾವೇರಿ ಪುರುಷೆರೆ ಕುಣಿತ

೬.೫.೫. ವಿಧಿ ನಿಷೇಧಗಳು

೬.೫.೬. ಮಾಯಿದ ಪುರುಷೆರೆ ಕುಣಿತ

---

## ೬. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ಕುಣಿತಗಳು

### ೬.೧. ಧಾರ್ಮಿಕ ಮತ್ತು ಆರಾಧನಾ ನೆಲೆಯ ಕುಣಿತಗಳು :

ಕುಣಿತ, ಹಾಡು, ಮಾತುಗಳಿಗೂ ಸಹಾ ವ್ಯಕ್ತಿಯ ರೋಗ, ಕಷ್ಟ, ಕೋಟಲೆಗಳನ್ನು ದೂರ ಮಾಡುವ ಮಹಾನ್ ಚಿಕಿತ್ಸ ಶಕ್ತಿಯಿದೆಯೆಂಬುದನ್ನು ಮೊತ್ತ ಮೊದಲು ಜಗತ್ತಿಗೆ ತೋರಿಸಿ ಕೊಟ್ಟವರೇ ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯವರೆಂಬುದು ಬಹಳ ಅಚ್ಚರಿಯ ಸಂಗತಿಯಾಗಿದೆ. ಮನುಷ್ಯನ ಬಹಳಷ್ಟು ರೋಗ,ರುಜಿನ, ಕಷ್ಟ ಕೋಟಲೆಗಳಿಗೆ ಮಾನಸಿಕ ಚಿಂತೆ, ಭಯ, ಅಪನಂಬಿಕೆಗಳೇ ಕಾರಣವೆಂಬುದುದನ್ನು ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಅರಿತಿದ್ದರು. ಇದಕ್ಕಾಗಿ ಇವರು ಮನುಷ್ಯನ ಮನಸ್ಸನ್ನು ಸುಲಭವಾಗಿ ಆಕರ್ಷಿಸಿ, ಪರಿವರ್ತನೆಗೊಳಿಸುವ ಚಿಕಿತ್ಸಿಕ ಶಕ್ತಿ ಕುಣಿತ ಹಾಡು, ಮಾತುಗಳಿಗೆ ಇದೆಯೆಂಬುದನ್ನು ಪ್ರಯೋಗಾತ್ಮಕವಾಗಿ ಕಂಡುಕೊಂಡರು. ಇದರ ಸಾಕಾರಕ್ಕಾಗಿ ಆಟಿಕೆಕಳೆಂಜ, ಕನ್ನಿ ನಲಿಕೆ, ಮಾಕಾಳಿ ನಲಿಕೆ, ಸಾವು ಕೋಲ, ಕಾಲೆ ಕೋಲ, ರಾವು ಗುಳಿಗ ಕೋಲ(ರಾಹು ಗುಳಿಗ ಕೋಲ), ಮರವೆ ನಲಿಕೆ, ಗುರು – ಉಳ್ಳಾಲ್ತಿ ಕೋಲ, ಪಾಣರಾಟ ಸ್ವಾಮಿಕೋಲ, ಡಕ್ಕೆಬಲಿ, ನಾಗಕೋಲ, ದೇಯಿ ನಲಿಕೆ, ಕೊರಗ ನಲಿಕೆ, (ಕೊರಗ ಕಟ್ಟುನೆ), ನಾಗ ತನಿಮನೆ (ನಾಗನಲಿಕೆ), ಎರುಕೋಲ, ಕುದುರೆಕೋಲ, ಮಾಲೊದ ಕಾರ್ಯೊ (ಮೂರ್ಲೆ ನಲಿಕೆ) ಪೊಲ್ಸೋಡಿ ನಲಿಕೆ, ಮಾದಿರ ಕುಣಿತ, ಸೋಣದ ಮಾದಿಮ್ಮಲ್ ನಲಿಕೆ, ಕನ್ಯಾಪು ನಲಿಕೆ, ಜೋಗಿ ಪುರುಷ ನಲಿಕೆ, ಮುಂತಾದ ಕುಣಿತಗಳನ್ನು ಈ ಸಮುದಾಯದವರು ಸೃಷ್ಟಿಸಿದರು. ಆದರೆ ಇವು ಕಾಲಬದ್ಧ ಕುಣಿತಗಳಾದರೂ ಈ ಎಲ್ಲ ಕುಣಿತಗಳೂ ಮನುಷ್ಯರ ಮನಸ್ಸನ್ನು ಪರಿವರ್ತಿಸುವ ಮನೋವೈಜ್ಞಾನಿಕ ಮಾಂತ್ರಿಕ ಚಿಕಿತ್ಸಾ ಪದ್ಧತಿಯ ಕುಣಿತಗಳೇ ಆಗಿರುತ್ತವೆಂಬುದು ಸ್ಪಷ್ಟ.

### ೬.೧.೧. ಗುರು ಉಳ್ಳಾಲ್ತಿ ನೇಮ

'ವಚ್ಚೊತ್ತ ಗುರು ಬರಲ ಸಂತಾನೊ'' ಎಂದು ಸಂಧಿಯಲ್ಲಿ ಹೇಳಲ್ಪಡುವಂತೆ ಶೃಂಗೇರಿ ಮಠದ ಆದಿ ಗುರು ಶಂಕರಾಚಾರ್ಯರ ಮೂಲಕ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಅತ್ಯಂತ ಪ್ರಾಚೀನ ಕಾಲದಲ್ಲಿ ಕರ್ನಾಟಕದಲ್ಲಿ ಮೊತ್ತ ಮೊದಲ ಬಾರಿ ಶೃಂಗೇರಿ ಮಠದಲ್ಲಿ ನೆಲೆ ಕಂಡು ಶೃಂಗೇರಿ ಶಾರದೆಯನ್ನು ಕುಲದೇವರಾಗಿ ಮೊದಲು ಸ್ವೀಕರಿಸಿ, ಬಳಿಕ ಬಂಗಾಡಿಯ ಬರಲ ಭೂಮಿಯಲ್ಲಿ ಶಾಶ್ವತ ನೆಲೆಕಂಡುಕೊಂಡರು. ಬಳಿಕ ಬಂಗಾಡಿಯ ಬರಲ ಭೂಮಿಯಲ್ಲಿ ಶಾರದಾ ದೇವಿ ದೈವದ ಅವತಾರ ತಾಳಿ ಈ ಸಮುದಾಯದ ಕುಲ ಗುರು ಉಳ್ಳಾಲ್ತಿ ದೈವವಾಗಿ ಅವತರಿಸಿದಳು. ಇದರಂತೆ ಮುಂದೆ ಉಳ್ಳಾಲ್ತಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ವಂಶ ವೃಕ್ಷವಾದ ''ಪಾಳೆಮರ'' (ಸಪ್ತವರ್ಣಿ ಅಥವಾ ಹಾಳೆಮರ –ಇದನ್ನು ಭುತ ಕುಳಿತುಕೊಳ್ಳುವ ಮರವೆಂದೂ, ಉಳ್ಳಾಲ್ತಿ ದೈವದ ಆವಾಸ್ಥ ಸ್ಥಾನವೆಂದೂ ಕರೆಯುತ್ತಾರೆ) ಈ ಮರದ ಬುಡದಲ್ಲಿ ಪ್ರತಿಷ್ಠಾಪಿಸಿ ''ಗುರು ಉಳ್ಳಾಲ್ತಿ ದೈವ'' ಯೆಂಬುದಾಗಿ ಈ ಸಮುದಾಯದವರು ಆರಾಧಿಸ

ತೊಡಗಿದರೆಂದು ಸಂಧಿಯನ್ನು ಉಲ್ಲೇಖಿಸಿ ಈ ಸಮುದಾಯದ ಹಿರಿಯರು ಅಭಿಪ್ರಾಯ ಪಡುತ್ತಾರೆ. ಈಗಲೂ ಈ ಸಮುದಾಯದ ಶುಭಕಾರ್ಯಗಳಲ್ಲಿ ಮೊದಲು ಹಾಳೆ ಮರದ ಗೆಲ್ಲನ್ನು ಕಟ್ಟಿ, ಗುರು ಉಳ್ಳಾಲ್ತಿ ಆರಾಧನೆಯನ್ನು ಮಾಡಿಯೇ ಮುಂದಿನ ಶುಭ ಕಾರ್ಯಗಳನ್ನು ಕೈಗೊಳ್ಳುವ ವಾಡಿಕೆಯಿದೆ.

**೬.೧೧.೨. ಗುರು ಉಳ್ಳಾಲ್ತಿ ನೇಮದ ವಿಧಿ – ವಿಧಾನ**

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರ ಕುಲಗುರು ಮತ್ತು ದೈವವಾದ ಗುರು ಉಳ್ಳಾಲ್ತಿ ದೈವಕ್ಕೆ ಈ ಸಮುದಾಯದ ಕುಟುಂಬಸ್ಥರೇ ಒಟ್ಟು ಸೇರಿ ನೇಮ ಕೊಡುವ ಕ್ರಮವಿದೆ. ಮದುವೆಯಾಗಿರುವ ಹಿರಿಯರೇ ಈ ದೈವಕ್ಕೆ ನೇಮ ಕಟ್ಟಬೇಕೆಂಬ ಕಡ್ಡಾಯ ನಿಯಮವಿದೆ. ನೇಮ ನಡೆಯುವ ಮನೆಯಲ್ಲಿ ದೈವದ ಬಾಲ್‌ಭಂಡಾರ (ದೈವದ ಮೊಗ, ಮೂರ್ತಿ, ಆಯುಧ)ಗಳನ್ನಿಡಲು ಅಟ್ಟಣಿಗೆಯುಳ್ಳ "ಕೊಡಿನಾಡ್" ಅಥವಾ "ಕೊಡಿಯಡಿ" ಎಂದು ಕರೆಯುವ ಸಣ್ಣ ಚಪ್ಪರವನ್ನು ಹಾಕಲಾಗುತ್ತದೆ. ಈ ಚಪ್ಪರದ ಮುಂಭಾಗದ ಮೇಲೆ "ಚಪ್ಪರಕೊಂಬು" ಎಂದು ಕರೆಯಲಾಗುವ, ಹಾಳೆ ಮರದಿಂದ ಮಾಡಲಾದ ತ್ರಿಶೂಲಕಾರದ ರಚನೆಯನ್ನು ಕಟ್ಟಲಾಗಿರುತ್ತದೆ. ಅದೇ ರೀತಿ ಹಾಳೆ ಮರದ ಗೆಲ್ಲನ್ನು ಕನ್ಯಾ ಕಂಬವನ್ನು ಕಟ್ಟಲಾಗುತ್ತದೆ. ನಂತರ ಅದರ ಕೆಳಗೆ ಜುಟ್ಟು ಇರುವ ತೆಂಗಿನಕಾಯಿಯ ಸುತ್ತಲೂ ತೆಂಗಿನ ಎಳೆಸಿರಿಯನ್ನು ಸಣ್ಣದಾಗಿ ಸೀಳಿ ಆ ತೆಂಗಿನ ಕಾಯಿಯ ಜುಟ್ಟಿಗೆ ಹಗ್ಗದಿಂದ ಕಟ್ಟಿ ಕೆಳಗೆ ನೇತು ಹಾಕಲಾಗುತ್ತದೆ. ಸಂಜೆಯಾಗುತ್ತಿದ್ದಂತೆ ಮನೆಯೊಳಗಿದ್ದ ದೈವದ " ಬಾಲ್‌ಭಂಡಾರ" (ಮೊಗ ಮೂರ್ತಿ) ಯನ್ನು ವಾದ್ಯ, ತಾಸೆ, ಡೋಲುಗಳ ಹಿಮ್ಮೇಳದೊಂದಿಗೆ ದೈವದ ಪೂಜಾರಿ, ನಿರ್ಮಿಸಲಾಗಿರುವ ದೈವದ ಕೊಡಿನಾಡಿಗೆ (ದೈವದ ಚಾವಡಿ) ತಂದು ಆರತಿ ಬೆಳಗಿ ಪೂಜೆ ನಡೆಸುತ್ತಾನೆ. ನಂತರ ದೈವ ಕಟ್ಟುವವನಿಗೆ ಪಡಿಯರಿ (ಪಡಿಯಕ್ಕಿ) ಕೊಟ್ಟು ಎಣ್ಣೆ ಬೂಳ್ಯ (ಎಣ್ಣೆ ವೀಳ್ಯ) ಕೊಡಲಾಗುತ್ತದೆ. ಬಳಿಕ ಆತ ಸ್ನಾನ ಮಾಡಿ, ಮುಖವರ್ಣಿಕೆ ಮಾಡಿಕೊಂಡು, ರವಿಕೆ, ನೆರಿಸೀರೆ, ನೆರಿಗೆಯುಳ್ಳ ಮೇಲುವಸ್ತ್ರ ಧರಿಸಿ, ಕೀರಿಟ, ಗಗ್ಗರ, ಕೈಬಳೆ, ಮೂಗುತಿಯ ಬೊಟ್ಟು ಧರಿಸಿ ದೈವವಾಗಿ ಸಿದ್ಧಗೊಳ್ಳುತ್ತಾನೆ.

ಅಷ್ಟರಲ್ಲಿ ನೇಮ ಕೊಡುವ ಹಿರಿಯ ವ್ಯಕ್ತಿ ದೈವದ ಬಳಿ ಬಂದು ಕುಳಿತಿದ್ದ ದೈವವನ್ನು ಕೈ ಹಿಡಿದು ಮೇಲೆತ್ತುತ್ತಾನೆ. ನಂತರ ಕುಟುಂಬಸ್ಥರೆಲ್ಲ ಪ್ರಾರ್ಥಿಸಿಕೊಂಡು ಹೂ ಮತ್ತು ಅಕ್ಕಿಯನ್ನು ದೈವದ ಮೇಲೆ ಚೆಲ್ಲುತ್ತಾರೆ. ಹೀಗೆ ಮೂರು ಸಾರಿ ಪ್ರಾರ್ಥಿಸಿಕೊಂಡಾಗ ದೈವಕ್ಕೆ ಆವೇಶ ಬಂದು ಕ್ರಮೇಣ ಶಾಂತವಾಗಿ ನೆಟ್ಟಿರುವ ಕನ್ಯಾ ಕಂಬಕ್ಕೆ ಮೂರು ಸುತ್ತು ಬಂದು ಮನೆಯೊಳಕ್ಕೆ ಪ್ರವೇಶಿಸುತ್ತದೆ. ಮನೆಯೊಳಗೆ ಪ್ರವೇಶಿಸುವ ವೇಳೆ ಮನೆಯವರು ಮೆಟ್ಟಲಿನಲ್ಲಿ ದೈವದ ಕಾಲಿಗೆ ನೀರೆರೆಯುತ್ತಾರೆ. ನಂತರ ಮನೆಯ ದೈವದ ಬಾಲ್‌ಭಂಡಾರ ಇಡುವ ಕೋಣೆಗೆ ತರಳಿ ಅಲ್ಲಿ ದೃಷ್ಟಿಸಿ ಬಳಿಕ ಬಂದು ಮುಂಬಾಗಿಲ ಚಾವಡಿಯಲ್ಲಿ ಬೆಂಚು ಅಥವಾ ಕುರ್ಚಿಯ ಮೇಲೆ ಕುಳಿತಾಗ ದೈವಕ್ಕೆ ಸಿಯಾಳ, ಅನ್ನ ಕೋಳಿ ಸಾಂಬಾರು, ದೋಸೆಗಳ ಬಾರಣೆ ಕೊಟ್ಟು ಸಂತೃಪ್ತಿ ಪಡಿಸುತ್ತಾರೆ. ನಂತರ ಎಲ್ಲರೂ ದೈವದ ಕಾಲಿಗೆ ಅಡ್ಡ ಬೀಳುತ್ತಾರೆ. ಕೊನೆಗೆ ಎಲ್ಲರಿಗೂ ಕುಳಿತೇ ಅಭಯದ ನುಡಿ ಕೊಟ್ಟು ಬಳಿಕ ಹೊರಗೆ ಕೊಡಿಯಡಿಯ ಬಳಿ ಬಂದು ವಾದ್ಯ, ಡೋಲು, ತಾಸೆಗಳ ಹಿಮ್ಮೇಳಕ್ಕೆ ಕುಣಿದು ಕೊನೆಗೆ ಆವೇಶಗೊಂಡು ದೈವದ ನೇಮ ಬಿರಿಯುತ್ತದೆ. (ಮುಕ್ತಾಯವಾಗುತ್ತದೆ).

**೬.೧.೩. ಪಾಣರಾಟ (ಸ್ವಾಮಿ ಕೋಲ)**

ತುಳುನಾಡಿನಲ್ಲಿ ನಲ್ಕೆ, ಅಜಿಲ, ಕೋಪಾಲ ರೆಂದು ಕರೆಯಿಸಿಕೊಳ್ಳುವ ಈ ಸಮುದಾಯದವರು – ಪಡುವಣದ ಉಡುಪಿ ಮತ್ತು ಬಡಗು ದಿಕ್ಕಿನ ಕುಂದಾಪುರ ಪರಿಸರದಲ್ಲಿ "ಪಾಣಾರ" ಅಥವಾ "ಪಾಣ" ಅಥವಾ "ಪಾಂಡ್ರು" ಎಂದು ಮುಂತಾಗಿ ಕರೆಯಿಸಿಕೊಂಡರು. ಅದರಂತೆ ಇಲ್ಲಿನ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ನಡೆಸುವ ದೈವ, ನೇಮ, ಕೋಲವನ್ನು ಉಡುಪಿ, ಕುಂದಾಪುರ ಕಡೆಗಳಲ್ಲಿ ಪಾಣರಾಟ, ಸ್ವಾಮಿಕೋಲ, ಭೂತಕೋಲ, ಡಕ್ಕೆ ಬಲಿ, ಅಥವಾ ಮಂಡ್ಲ ಭೋಗ, ನಾಗಕೋಲ ಎಂದು ಮುಂತಾಗಿ ಕರೆಯುತ್ತಾರೆ. ಸಾಮಾನ್ಯವಾಗಿ ದೀಪಾವಳಿಯ ನಂತರ ಉಡುಪಿಯಿಂದ ಶಿರಸಿಯವರೆಗೆ ಪಾಣರಾಟ ನಡೆಯುತ್ತದೆ. ಇಲ್ಲಿನ ಬಹುತೇಕರ ಮನೆಗಳಲ್ಲಿ ದೈವದ ಗುಡಿ ಇದ್ದು ಇದನ್ನು "ಸ್ವಾಮಿ ಮನೆ" ಅಥವಾ "ಸ್ವಾಮಿ ಸ್ಥಾನ"ವೆಂದು ಕರೆಯುತ್ತಾರೆ. ಪಾಣರಾಟ ಮಾಡಿಸುವ ಮನೆಯವರು ಅಥವಾ ಕುಟುಂಬಸ್ಥರು ಪಾಣರಾಟಕ್ಕೆ ದಿನ ನಿಶ್ಚಯಿಸಿ ಬಳಿಕ ಸ್ವಲ್ಪ ದಿನ ಬಿಟ್ಟು ದೈವದ ಸೇವೆ ಮಾಡುವ ಪಾಣಾರನನ್ನು ತಮ್ಮಲ್ಲಿಗೆ ಕರೆಯಿಸಿಕೊಂಡು ಪಾಣರಾಟಕ್ಕೆ (ನೇಮಕ್ಕೆ) ವೀಳ್ಯ ಕೊಡುತ್ತಾರೆ. ಅಥವಾ ಪಾಣಾರನ ಮನೆಗೆ ತೆರಳಿ ವೀಳ್ಯ ಕೊಟ್ಟು ಬರುತ್ತಾರೆ.

ನಂತರ ಪಾಣಾರಾಟದ ದಿನ ಮಡಿವಾಳರು ದೈವದ ಗುಡಿ ಅಥವಾ ಸ್ವಾಮಿಮನೆ (ಸ್ವಾಮಿ ಸ್ಥಾನವನ್ನು) ಯನ್ನು ಸ್ವಚ್ಛವಾಗಿಟ್ಟು ತೀರ್ಥದಿಂದ ಶುದ್ಧೀಕರಿಸಿ ಸ್ವಾಮಿ ಮನೆಯ ಸ್ವಾಮಿ (ದೈವದ) ಯ ಮೊಗ ಮೂರ್ತಿಗಳನ್ನು ಇಡುವ ಜಾಗದಲ್ಲಿ ಹಿಂಭಾಗದ ಗೋಡೆಗೆ ತಾಗುವಂತೆ ಮೇಲಿಂದ ಕೆಳಗಿನವರೆಗೆ ಬಿಳಿ ಬಟ್ಟೆಯನ್ನು ಹಾಸಿ, ಸೊಂಟದಷ್ಟು ಎತ್ತರದಲ್ಲಿ ಅಟ್ಟಳಿಗೆಯಲ್ಲಿ ಸ್ವಾಮಿಯ "ಉರು" (ದೈವ ಬಿಂಬ) ವನ್ನು ಇಡುತ್ತಾರೆ. ಮಧ್ಯದಲ್ಲಿ ಹಲಸಿನ ಮರದಿಂದ ಮಾಡಿದ ಮುಂಡಿಗೆ (ದೈವಕುಳಿತುಕೊಳ್ಳುವ ಮರದ ಪೀಠ. ಇದನ್ನು ತುಳುವಿನಲ್ಲಿ ಮಣಿಮಂಚಮೊ ಎಂದು ಕರೆಯುತ್ತಾರೆ. ಸ್ವಾಮಿ ಮನೆಯ ಹೊರಗೆ ಚಪ್ಪರ ಹಾಕಿ ತಳಿರು ತೋರಣಗಳಿಂದ ಅಲಂಕರಿಸಿ ಭಕ್ತರಿಗೆ ಕುಳಿತುಕೊಳ್ಳುವ ವ್ಯವಸ್ಥೆ ಮಾಡಿರುತ್ತಾರೆ.

ಪಾಣಾರಾಟದ ಮೊದಲು ಕಂಚಿನ ಕಲಶದಲ್ಲಿ ಮನೆಯ ಯಾರಾದರೊಬ್ಬರು ಬಾವಿಯಿಂದ ನೀರು ತೆಗೆದು ಅದನ್ನು ಹಿಡಿದುಕೊಂಡು ಸ್ವಾಮಿ ಮನೆಗೆ ಬರುತ್ತಾರೆ. ಹೀಗೆ ಬರುವಾಗ ಪಾಣಾರನು ಡಕ್ಕೆ (ತೆಂಬರೆ) ಬಡಿಯುತ್ತಾ ಸ್ವಾಮಿ ಹಾಡು (ಹೊಗಳಿಕೆ ) ಹೇಳುತ್ತಾ ಆತನ ಜೊತೆ ಬರುತ್ತಾನೆ. ಆಗ ಕುಟುಂಬಸ್ಥರು ಮತ್ತು ಭಕ್ತರೆಲ್ಲರೂ ಅವರನ್ನು ಹಿಂಬಾಲಿಸುತ್ತಾರೆ. ಹೀಗೆ ತಂದ ಕಲಶದ ನೀರನ್ನು ಸ್ವಾಮಿ ಬಿಂಬ (ಉರು) ಇಟ್ಟಿರುವ ಅಟ್ಟಳಿಗೆಯ ಕೆಳಗೆ ನೆಲದಲ್ಲಿ ಬಿಳಿ ವಸ್ತ್ರವನ್ನು ಹಾಸಿ ಬಾಳೆ ಎಲೆಯ ಬಲ ಮತ್ತು ಎಡ ಭಾಗಕ್ಕೆ ಸಮಾನಾಂತರದಲ್ಲಿ ವಿಭಾಗಿಸಿ ಬಲಕ್ಕೆ ಜುಟ್ಟು ಇರುವ ತೆಂಗಿನ ಕಾಯಿಯನ್ನೂ ಎಡಭಾಗದಲ್ಲಿ ಈ ಕಲಶವನ್ನೂ ಇಟ್ಟು ಎಲೆಯ ಮಧ್ಯೆ ವೀಳ್ಯದೆಲೆ, ಅಡಿಕೆ, ಹಿಂಗಾರ, ಇಟ್ಟು ದೀಪ, ಊದುಬತ್ತಿಗಳನ್ನು ಹಚ್ಚಿ ಧೂಪದ ಹೊಗೆ ಹಿಡಿದು ಕಲಶ ಶುದ್ಧಿಕರಿಸುತ್ತಾರೆ. ಬಳಿಕ ದೈವಬಿಂಬ (ಸ್ವಾಮಿ ಬಿಂಬ) ಗಳನ್ನು ಧೂಪದ ಹೊಗೆಯಿಂದ ಶುದ್ಧಿಕರಿಸಿ ದೈವದ ಪೂಜಾರಿ ಹಣ್ಣು ಕಾಯಿ ಮಾಡಿ ಮಂಗಳಾರತಿ ಬೆಳಗಿ ಪೂಜೆ ನೆರವೇರಿಸುತ್ತಾನೆ. ಸ್ವಾಮಿ ಕಲಶ ಪ್ರತಿಷ್ಠಾಪಿಸಿ, ಕಲಶ ಶುದ್ಧೀಕರಣಗೊಂಡ ಬಳಿಕವೇ ಪಾಣರಾಟ (ಸ್ವಾಮಿ ಕೋಲ) ನೆರವೇರಲ್ಪಡುತ್ತದೆ.

**೬.೧.೪. ಸ್ವಾಮಿಕೋಲ (ಪಾಣರಾಟ)ದ ವಿಧಿ – ವಿಧಾನಗಳು**

ಸ್ವಾಮಿ ಕೋಲ ಅಥವಾ ಪಾಣಾರಾಟದ ದಿನ ಸಂಜೆ ವೇಳೆ ಕಲಶ ಶುದ್ಧೀಕರಣಗೊಳ್ಳುವ ವೇಳೆಗೆ ಪಾಣಾರರು ಸ್ವಾಮಿಕೋಲಕ್ಕೆ ಸಿದ್ಧತೆ ನಡೆಸುತ್ತಾರೆ. ಕಲಶ ಪೂಜೆ ಮುಗಿಯುತ್ತಿದ್ದಂತೆ ಪಾಣಾರ ಹೆಂಗಸು ಡಕ್ಕೆ (ತೆಂಬರೆ) ಬಡಿಯುತ್ತಾ ಸ್ವಾಮಿ ಹೊಗಳಿಕೆ (ಹೊಗಳಿಕೆಹಾಡು, ಸಂಧಿ) ಹೇಳಲು ಆರಂಭಿಸುತ್ತಾಳೆ. ಅಷ್ಟರಲ್ಲಿ ಕೋಲ ನೀಡುವ ಮನೆಯ ಯಜಮಾನ

ಆಕೆಗೆ ಹೂಗಳಿಗೆ ಹಾಡಿನ (ಸಂಧಿ ಹೇಳಿದ) ಬಾಬ್ತು ಎಲೆ ಅಡಿಕೆ, ಅಕ್ಕಿ, ತೆಂಗಿನಕಾಯಿ, ಎಣ್ಣೆ, ಮಲ್ಲಿಗೆ ಹೂಗಳನ್ನು ನೀಡುತ್ತಾನೆ. ಇದನ್ನು ಡಕ್ಕೆಯ ಮರ್ಯಾದೆ (ತೆಂಬರೆಯ ಮರ್ಯಾದಿ) ಎಂದು ಕರೆಯುತ್ತಾರೆ.

ಹೊಗಳಿಕೆ ಹಾಡು ಮುಗಿಯುತ್ತದ್ದಂತೆಯೇ ಸ್ವಾಮಿ ಕೋಲದ ಪಾತ್ರಧಾರಿ ಮುಖಕ್ಕೆ ಅರ್ಧಾಳದ ಬಣ್ಣ ಹಚ್ಚಿ ಬೊಟ್ಟು, ನಾಮಗಳನ್ನು ಬಳಿದು ಕೆಂಪು ಬಣ್ಣದ ಪಟ್ಟೆ ಸೀರೆಯನ್ನು ಕಚ್ಚೆ ಹಾಕಿ ಅದರ ಮೇಲೆ ಸೊಂಟಕ್ಕೆ ದೊಡ್ಡ ಶಾಲನ್ನು ಸುತ್ತಿ, ಮೈಗೆ ಕೆಂಪು ಅಂಗಿ ಧರಿಸಿ, ಉದ್ದನೆಯ ಕೆಂಪು ಶಾಲನ್ನು ಹೆಗಲಿನ ಎರಡೂ ಕಡೆ ಇಳಿಯ ಬಿಟ್ಟು ಸೊಂಟಕ್ಕೆ ಬಣ್ಣದ ಪಟ್ಟಿ, ಅಲಂಕಾರಗಳನ್ನು ಮಾಡಿಕೊಂಡಿರುತ್ತಾನೆ. ಕೈಗಳಿಗೆ ದಂಡೆ, ಕೈಪಟ್ಟಿ ಕಟ್ಟಿ, ಕೊರಳಿಗೆ ಹಾರಗಳನ್ನು ಹಾಕಿಕೊಂಡು ತಲೆಗೆ ಕಿರೀಟವನ್ನು ಕಟ್ಟಿ ಎರಡೂ ಕೈಯಲ್ಲಿ ಹಿಂಗಾರವನ್ನು ಹಿಡಿದುಕೊಂಡು ಸ್ವಾಮಿ ಮನೆಯ ಮುಂಭಾಗದ ಚಪ್ಪರಕ್ಕೆ ಬರುತ್ತಾನೆ. ಆ ಚಪ್ಪರದ ಮಧ್ಯೆ ತೂಗು ದೀಪವೊಂದನ್ನು ಉರಿಸಿ ನೇತು ಹಾಕಲಾಗುತ್ತದೆ. ಸ್ವಾಮಿ ಕೋಲದ ಪಾತ್ರದಾರಿ ಚಪ್ಪರಕ್ಕೆ ಪ್ರವೇಶಿಸುತ್ತಲೇ ಹಾಡು ಹೇಳಿಕೊಂಡು ದೀಪದ ಸುತ್ತ ಕುಣಿಯಲು ಆರಂಭಿಸುತ್ತಾನೆ. ಆತನ ಹಾಡಿಗೆ ತಕ್ಕಂತೆ ಡಕ್ಕೆ (ತೆಂಬರೆ) ಬಡಿಯುವಾಗ ಸ್ವಾಮಿ ಕೋಲದ ಪಾತ್ರಧಾರಿಗೆ ಆವೇಶ ಬರುತ್ತದೆ. ಅಷ್ಟರಲ್ಲಿ ಕುಟುಂಬಸ್ಥರು ಮತ್ತು ಭಕ್ತರೆಲ್ಲ ಪ್ರಾರ್ಥಿಸಿ ತಮ್ಮ ತಮ್ಮ ಕಷ್ಟ, ಕೋಟಲೆಗ ಬಗ್ಗೆ ಹೇಳಿಕೊಂಡಾಗ ಆತ ಅಭಯ ನೀಡಿ ಅಶ್ವತ್ಥ ಎಲೆಯಲ್ಲಿ ಹುತ್ತದ ಮಣ್ಣನ್ನು ನೀಡುತ್ತಾನೆ. ನಂತರ ಸ್ವಾಮಿ ಕೋಲ ಮುಕ್ತಾಯವಾದಾಗ ಸ್ವಾಮಿ ಕೋಲದ ಪಾತ್ರಧಾರಿಗೆ ಕುಡಿಯಲು ಎಳೆನೀರು ಹಣ್ಣು ಫಲವಸ್ತುಗಳನ್ನು ನೀಡಲಾಗುತ್ತದೆ.

**೬.೧.೫. ಭೂತಕೋಲ**

ಸ್ವಾಮಿಕೋಲವಾದ ನಂತರ ಭೂತಗಳಿಗೆ ಕೋಲ ನಡೆಯುತ್ತದೆ. ಸಾಮಾನ್ಯವಾಗಿ ಉಡುಪಿಯಿಂದ ಕುಂದಾಪುರದ ಕಡೆ ಇರುವ ಭೂತ, ದೈವಗಳ ಹೆಸರು ತುಳುನಾಡಿನಲ್ಲಿರುವ ದೈವ, ಭೂತಗಳ ಹೆಸರಿನಂತಿರದೆ ಭಿನ್ನಹೆಸರಿನಿಂದ ಕರೆಯಲ್ಪಡುತ್ತದೆ. ಇಲ್ಲಿರುವ ಭೂತ – ದೈವಗಳಲ್ಲಿ ನಂದಿ, ಹಾಯ್ಗುಳಿ, ಹುಲಿಹಳೆಯಮ್ಮ, ಎಳೆಯಮ್ಮ ಹಲವು ಮಕ್ಕಳ ತಾಯಿ, ಚಿಕ್ಕು, ಮಾಸ್ತಿ, ಉಮ್ಮಳ್ತಿ, ಕ್ಷೇತ್ರಪಾಲ, ಜುಟ್ಟುಗ, ಉಂಗಲ್ತಿ, ಬೊಬ್ಬರ್ಯ, ಕೀಳು, ಮಲೆರಾಯ ನೇತ್ರಾಯುಗುಳಿ, ಕಾಡ್ತಿ ಅಮ್ಮ , ಕಲ್ಕುಡ, ಮುಂತಾದವು ಮುಖ್ಯವಾದವುಗಳಾಗಿವೆ. ಪಾಣರಾಟ ಅಥವಾ ಸ್ವಾಮಿಕೋಲ ನಡೆದ ಬಳಿಕವಷ್ಟೇ ತುಳುನಾಡಿನ ಭೂತ ಕೋಲದಂತೆ ಇಲ್ಲಿ ಈ ಎಲ್ಲಾ ಭೂತಗಳಿಗೆ ಕೋಲ ನಡೆಯುವುದು ವಿಶೇಷವಾಗಿದೆ.

**೬.೧.೬. ಡಕ್ಕೆ ಬಲಿ ಅಥವಾ ಮಂಡ್ಲ ಭೋಗ**

"ನಾಗ" ಮತ್ತು "ಬಿರ್ಮೆರ್" ತುಳುವರ ಮೂಲ ಆದಿ ದೈವಗಳು. ಅತ್ಯಂತ ಪ್ರಾಚೀನ ಕಾಲದಲ್ಲಿ ದೈವಗಳಿಗೆ ತನು, ತಂಬಿಲ, ಹರಕೆ, ಅಗೇಲುಗಳಲ್ಲೇ ಪೂಜೆ, ಆರಾಧನೆಗಳು ನಡೆಯುತ್ತಿದ್ದವು. ಆದರೆ ತುಳುನಾಡಿಗೆ ಬೌದ್ಧ ಮತ್ತು ಜೈನ ಧರ್ಮಗಳು ಪ್ರವೇಶಿಸಿದಾಗ ಅವರು ಆರಾಧಿಸುತ್ತಿದ್ದ ಮಾಯಾ ಸ್ವರೂಪಿ ಯಕ್ಷ ಬ್ರಹ್ಮರ ಆರಾಧನೆಗಳು ತುಳುವರ ನಾಗ ಮತ್ತು ಬಿರ್ಮೆರ್ ದೈವಗಳ ಮೇಲೆ ಪ್ರಭಾವ ಬೀರಿ ನಾಗ ಮತ್ತು ಬಿರ್ಮೆರ್ ದೈವಗಳು ಯಕ್ಷ ಬ್ರಹ್ಮರಂತೆ ಪ್ರಭಾವಿ ಶಕ್ತಿಗಳನಿಸಿಕೊಂಡವು. ಇದೇ ವೇಳೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ತುಳುನಾಡನ್ನು ಪ್ರವೇಶಿಸಿದ ಬಳಿಕ ನಾಗ ಬಿರ್ಮೆರ್ ತುಳುವರ ಆರಾಧ್ಯ ದೈವವಾಗಿ ಗುಡಿ, ಗುಂಡ, ತಾನ ಆಲಡೆಗಳಲ್ಲಿ ಆರಾಧಿಸಲ್ಪಟ್ಟು ನಾಗ ಬಿರ್ಮೆರಿಗೆ ನೇಮ, ಕೋಲ ಡಕ್ಕೆ ಬಲಿ, ನಾಗಕೋಲಗಳ ಮೂಲಕ ಆರಾಧನೆಗೊಳ್ಳುವಂತಾಯಿತು. ನಂತರ ವೈದಿಕ ಧರ್ಮ ತುಳುನಾಡನ್ನು

ಪ್ರವೇಶಿಸಿದ ಬಳಿಕ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ನಡೆಸುತ್ತಿದ್ದ ಡಕ್ಕೆ ಬಲಿಯನ್ನು ವೈದಿಕರು "ನಾಗಮಂಡಲ"ವೆಂಬ ಹೆಸರಲ್ಲಿ ಅವರ ಆರಾಧನಾ ಪದ್ಧತಿಗಳಲ್ಲಿ ಬಳಸಿಕೊಂಡರು.

"ಡಕ್ಕೆ" ಎಂದರೆ ಡಮರುಗ ಎಂದರ್ಥ "ಬಲಿ" ಎಂದರೆ ತುಳುವಿನಲ್ಲಿ ಸುತ್ತು ಬರುವುದು ಎಂದರ್ಥ. ಹಾಗಾಗಿ ಡಕ್ಕೆಯನ್ನು ಹಿಡಿದು ಹಾಡಿ ಕುಣಿಯುತ್ತಾ ಸುತ್ತು ಬರುವುದೇ ಡಕ್ಕೆ ಬಲಿ. ಮೊತ್ತ ಮೊದಲ ಬಾರಿಗೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಡಕ್ಕೆ ಬಲಿಯೆಂಬ ವಿಶಿಷ್ಟ ನಾಗನ ಆರಾಧನೆಗೆ ತೊಡಗಿ ತುಳುನಾಡ ಸಂಸ್ಕೃತಿಗೆ ಅಮೂಲ್ಯ ಕಾಣಿಕೆಯನ್ನಿತ್ತಿದ್ದಾರೆ. ಉಡುಪಿ-ಕುಂದಾಪುರ ಕಡೆಗಳಲ್ಲಿ ಮಾತ್ರ ಕಂಡು ಬರುವ ಈ ಡಕ್ಕೆ ಬಲಿ ಸೇವೆ ಉಡುಪಿಯ ಗಡಿಭಾಗದಿಂದೀಚೆ ಕಾಸರಗೋಡಿನವರೆಗೆ ಈ ಡಕ್ಕೆ ಬಲಿ-"ನಾಗ ಬಿರ್ಮೆರ ನೇಮ" ಅಥವಾ ಬಿರ್ಮೆರೆ ಕೋಲವೆಂಬ ಹೆಸರಲ್ಲಿ ನಡೆಯುತ್ತಿದೆ. ಉಡುಪಿ-ಕುಂದಾಪುರ ಕಡೆಗಳಲ್ಲಿ ಸ್ವಾಮಿಗುಡಿ ಅಥವಾ ದೈವದ ಮನೆಗಳಲ್ಲಿ (ತುಳುನಾಡಿನಲ್ಲಿ ಇದನ್ನು ಕೊಡಿನಾಡ್ ಎನ್ನಲಾಗುತ್ತದೆ. ಸ್ವಾಮಿ, ಹಾಯ್ಗುಳಿ, ಚಿಕ್ಕು, ಹಳೆಯಮ್ಮ, ಒಬ್ಬರ್ಯ್ಯ ದೈವಗಳಿಗೆ ಡಕ್ಕೆ ಬಡಿಯುತ್ತಾ ಹೊಗಳಿಕೆ (ಸಂಧಿ) ಹೇಳುತ್ತಾ ಮಂಡಲದ ಸುತ್ತ ನಲ್ಕೆ ಅಜಿಲ ಅಥವಾ ಪಾಣಾರರು ಕುಣಿಯುವ ಮೂಲಕ ನಡೆಸುವ ಸೇವೆಯೇ ಡಕ್ಕೆ ಬಲಿ ಅಥವಾ ಮಂಡ್ಲಭೋಗ.

**೬.೧.೭. ಮಂಡಲ ಬರೆಯುವ ವಿಧಾನ**

ಸ್ಥಳ ಶುದ್ಧೀಕರಣವಾಗದೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ದೈವಾರಾಧನೆಯಲ್ಲಿ ತೊಡಗುವ ಕ್ರಮವಿಲ್ಲ. ಇದರಂತೆ ಡಕ್ಕೆ ಬಲಿಯ ಮೊದಲು ಕಲಶ ನೀರು ಸ್ನಾನ ಮಾಡಿ ಸ್ಥಳ ಶುದ್ಧೀಕರಿಸಿ ಮಂಡಲ ಬರೆಯಲಾಗುತ್ತದೆ. ಸಾಮಾನ್ಯವಾಗಿ ಆಯತಾಕಾರದಲ್ಲಿ ಮಂಡಲವನ್ನು ಬರೆಯುವ ಸಂಪ್ರದಾಯವಿದೆ. ಮಂಡಲದ ಮಧ್ಯೆ ಬಾಳೆಎಲೆಯ ತುದಿಯಲ್ಲಿ ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ, ಎಲೆ ಅಡಿಕೆ ಇಟ್ಟು ಊದುಬತ್ತಿ ಹಚ್ಚಿಡುತ್ತಾರೆ. ಇದನ್ನು ಗಣಪತಿ ಸ್ತುತಿ (ಗಣಪತಿ ಸುತ್ಯೆ) ಎನ್ನಲಾಗುತ್ತದೆ. ನಂತರ ಅರಶಿನ ಮತ್ತು ಬೇರೆ ಬೇರೆ ಎಲೆಗಳಿಂದ ತಯಾರಿಸಿದ ಕೆಂಪು, ಹಳದಿ, ಕಪ್ಪು, ಹಸಿರು ಬಣ್ಣಗಳಿಂದ ಮಂಡಲದ ಒಳಗೆ ಗಣಪತಿ, ನಾಗ, ಯಕ್ಷ, ತ್ರಿಶೂಲ, ಬ್ರಹ್ಮ ಇತ್ಯಾದಿ ಚಿತ್ರ ಬರೆದು, ಮಂಡಲದ ಸುತ್ತ ಹೊಂಬಾಳೆ (ಹಿಂಗಾರ), ಹಬ್ಬಲ್ಲಿಗೆ, (ಕನಕಾಂಬರ), ಸೇವಂತಿಗೆ ಹೂಗಳಿಂದ ಅಲಂಕರಿಸುತ್ತಾರೆ. ಮಂಡಲದ ಮೇಲ್ಭಾಗದಲ್ಲಿ ವಿಶಾಲವಾದ ಚಪ್ಪರವಿದ್ದು, ಚಪ್ಪರದ ಅಡಿಭಾಗಕ್ಕೆ ಬಿಳಿ ಬಟ್ಟೆಯನ್ನು ಹಾಸಿ, ಹಾಸಲ್ಪಟ್ಟ ಬಿಳಿಬಟ್ಟೆಯ ಮಧ್ಯ ಭಾಗಕ್ಕೆ ಜುಟ್ಟು ಇರುವ ತೆಂಗಿನಕಾಯಿಯ ಸುತ್ತ ಸೀಳಲ್ಪಟ್ಟ ತೆಂಗಿನ ಎಳೆ ಸಿರಿ ಮತ್ತು ಹಿಂಗಾರವನ್ನು ಕಟ್ಟುತ್ತಾರೆ. ಚಪ್ಪರದ ಅಡಿಭಾಗದಲ್ಲಿ ಹಾಸಿದ ಬಿಳಿಬಟ್ಟೆಯ ೮ ದಿಕ್ಕುಗಳಲ್ಲಿ ಅಷ್ಟದಿಕ್ಪಾಲಕರ ಸಂಕೇತವಾಗಿ ತೆಂಗಿನ ಎಳೆಸಿರಿಯಾದ ವಿವಿಧ ಆಕೃತಿಗಳನ್ನು ಮಾಡಿ ಹೂಗಳನ್ನು ತೂಗು ಹಾಕುತ್ತಾರೆ. ಈ ರೀತಿ ಮಂಡಲ ಬರೆದು ಮೊದಲು ಮಂಟಪ ದೇವರನ್ನು ಮಂಡಲದೊಳಕ್ಕೆ ಆಹ್ವಾನಿಸಿ, ಮೊದಲು ಮಂಡಲ ಪೂಜೆ ನಡೆಯುತ್ತದೆ. ಪೂಜೆ ನಡೆದು ಮಂಗಳಾರತಿಯಾದ ಬಳಿಕ ಡಕ್ಕೆ ಬಲಿ ಪ್ರಾರಂಭವಾಗುತ್ತದೆ.

**೬.೧.೮. ಡಕ್ಕೆ ಬಲಿ ಅಥವಾ ಮಂಡ್ಲ ಬೋಗದ ಕ್ರಮಾಚರಣೆಗಳು**

ತುಳುನಾಡನ್ನು ಆಳುತ್ತಿದ್ದ ಬನವಾಸಿಯ ಕದಂಬರ ಪ್ರಖ್ಯಾತ ದೊರೆ ಮಯೂರವರ್ಮನ ಆಡಳಿತಾವಧಿಯಲ್ಲಿ ಡಕ್ಕೆ ಬಲಿಗೆ ಬಹಳ ಮಹತ್ವ ನೀಡಿರುವುದು ಸ್ಪಷ್ಟಗೊಂಡಿದೆ. ಡಕ್ಕೆ ಬಲಿ ಸೇವೆಯಲ್ಲಿ ತೊಡಗಿಕೊಳ್ಳುವವರು ಮೂರು ಜನ ನಲ್ಕೆ

ಅಜಿಲ ಅಥವಾ ಪಾಣಾರ ಸಮುದಾಯದವರು ಮಾತ್ರ. ಒಬ್ಬ ಅರ್ಧನಾರೀಶ್ವರನ ವೇಷಧಾರಿಯಾಗಿ ಕಪ್ಪು ಪೈಜಾಮು ಧರಿಸಿ ಅದರ ಮೇಲೆ ಪಟ್ಟೆ ಸೀರೆಯನ್ನು ಕಚ್ಚೆ ಹಾಕಿ ನೀಲಿ ಅಥವಾ ಕೆಂಪು ಬಣ್ಣದ ರವಿಕೆ ಅದರ ಮೇಲೆ ಕೆಂಪು ಅಥವಾ ನೀಲಿ, ಹಸಿರು ಬಣ್ಣದ ಜಾಕೀಟು (ಒಳಗೆ ಧರಿಸಿದ್ದ ರವಿಕೆಯ ಕೈ ಕಾಣುವಂತೆ) ಧರಿಸಿ ಎದೆ ಭಾಗ ಮತ್ತು ಬೆನ್ನಿನ ಮೇಲೆ ಗುಣಿಸು ಆಕಾರ ಬರುವಂತೆ ಜರಿಯುಳ್ಳ ಶಲ್ಯವನ್ನು ಕಟ್ಟಿಕೊಳ್ಳುತ್ತಾನೆ. ಅದೇ ರೀತಿ ಸೊಂಟಕ್ಕೆ ಸೊಂಟಪಟ್ಟಿ ಕಟ್ಟಿಕೊಂಡು ಕಾಲಿಗೆ ಗೆಜ್ಜೆ, ಎರಡು ಕೈಗಳಿಗೆ ಬಳೆಗಳು, ಕುತ್ತಿಗೆಗೆ ಸರ, ಹೂಮಾಲೆ, ಕಿವಿಗೆ ಕುಂಡಲ, ಮುಖಕ್ಕೆ ಬಿಳಿ ಅರ್ಧಾಲ ಹಚ್ಚಿ ಹಣೆಗೆ ವೃತ್ತಾಕಾರವಾಗಿ ಬಿಳಿ ಮತ್ತು ಕೆಂಪು ನಾಮದ ಮಧ್ಯೆ ಕಪ್ಪು ಬೊಟ್ಟು ಇಟ್ಟು ಕೈಯ್ಯಲ್ಲಿ ಮರದ ಅಥವಾ ಕಂಚಿನ ಡಕ್ಕೆ (ಡಮರುಗ) ಇರುತ್ತದೆ. ಇನ್ನಿಬ್ಬರು ವೇಷಧಾರಿಗಳು ಬಿಳಿ ಪಟ್ಟೆ ವಸ್ತ್ರವನ್ನು ಕಚ್ಚೆ ಹಾಕಿ, ಬಿಳಿ ಬಣ್ಣದ ಉದ್ದ ತೋಳಿನ ಅಂಗಿ ಧರಿಸಿ ಕೆಂಪು ಮುಂಡಾಸು ಕಟ್ಟಿ ಹಣೆಗೆ ಬಿಳಿನಾಮ ಹಾಕಿ ಮಧ್ಯೆ ಕಪ್ಪು ಬೊಟ್ಟು ಬಳಿದುಕೊಂಡು ಕೈಯ್ಯಲ್ಲಿ ತಾಳವಿಡಿದುಕೊಂಡಿರುತ್ತಾರೆ. ಇನ್ನೊಬ್ಬ ನಾಗಪಾತ್ರಿ ಮೈಗೆ ಕೆಂಪು ಶಾಲು ಹೊದ್ದುಕೊಂಡು, ಕೆಂಪು ವಸ್ತ್ರವನ್ನು ಕಚ್ಚೆ ಹಾಕಿಕೊಂಡು ಹಿಂಗಾರವನ್ನು ಹಿಡಿದುಕೊಂಡಿರುತ್ತಾನೆ.

**೬.೧.೯. ಡಕ್ಕೆ ಬಲಿ ಅಥವಾ ಮಂಡ್ಲ ಭೋಗದ ನರ್ತನ ಶೈಲಿ**

ಮಂಡಲಕ್ಕೆ ಮಂಟಪ ದೇವರನ್ನು ಆಹ್ವಾನಿಸಿ ಪೂಜೆ ನಡೆದು ಮಹಾಮಂಗಳಾರತಿಯಾದ ಬಳಿಕ ಡಕ್ಕೆ ಬಲಿ ನಡೆಸಲು ಪಾಣಾರ ಜನಾಂಗದ ಅರ್ಧನಾರೀಶ್ವರ ವೇಷಧಾರಿ ಹಾಗೂ ಇತರ ಇಬ್ಬರು ಹಿಮ್ಮೇಳದವರು ಸಿದ್ಧರಾಗುತ್ತಾರೆ. ಇವರ ಜೊತೆ ನಾಗ ಪಾತ್ರಿಯೂ ಇರುತ್ತಾನೆ. ಮೊದಲು ಹಿಮ್ಮೇಳದವರು ಗಣಪತಿ ಸ್ತೋತ್ರ ಹೇಳಲು ಆರಂಭಿಸುತ್ತಾರೆ. ಅಷ್ಟರಲ್ಲಿ ಅರ್ಧನಾರೀಶ್ವರ ವೇಷಧಾರಿಗೆ ಒಮ್ಮೆಲೇ ಆವೇಶ ಬರುತ್ತದೆ. ಅಷ್ಟರಲ್ಲಿ ನಾಗಪಾತ್ರಿಗೂ ಆವೇಶ ಬರುತ್ತದೆ. ಆಗ ಡಕ್ಕೆ ಬಲಿ ಸೇವೆಯಲ್ಲಿ ತೊಡಗಿಕೊಳ್ಳುವ ಪಾಣಾರರಿಗೆ ಸಹಾಯಕರಾಗಿರುವ (ಮಂಡಲದ ಹೊರಗೆ ನಿಂತಿರುವ ಸಹಾಯಕರು)_ಇತರ ಪಾಣಾರರು ಡಕ್ಕೆ, ತೆಂಬರೆ, ಜಾಗಟೆಗಳನ್ನು ಬಾರಿಸುತ್ತಾರೆ.

ಗಣಪತಿ ಸ್ತುತಿ ಆದ ಬಳಿಕ ಅರ್ಧನಾರೀಶ್ವರ ವೇಷಧಾರಿ ನಾಗನ ಹೊಗಳಿಕೆ ಹಾಡನ್ನು ಹಾಡುತ್ತಾನೆ. ಆ ಹಾಡನ್ನು ಅರ್ಧನಾರೀಶ್ವರನ ಜೊತೆಗಿದ್ದ ಕಲಾವಿದರು ಅನುಕರಿಸುತ್ತಾ ಮಂಡಲಕ್ಕೆ ಕುಣಿದುಕೊಂಡು ಸುತ್ತು ಬರುತ್ತಾರೆ. ನಾಗನ ಹೊಗಳಿಕೆ ಮುಗಿಯುತ್ತಿದ್ದಂತೆ ಸ್ವಾಮಿಯ ಹೊಗಳಿಕೆಯಾಗುತ್ತದೆ. ನಂತರ ವಿವಿಧ ಭೂತಗಳ ಹೊಗಳಿಕೆಯಾಗುತ್ತದೆ. ಪ್ರತೀಯೊಂದು ಹೊಗಳಿಕೆ ಹಾಡಿನ ಕೊನೆಯಲ್ಲಿ "ಚಿತ್ತಾ ಸಂತೋಷದಲ್ಲಿ, ತನ್ನ ಸ್ಥಾನದಲ್ಲಿ ಸ್ಥಿರವಾಗಿ ನಿಲ್ಲುವಂತ ಮುದ್ದು ಸ್ವಾಮಿ" ಎಂಬ ಒಕ್ಕಣೆ ಪುನರಾವರ್ತನೆಯಾಗುತ್ತದೆ. "ಮುದ್ದು ಸ್ವಾಮಿ" ಯೆಂದರೆ ಸುಬ್ರಹ್ಮಣ್ಯಸ್ವಾಮಿ ಎಂದರ್ಥ. ಕೇರಳದಲ್ಲಿ ಸುಬ್ರಹ್ಮಣ್ಯನನ್ನು "ಮುದ್ದು ಸ್ವಾಮಿ" ಎಂದು ಕರೆಯಲಾಗುತ್ತದೆ. ಹಾಗಾಗಿ ಈ ಹೊಗಳಿಕೆ ಹಾಡು ನಾಗಸ್ವರೂಪಿ, ಸುಬ್ರಹ್ಮಣ್ಯ ಸ್ವಾಮಿಯದ್ದಾಗಿರುತ್ತದೆ. ಮುಂಜಾನೆಯ ವೇಳಗೆ ಕುಣಿತ ಮುಕ್ತಾಯವಾಗುತ್ತದೆ. ನಂತರ ಅರ್ಧನಾರೀಶ್ವರ ವೇಷಧಾರಿ ಡಕ್ಕೆ ಬಲಿ ಸೇವೆ ಕೊಟ್ಟವರಿಗೆ ಮತ್ತು ಭಕ್ತರಿಗೆ ಕನ್ನಡದಲ್ಲೇ ಅಭಯ ನೀಡಿ ಹುತ್ತದ ಮಣ್ಣಿನ ಪ್ರಸಾದ ವಿತರಿಸುತ್ತಾನೆ.

**೬.೧.೧೦. ಡಕ್ಕೆ ಬಲಿ ಅಥವಾ ಮಂಡ್ಲ ಭೋಗ ನಡೆಯುವ ಸಂದರ್ಭ**

ಪಾಣಾರಾಟದ ಜೊತೆಯಲ್ಲಿ ಮಾತ್ರ ಡಕ್ಕೆ ಬಲಿ ನಡೆಯುತ್ತದೆ. ಆದರೆ ವೈದಿಕರು ನಾಗಮಂಡಲ ನಡೆಸುವಂತೆ ಪ್ರತ್ಯೇಕವಾಗಿ ಡಕ್ಕೆ ಬಲಿಯನ್ನು ನಡೆಸುವ ಕ್ರಮವಿಲ್ಲ. ಡಕ್ಕೆ ಬಲಿಕೊಡುವವರು ವಿಶ್ವಕರ್ಮ, ಬಂಟ, ಮೊಗವೀರ,

ಮುಂತಾದವರಾದರೆ ಮಾತ್ರ ಪಾಣಾರರು ಮಂಡಲ ಬರೆದು ಅರ್ಧನಾರೀಶ್ವರ ವೇಷಧರಿಸಿ ಮಂಡಲಸುತ್ತ ಡಕ್ಕೆ ಬಲಿ ಸೇವೆಯಲ್ಲಿ ತೊಡಗಿಕೊಳ್ಳುತ್ತಾರೆ. ಒಂದು ವೇಳೆ ಡಕ್ಕೆ ಬಲಿ ಕೊಡುವವರು ಬಿಲ್ಲವ ಜನಾಂಗದವರಾಗಿದ್ದರೆ ಕೇವಲ ಹೊಗಳಿಕೆ ಹಾಡಿ ದೈವದ ಪಾತ್ರಿಯನ್ನಷ್ಟೇ ದೈವ ಕುಣಿಸುತ್ತದೆ. ಹಾಗೆ ಕುಣಿಸುವಾಗಲೂ ದೈವದ ಪಾತ್ರಿ ಮತ್ತು ದೈವದ ಮಧ್ಯೆ ಅಂತರ ಇರುವಂತೆ ಬಿದಿರಿನ ಕೋಲುಗಳನ್ನು ಅಡ್ಡ ಕಟ್ಟುವ ಕ್ರಮವಿದೆ. ಉಡುಪಿ– ಕುಂದಾಪುರದ ಕಡೆಗಳಲ್ಲಿ ಪಾಣಾರರ ಮಾತೃಭಾಷೆ ಕನ್ನಡವಾಗಿದ್ದರೂ ಪಂಜುರ್ಲಿ, ಕಲ್ಕುಡ, ಬೊಬ್ಬರ್ಯ, ಮುಂತಾದ ದೈವಗಳಿಗೆ ನೇಮ (ಕೋಲ) ನಡೆಯುವ ಸಂದರ್ಭ ಆವೇಶಗೊಳ್ಳುವಾಗ ದೈವ ತುಳುವಿನಲ್ಲಿ ಮಾತನಾಡುವುದು ವಿಶೇಷವೆನಿಸುತ್ತದೆ. ಪಂಜುರ್ಲಿ, ಕಲ್ಕುಡ ದೈವಕ್ಕೆ ನೇಮಕೊಡುವ ಮನೆಯ ಯಜಮಾನ ದೈವದಲ್ಲಿ "ನಮ್ಗೆ ತುಳು ಬತ್ತಲ್ಲೆ; ಇದ್ ಬಡ್ಕ್ ದೇಶ. ಕನ್ನಡಂಗೇ ನೀನ್ ನಮ್ಗೆ ನುಡಿಕೊಡ್ಕ್" ಎಂದು ಪ್ರಾರ್ಥಿಸಿಕೊಂಡಾಗ ತುಳುವಿನಲ್ಲೇ ದೈವ ನುಡಿ ಕೊಡಲು ಆರಂಭಿಸುತ್ತದೆ.

**೬.೧.೧೧. ಕೊಡ್ನೀರು ಸ್ನಾನ (ಕಲಶ ನೀರು ಸ್ನಾನ)**

ಡಕ್ಕೆ ಬಲಿಯ ಕೊನೆಯಲ್ಲಿ ಕೊಡ್ನೀರು ಸ್ನಾನ ಮಾಡಿಸಿ ಶುದ್ಧಾಚಾರಗೊಳ್ಳುವ ಕ್ರಮವಿದೆ. ದೈವದ "ಉರು" (ಉರು ಎಂದರೆ ದೈವಗಳ ಭಂಡಾರ, ಮೂರ್ತಿ ಮುಂದೆ ಇರಿಸಿದ ಕಲಶ)ಗಳನ್ನು ಡಕ್ಕೆ ಬಲಿ ಕೊಟ್ಟ ಮನೆಯವರ ಪೈಕಿ ಅಥವಾ ಕುಟುಂಬಸ್ಥರ ಪೈಕಿ ಯಾರಾದರೊಬ್ಬ ಹೊತ್ತುಕೊಂಡು ಯಾವುದಾದರೂ ಕೆರೆಯ ಬಳಿಗೆ ಅಥವಾ ಪಾಣಾರರ ಮನೆಗೆ ಅಥವಾ ದೈವದ ಗುಡಿಯ ಯಜಮಾನನ ಮನೆಗೆ ಹೋಗುತ್ತಾರೆ. ಆಗ ಕಲಶ ಹೊತ್ತ ವ್ಯಕ್ತಿಯನ್ನು ಪಾಣಾರರ ಬಳಗ ಡಕ್ಕೆ, ತೆಂಬರೆ ಜಾಗಟೆಗಳನ್ನು ಬಡಿಯುತ್ತಾ ದೈವದ ಹುಟ್ಟು–ಕಟ್ಟುಗಳ ಹೊಗಳಿಕೆ ಹೇಳುತ್ತಾ ಹಿಂಬಾಲಿಸುತ್ತಾರೆ. ನಂತರ ಅಲ್ಲಿ ಪಾಣಾರಾಟ ಕೊಟ್ಟ ಮನೆಯಜಮಾನರ ಮಕ್ಕಳ ಮೇಲೆ ಈ ಕಲಶ ನೀರನ್ನು ಹೊಯ್ದು ಶುದ್ಧಗೊಳಿಸಿ ತಾವೂ ಶುದ್ಧವಾದೆವೆಂದು ಹೇಳುತ್ತಾರೆ.

**೬.೧.೧೨. ಮಾಂಕಾಳಿ ಮುಡ**

"ಮಾಂಕಾಳಿ" ಎಂದರೆ ಮಹಾಕಾಳಿ. ಈಕೆಯನ್ನು "ಮಾರಿದೇವತೆ"ಯೆಂದೂ ಕರೆಯಲಾಗುತ್ತದೆ. ಕುಂದಾಪುರ ಕಡೆಗಳಲ್ಲಿ ಪಾಣಾರರು ಅಡಿಕೆ ಹಾಳೆಯಿಂದ ಈ ಮಾಂಕಾಳಿ (ಮಾರಿ) ದೈವಕ್ಕೆ ಬೃಹತ್ ಮುಖವಾಡ ತಯಾರಿಸಿ ನೇಮ (ಕೋಲ) ಕೈಗೊಳ್ಳುತ್ತಾರೆ. ಇದನ್ನು "ಮಾಂಕಾಳಿಮುಡಏರ್ಸುದು" ಎನ್ನುತ್ತಾರೆ. ಇಲ್ಲಿ ಮುಖವಾಡವನ್ನು "ಮುಡ" ಎಂದು ಕರೆಯಲಾಗುತ್ತದೆ. ಸುಮಾರು ೩೦ ಅಡಿ ಎತ್ತರದಲ್ಲಿ ಬಿದಿರಿನ ಅಟ್ಟಳಿಗೆಯ ತುದಿಯಲ್ಲಿ ಅಡಿಕೆ ಹಾಳೆಯಿಂದ ಮಾಡಿದ ಮಾಂಕಾಳಿ ಮುಖವಾಡವನ್ನು ಕಟ್ಟಲಾಗಿರುತ್ತದೆ. ನೆಲದಲ್ಲಿ ಬರೆದ ಮಂಡಲಕ್ಕೆ ಕೆಂಪು ಬಣ್ಣದ ಅರ್ದಲದ ಮುಖವರ್ಣಿಕೆ ಹಾಕಿಕೊಂಡು ಪೈಜಾಮು, ಅಂಗಿ, ಸೊಂಟ, ಪಟ್ಟಿ ಗಗ್ಗರಗಳನ್ನು ಕಟ್ಟಿಕೊಂಡ ಮಾಂಕಾಳಿ ಪ್ರವೇಶಿಸಿ ಬರೆದ ಮಂಡಲಕ್ಕೆ ಧೂಪ ದೀಪಗಳನ್ನು ಬೆಳಗಿಸಿ ಕೋಳಿಯನ್ನು ಬಲಿಕೊಯ್ದು ಆವೇಶದಿಂದ ರಕ್ತವನ್ನು ಕುಡಿಯುತ್ತಾ ವಾದ್ಯ, ತಾಸೆ ಹಿಮ್ಮೇಳದೊಂದಿಗೆ ಉಗ್ರವಾಗಿ ನರ್ತಿಸುತ್ತದೆ. ನಂತರ ಅಟ್ಟಳಿಗೆಯೊಳಗೆ ನುಗ್ಗಿ ಮಾಂಕಾಳಿ ಮುಡ (ಮಾಂಕಾಳಿ ಮುಖವಾಡವನ್ನು) ವನ್ನು ಎತ್ತಿಕೊಂಡು ಮಂಡಲದ ಸುತ್ತ ಮೂರು ಸುತ್ತು ಬಂದು ದೀವಟಿಗೆ ಹಿಡಿದು ದೀವಟಿಗೆಗೆ ರಾಳದ ಹುಡಿ ಎರಚುತ್ತಾ ಮಂಡಲಕ್ಕೆ ಮತ್ತೆ ಪ್ರದಕ್ಷಿಣೆಗೆ ಬಂದು ನೆರೆದ ಜನರೊಂದಿಗೆ ಗ್ರಾಮದ ಗಡಿಯವರೆಗೆ ತೆರಳಿ ಅಲ್ಲಿ ಪೂಜೆ ನೆರವೇರಿಸಿ ಮುಡ ಇಳಿಸಿ ಬರುತ್ತದೆ.

ಉಡುಪಿ, ಕಾರ್ಕಳ ಪ್ರದೇಶದಲ್ಲಿ ಮಾಂಕಾಳಿ ಆರಾಧನೆ ಬೇರೆ ರೀತಿಯಲ್ಲಿ ನಡೆಯುತ್ತದೆ. ಈ ಭಾಗದಲ್ಲಿ ದೀಪಾಳಿಯ ಪಾಡ್ಯದಿಂದ ಆರಂಭವಾಗಿ ಮೂರು ಅಥವಾ ಏಳು ದಿನಗಳವರೆಗೆ ಪಾಣಾರ ತಂಡ ಮನೆ ಮನೆಗೆ ಹಗಲು ಹೊತ್ತಲ್ಲಿ ತೆರಳಿ ಮಹಾಕಾಳಿ ನಲಿಕೆಯೆಂಬ ಹೆಸರಿನಲ್ಲಿ ಕುಣಿಯುತ್ತಾರೆ. ತೆಂಬರೆ ಬಡಿದು ಮಹಾಕಾಳಿಯನ್ನು ಕುಣಿಸುತ್ತೇವೆ ಎಂದು ಮನೆಯವರಲ್ಲಿ ಒಪ್ಪಿಗೆ ಕೇಳಿ ಹಾಡು ಹೇಳುತ್ತಾ ಕುಣಿಸುತ್ತಾರೆ. ಗಂಡಸು, ಹೆಣ್ಣಿನ ವೇಷತೊಟ್ಟು ಮಹಾಕಾಳಿಯ ಮುಖವಾಡವನ್ನು ಧರಿಸಿ ಕುಣಿಯುವುದು ವಿಶೇಷವಾಗಿದೆ. ಕುಣಿತ ಮುಗಿದ ಬಳಿಕ ಮನೆಯವರು ನೀಡಿದ ಅಕ್ಕಿ, ಭತ್ತ, ತೆಂಗಿನಕಾಯಿ, ಮೆಣಸು, ಹುಳಿ ಇತ್ಯಾದಿಗಳನ್ನು ಪಡೆದುಕೊಳ್ಳುವ ಈ ಮಹಾಕಾಳಿ ತಂಡ ಇನ್ನೊಂದು ಮನೆಗೆ ತೆರಳುತ್ತದೆ.

**೬.೧.೧೩. ನಾಗ ಕೋಲ :**

ನಾಗ ಬನದಲ್ಲಿ ನಡೆಯುವ ಈ ನಾಗಕೋಲ ನಾಗನಿಗೆ ತನು ಹಾಕಿದ ಬಳಿಕ ನಡೆಯುತ್ತವೆ. ನಾಗವೇಷಧಾರಿ ಪಾಣಾರ ಬಿಳಿ ಪಟ್ಟೆ ವಸ್ತ್ರವನ್ನು ಕಚ್ಚೆ ಹಾಕಿ ಮತ್ತು ಮೈಗೆ ಪೂರ್ತಿ ಗಂಧ ಲೇಪಿಸಿಕೊಂಡು ಹಣೆಗೆ ಮೂರು ಅಡ್ಡ ನಾಮಗಳನ್ನು ಲೇಪಿಸಿ ತಲೆಗೆ ಅಡಿಕೆ ಹಾಳೆಯಲ್ಲಿ ಹಾವಿನ ಹೆಡೆಯಾಕಾರದ ಚಿತ್ರವಿರುವ ಕಿರೀಟವನ್ನು ಕಟ್ಟಿಕೊಂಡು ಕಾಲಿಗೆ ಗೆಜ್ಜೆ, ಕುತ್ತಿಗೆಗೆ ಸರ, ಹೂವಿನ ಹಾರ, ಕೈಯಲ್ಲಿ ಹಿಂಗಾರವನ್ನು ಹಿಡಿದು ನರ್ತನಕ್ಕೆ ಸಿದ್ಧಗೊಂಡಿರುತ್ತಾನೆ. ನಾಗನಿಗೆ ತನು ಹಾಕಿದ ಸ್ಥಳದಿಂದ ಹೂ ತೆಗೆದು ನಾಗಕೋಲದ ವೇಷದಾರಿಗೆ ಕೊಡುತ್ತಿದ್ದಂತೆ ತೆಂಬರೆ (ಡಕ್ಕೆ) ಬಡಿತದೊಂದಿಗೆ ನಾಗನ ಹೊಗಳಿಕೆ ಆರಂಭವಾಗುತ್ತದೆ. ಆಗ ನಾಗಕೋಲದ ವೇಷಧಾರಿಗೆ ಆವೇಶ ಬಂದು ಆವೇಶ ಪೂರ್ಣವಾಗಿ ಕುಣಿದು ಕುಪ್ಪಳಿಸುತ್ತಾನೆ. ಕೊನೆಗೆ ಶಾಂತನಾಗಿ ಭಕ್ತರಿಗೆ ಅಭಯದ ನುಡಿ ಕೊಟ್ಟು ಹುತ್ತದ ಮಣ್ಣನ್ನು ಪ್ರಸಾದ ರೂಪದಲ್ಲಿ ಕೊಡುತ್ತಾನೆ.

**೬.೧.೧೪. ಹುಗ್ಗಿ ಪೂಜೆ (ನೇಜ ಪೂಜೆ) :**

ನಾಗಕೋಲ (ನಾಗದರ್ಶನ) ವಾದ ಮೇಲೆ ಸ್ವಾಮಿ ಮನೆಯಲ್ಲಿ (ದೈವದ ಭಂಡಾರ ಇರುವಲ್ಲಿ ) ಹುಗ್ಗಿ ಪೂಜೆ ನಡೆಯುತ್ತದೆ. ಬೆಳ್ತಿಗೆ ಅಕ್ಕಿ, ತೆಂಗಿನ ಕಾಯಿಯ ತುರಿ, ಬೆಲ್ಲ ಮತ್ತು ಹಾಲು ಸೇರಿಸಿ ಹುಗ್ಗಿ (ಕಜ್ಜಾಯ) ಇದನ್ನು ನೇಜ ಎಂದೂ ಕರೆಯಲಾಗುತ್ತದೆ. ಅದೇ ದಿನ ಭತ್ತವನ್ನು ಕುಟ್ಟಿ ಮಾಡಲಾದ ಅಕ್ಕಿಯಿಂದ ಉಪ್ಪು ಹಾಕದ ಮೂರು ದಪ್ಪ ದೋಸೆ, ಭತ್ತ ಕುಟ್ಟುವಾಗ ಸಿಕ್ಕಿದ ತೌಡಿನಿಂದ ಎರಡು ದೋಸೆಗಳನ್ನು ಮಾಡಿ, ನುಗ್ಗೆ ಸೊಪ್ಪು ಮತ್ತು ಹುರುಳಿಯನ್ನು ಬಾಣಲೆಯಲ್ಲಿ ಹುರಿದು ಮಾಡಿದ ಪಲ್ಯ ಇವೆಲ್ಲವನ್ನೂ ಐದು ಎಲೆಗಳಲ್ಲಿ ಮನೆಯಲ್ಲಿ ಬಡಿಸಿ ಸಮರ್ಪಿಸಿ ಪೂಜೆ ನಡೆದು ಮಂಗಳಾರತಿಯಾಗುತ್ತದೆ.

ಆನಂತರ ಕಲಶ ಮತ್ತು ದೀಪದೊಂದಿಗೆ ಎಲ್ಲರೂ ಯಜಮಾನರ ಮನೆಗೆ ತೆರಳಿ ಅಂಗಳದಲ್ಲಿ ಹಾಕಿದ ರಂಗೋಲಿಯ ಮೇಲೆ ಬಾಳೆಎಲೆಯಲ್ಲಿ ಇಡಲಾದ ಬೆಳ್ತಿಗೆ ಅಕ್ಕಿಯ ಮೇಲೆ ಕಳಶವಿಟ್ಟು ಧೂಪದ ಹೊಗೆಯಿಂದ ಶುದ್ಧೀಗೊಳಿಸಿ, ದೀಪ ಬೆಳಗಿಸಿ ಆರತಿ ಎತ್ತಿ ಕಲಶವನ್ನು ವಿಸರ್ಜಿಸಲಾಗುತ್ತದೆ. ನಂತರ ಆರತಿ ಬೆಳಗಿ ದೀಪದ ಬತ್ತಿಯನ್ನು ಒಟ್ಟು ಮಾಡಿ ಮನೆಯೊಳಗೆ ಕೊಂಡೊಯ್ದು ಮನೆಯ ಹೆಂಗಸರು ಉರಿಯುತ್ತಿರುವ ಒಲೆಗೆ ಹಾಕುತ್ತಾರೆ. ಇದನ್ನು "ಅಗ್ಗಿ ಕೊರ್ಪೊದು" ಎನ್ನುತ್ತಾರೆ. ಬಳಿಕ ಕಳಸದ ನೀರನ್ನು ಎಲ್ಲರೂ ತೀರ್ಥದಂತೆ ಸ್ವೀಕರಿಸಿ ಉಳಿದುದನ್ನು ಗದ್ದೆ, ಹಟ್ಟಿ, ಕೃಷಿಗೆ ಸಿಂಪಡಿಸಿ ಉಳಿದುದನ್ನು ಕೆರೆ, ಬಾವಿಗಳಿಗೆ ಎರೆಯುತ್ತಾರೆ. ಹೀಗೆ ನಿರಂತರ ಮೂರು ದಿನಗಳವರೆಗೆ ನಡೆಯುವ ಪಾಣರಾಟವು ಕಲಶ ವಿಸರ್ಜನೆಯೊಂದಿಗೆ ಮುಕ್ತಾಯವಾಗುತ್ತದೆ.

ಪಾಣಾರಾಟದಲ್ಲಿ ಭೂತಕೋಲ, ಡಕ್ಕೆ ಬಲಿ, ನಾಗಕೋಲಗಳಲ್ಲದೆ, ಕೆಮ್ಮುರೋಗ ಬಂದಾಗ ಹೇಳಲ್ಪಟ್ಟ ಹರಕೆಗಾಗಿ ಕೆಮ್ಮನಕೋಲ, ಮಂಗಗಳ ಉಪಟಳ ಹೆಚ್ಚಾದಾಗ ಹೇಳಲ್ಪಟ್ಟ ಹರಕೆಗಾಗಿ ಮಂಗನಕೋಲ, ಹೆಗ್ಗಣಕೋಲ ಇತ್ಯಾದಿ ಕೋಲಗಳನ್ನು ಪಾಣಾರರು ನಡೆಸುತ್ತಾರೆ. ಆದರೆ ಈ ಎಲ್ಲ ಕೋಲಗಳಿಗೆ ಬಣ್ಣ ವೇಷಗಳಿರುವುದಿಲ್ಲ. ಇವುಗಳನ್ನು ಪಾಣಾರಾಟದ ಸಂದರ್ಭ ಮಧ್ಯೆ ಬಿಡುವು ಇದ್ದಾಗ ನಡೆಸುತ್ತಾರೆ. ಅಲ್ಲದೆ ಪಾಣಾರದ ಮಧ್ಯೆ ವಿರಾಮ ಇದ್ದಲ್ಲಿ ನೀರಾಟ ಎಂಬ ಹಾಸ್ಯ ಕೋಲವನ್ನೂ ನಡೆಸುತ್ತಾರೆ.

**೬.೧.೧೫. ದೇಯಿ ನಲಿಕೆ**

ಉಡುಪಿ-ಕುಂದಾಪುರ ಕಡೆಗಳಲ್ಲಿ ನಡೆಯುವ ಪಾಣಾರಾಟದಂತೆ ಕಾರ್ಕಳ, ಬೆಳ್ತಂಗಡಿ ಕಡೆಗಳಲ್ಲಿ ದೇಯಿನಲಿಕೆಯೆಂಬ ಇನ್ನೊಂದು ರೀತಿಯ ದೈವದ ಆರಾಧನೆ ನಡೆಯುತ್ತದೆ. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಮಾತ್ರವೇ ನಡೆಸುವ ಈ ದೇಯಿ ನಲಿಕೆ ದೇವಿಯ ವೈದಿಕೇತರ ಆರಾಧನೆಯ ಇನ್ನೊಂದು ಕ್ರಮವಾಗಿದೆ. ಇದರಲ್ಲಿ ದೇವಿಗೆ ಪ್ರಮುಖ ಕೋಲವಾಗಿ ದೇವಿಯ ಇನ್ನಿತರ ಗಣಗಳಿಗೆ ಒಂದರ ನಂತರ ಇನ್ನೊಂದರಂತೆ ಕ್ರಮವಾಗಿ ಕೋಲ ನಡೆಯುತ್ತದೆ. ಯಾವುದಾದರೂ ಗುತ್ತಿನ ಮನೆಯ ವಿಶಾಲ ಗದ್ದೆಗಳಲ್ಲಿ ನಡೆಯುವ ಈ ದೇಯಿ ನಲಿಕೆಯ ಸಂದರ್ಭದಲ್ಲಿ ವಿರಾಮ ಕೊಡದೆ ನಿರಂತರವಾಗಿ ಏನಾದರೊಂದು ಕುಣಿತಗಳನ್ನು ಮಕ್ಕಳಿಂದ ಹಿಡಿದು ಹಿರಿಯರವರೆಗೆ ನಡೆಸಲೇ ಬೇಕೆಂಬ ನಿಯಮವಿರುತ್ತದೆ.

**೬.೧.೧೬. ದೇಯಿನಲಿಕೆಯ ಆರಾಧನಾಕ್ರಮ**

ದೇವಿ ಗುಡಿ ಇರುವ ಗುತ್ತು, ಬೂಡುಗಳ ವಿಶಾಲ ಗದ್ದೆಗಳಲ್ಲಿ ಮಾತ್ರ ಈ ದೇಯಿನಲಿಕೆ ನಡೆಯುತ್ತದೆ. ಲಕ್ಷ್ಮೀ, ಕಾಳಿ, ಸರಸ್ವತಿ ದೇವಿಯರನ್ನು ಮೂರು ದಿವಸಗಳಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರೇ ಪ್ರತಿಷ್ಠಾಪಿಸಿ ನಡೆಯುತ್ತದೆ. ಪ್ರಾಚೀನ ಕಾಲದಲ್ಲಿ ದೇಯಿ ನಲಿಕೆಗೆ ಬ್ರಾಹ್ಮಣರು ಪೌರೋಹಿತ್ಯ ನಡೆಸುವುದು ನಿಷಿದ್ಧವಾಗಿತ್ತು. ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗದ ಪ್ರಮುಖ ಹಿರಿಯರೇ ದೇಯಿ ನಲಿಕೆ ಆರಾಧನೆಯ ಪೌರೋಹಿತ್ಯ ವಹಿಸುತ್ತಿದ್ದರು. ಆದರೆ ಕ್ರಮೇಣ ವೈದಿಕರು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಿಗೆ ಮಾತ್ರವೇ ಮೀಸಲಾಗಿದ್ದ ಈ ದೇಯಿನಲಿಕೆ ಆರಾಧನೆಯನ್ನು ತಮ್ಮ ಸುಪರ್ದಿಗೆ ಪಡೆದುಕೊಳ್ಳುವ ಯತ್ನದಲ್ಲಿ ಈ ಆರಾಧನೆ ತಮ್ಮ ಅಧೀನದಲ್ಲೇ ನಡೆಯಬೇಕೆಂಬ ಉದ್ದೇಶದಿಂದ ಇದರ ಮೇಲುಸ್ತುವಾರಿಯನ್ನು ಇದೀಗ ತಾವೇ ವಹಿಸಿಕೊಳುತ್ತಿದ್ದಾರೆ. ಹೀಗಾಗಿ ಈಗ ದೇಯಿ ನಲಿಕೆ ವೈದಿಕರ ಹೋಮ, ಹವನಾದಿಗಳ ಮೂಲಕ ಉಗ್ರಾಣ ಮೂಹೂರ್ತ ನಡೆದು ಪಕ್ಕದ ಕೆರೆಯಿಂದ ಸರ್ಪಗಳ ಹೆಡೆಯುಳ್ಳ ಚಿತ್ರಗಳಿರುವ ಮಣ್ಣಿನ ಕುಂಭಗಳಲ್ಲಿ ಕಲಶ ನೀರು ತಂದು ಗದ್ದೆಯಲ್ಲಿ ಹಾಕಿರುವ ದೇಯಿಸ್ಥಾನ (ಗುಂಡ)ಕ್ಕೆ ತಂದಾಗ ವೈದಿಕರು ಈ ಕಲಶವನ್ನು ಪ್ರತಿಷ್ಠಾಪಿಸಿ ಕಲಶಪೂಜೆ, ಭತ್ತದ ರಾಶಿಗೆ ಪೊಲಿ ಪೂಜೆ (ಕೂಟಯಿಪೂಜೆ) ನೆರವೇರಿಸಿದ ಬಳಿಕ ನಡೆಯುತ್ತದೆ. ದೇಯಿಸ್ಥಾನದ ಮುಂಭಾಗದಲ್ಲಿ ಎರಡು ಬುಟ್ಟಿಗಳಲ್ಲಿ ಇರಿಸಿದ ಅಕ್ಕಿ ಮತ್ತು ಭತ್ತದ ರಾಶಿಯಲ್ಲಿ ಸ್ವಸ್ತಿಕ ಬರೆದು ವೈದಿಕರು ಧಾನ್ಯ ಲಕ್ಷ್ಮೀ ಪೂಜೆ ಮಾಡುತ್ತಾರೆ. ನಂತರ ಗುತ್ತಿನ ಮನೆಯವರು ಭತ್ತದ ಕಣಜಕ್ಕೆ ಅಕ್ಕಿ,ಭತ್ತ,ಹಣವನ್ನು ಹಾಕಿ ಅಡ್ಡ ಬೀಳುತ್ತಾರೆ. (ಹಿಂದಿನ ಕಾಲದಲ್ಲಿ ಅಕ್ಕಿ, ಭತ್ತ, ಹಣ, ಚಿನ್ನದ ನಾಣ್ಯಗಳನ್ನು ಹಾಕುತ್ತಿದ್ದರು). ನಿರಂತರ ಮೂರು ದಿನ ಈ ರೀತಿಯ ಪೂಜೆಗಳು ನಡೆಯುತ್ತವೆ. ಪ್ರಾಚೀನಕಾಲದಲ್ಲಿ ಈ ಎಲ್ಲಾ ಪೂಜೆಗಳನ್ನು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೇ ನಡೆಸುತ್ತಿದ್ದರು.

**೬.೧.೧೬. ಕೊಡಿ ಏರುವುದು (ಧ್ವಜಾರೋಹಣ)**

ಗುತ್ತಿನ ಮನೆಯ ವಿಶಾಲ ಗದ್ದೆಯಲ್ಲಿ ದೇಯಿಸ್ಥಾನ (ಗುಂಡ)ದ ಮುಂಭಾಗ ಎತ್ತರವಾದ ಕೊಡಿಮರ (ಧ್ವಜಸ್ತಂಭ)ವನ್ನು ಹಾಕಿ ಅದರಲ್ಲಿ ಬಟ್ಟೆಯಿಂದ ಮಾಡಿದ ಉದ್ದವಾದ ಬೇತಾಳವನ್ನು ಕಟ್ಟಿ ಕೆಳಗೆ ಇರಿಸಲಾಗುತ್ತದೆ. ನಂತರ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಹಿರಿಯರು ಕೊಡಿಮರ (ಧ್ವಜಸ್ತಂಭ)ದ ತುದಿಯಲ್ಲಿದ್ದ ಬೇತಾಳವನ್ನು ಹಗ್ಗದಲ್ಲಿ ಏರಿಸುತ್ತಾರೆ. ಇದನ್ನು ಕೊಡಿ ಏರುವುದು (ಧ್ವಜಾರೋಹಣ) ಎನ್ನುತ್ತಾರೆ. ಅಷ್ಟರಲ್ಲಿ ಮರದಿಂದ ತಯಾರಿಸಿದ ದೇವಿ ಮುಗ (ದೇವಿ ಮೂರ್ತಿ)ವನ್ನು ಹೊತ್ತುಕೊಂಡು ಈ ಕೊಡಿಮರದ ಸುತ್ತ ಬಲಿಸುತ್ತು ಬಂದು ಬಳಿಕ ದೇವಿ ಮುಗವನ್ನು ಕೊಡಿಮರದ ಬುಡದಲ್ಲಿ ಇಟ್ಟು ವಿವಿಧ ಭೂತಗಳ ಕೋಲ ಹಾಗೂ ಇತರ ಕುಣಿತಗಳು ರಾತ್ರಿ ಹಗಲೆನ್ನದೆ ನಿರಂತರ ನಡೆಯುತ್ತಲೇ ಇರುತ್ತದೆ. ದೇಯಿನಲಿಕೆ ಆರಾಧನೆಗೆ ಪಾಲ್ಗೊಂಡ ಪ್ರತೀ ಊರಿನ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ಬಗ್ಗೆ ಮಾಹಿತಿ ಪಡಕೊಂಡು ಪ್ರತೀಯೊಬ್ಬರಿಗೂ ಕೋಲ ಕಟ್ಟಲು ಅಥವಾ ಇತರ ಯಾವುದಾದರೊಂದು ಕುಣಿತಕ್ಕೆ ಅವಕಾಶ ನೀಡಲಾಗುತ್ತದೆ. ದೇಯಿಸ್ಥಾನದ ಕೊಡಿಮರದ ಮುಂದೆ ವಾದ್ಯ, ಡೋಲು, ತಾಸೆ, ಕೊಂಬು, ವಾಲಗ, ತೆಂಬರೆಯ ಹಿಮ್ಮೇಳದೊಂದಿಗೆ ಲಕ್ಕೆಸಿರಿ, ಕೊಡಮಣಿತ್ತಾಯ, ಜುಮಾದಿ ಬಂಟ, ಪಿಲಿಚಾಮುಂಡಿ, ಕಿಕ್ಕಂದಾಯ, ಕ್ಷೇತ್ರಪಾಲ, ಬೊಬ್ಬರ್ಯ, ಭಟ್ಟಾರಿ, ಬೈದೆರ್ಲು ಮತ್ತು ಎಲ್ಲಿಯೂ ನೇಮ ನಡೆಯದ ಹೊಸ ಭೂತಗಳಾದ ಕುರೆ ಚಾಮುಂಡಿ, ಕಾಡ್ದೆರ್ಲು, ಬೋಂಟ್ರ, ದುಗ್ಗ–ಬೊಗ್ಗ, ಕಲ್ಲಯೆತ್ಯಾಂಪ, ದೇಯಿಬೈದತಿ, ಬಲಿಕೋಲ, ರಂಬೆಕೋಲ, ಅಜ್ಜಕೋಲ(ಕೊರಗಜ್ಜ) ಮುಂತಾದ ದೈವಗಳಿಗೂ ದೆಯಿನಲಿಕೆಯ ಆರಾಧನೆಯ ಸಂದರ್ಭ ನೇಮ ನಡೆಯುತ್ತದೆ. ಅದಲ್ಲದೆ, ಮಾದಿರ, ಚೆನ್ನು ನಲಿಕೆ, ಬ್ರಾಹ್ಮಣ (ಬ್ರಾಣ ವೇಷ), ಕ್ರೈಸ್ತ, ಮುಸ್ಲಿಂ, ಬಡಗಿ ಮುಂತಾದ ವೇಷ, ಕುಣಿತಗಳೂ ನಡೆಯುತ್ತದೆ. ದೇಯಿನಲಿಕೆ ಆರಾಧನೆಯ ಕೊನೆಯ ದಿನ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಹಿರಿಯರು ಕೊಡಿಜಾಮನೆ(ಧ್ವಜ ಇಳಿಸುವ) ಕಾರ್ಯಕ್ರಮ ನೆರವೇರಿಸಿದ ಬಳಿಕ ಓಕುಳಿಯಾಟ ನಡೆಯುತ್ತದೆ. ಈ ವೇಳೆ ಸೇರಿದ ಎಲ್ಲಾ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು (ಮಕ್ಕಳಿಂದ ಪ್ರಾಯಸ್ಥರವರೆಗೆ)ಪರಸ್ಪರ ಕೆಂಪು, ಹಳದಿ, ನೀಲಿ, ಹಸಿರು ಬಣ್ಣದ ನೀರನ್ನು ಎರಚಿಕೊಂಡು ಓಕುಳಿಯಾಟ ನಡೆಸುತ್ತಾ ಸಂಭ್ರಮಿಸಿ ಕೊನೆಗೆ ದೇಯಿ ನಲಿಕೆ ಆರಾಧನೆ ಮುಕ್ತಾಯಗೊಳ್ಳುತ್ತವೆ.

**೬.೨. ಋತುಮಾನೀಯ ಮಾಂತ್ರಿಕ ಹಿನ್ನೆಲೆಯ ಕುಣಿತಗಳು :**

**೬.೨.೧. ಆಟಿಕಳೆಂಜ**



ತುಳುನಾಡಿನ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ಅತ್ಯಂತ ಪ್ರಾಚೀನ ದೈವಾರಾಧನೆಯ ಪ್ರಮುಖ ದೈವವೆಂದರೆ "ಆಟಿಕಳೆಂಜೆ". "ಕಳೆಂಜೆ" ಎಂದರೆ ಊರಿನ ಮಾರಿ, ಕಷ್ಟ ಕಾರ್ಪಣ್ಯಗಳನ್ನು ಕಳೆಯುವ ಮಹಮ್ಮಾಯಿ ದೇವತೆಯ ಧೂತ ಎಂದರ್ಥ. ತುಳುವಿನಲ್ಲಿ "ಕಳೆ" ಎಂದರೆ ಮಾರಿ ಕಳೆಯುವುದು ಅಥವಾ ತೆಗೆಯುವುದು ಎಂದರ್ಥವಿದ್ದು, "ಜೆ" ಎಂದರೆ ಜೇವತೆ ಎಂದರ್ಥ. ತುಳುವಿನಲ್ಲಿ ಜೇವತೆ ಎಂದರೆ ದೇವತೆ ಎಂದಾಗಿದೆ. ಹಾಗಾಗಿ ಕಳೆಂಜೆ ಎಂದರೆ ಮಾರಿ ಕಳೆಯುವ ಮಹಮ್ಮಾಯಿ ದೇವತೆಯ ಧೂತ ಎಂಬರ್ಥವಿದೆ. ಪ್ರಾಚೀನ ಕಾಲದಲ್ಲಿ ತುಳುವಿನಲ್ಲಿ ಆಟಿ ಎಂದು ಕರೆಯಲ್ಪಡುವ ಆಷಾಡ ಮಾಸದಲ್ಲಿ ವಿಪರೀತ ಮಳೆ, ಚಳಿ, ಗಾಳಿಗಳಿಂದಾಗಿ ಶೀತ, ಜ್ವರ, ಮುಂತಾದ ಕಾಯಿಲೆಗಳು ಹೆಚ್ಚಾಗುತ್ತಿದ್ದವು. ಅದಲ್ಲದೆ ಇನ್ನೊಂದೆಡೆ ಈ ತಿಂಗಳಿನಲ್ಲಿ ವಿಪರೀತ ಮಳೆಯಿಂದಾಗಿ ಕೆಲಸ – ಕಾರ್ಯಗಳಿಗೆ ತೊಡಗಿಕೊಳ್ಳಲು ಸಾಧ್ಯವಾಗದೆ ಮಳೆಗಾಲಕ್ಕೆಂದು ಸಂಗ್ರಹಿಸಿದ್ದ ದವಸ ಧಾನ್ಯಗಳೆಲ್ಲ ಮುಗಿದು ಜನರು ಸಂಕಷ್ಟಕೀಡಾಗಿ ವಿವಿಧ ಖಾಯಿಲೆಗಳಿಂದಾಗಿ ಭಯಗೊಳ್ಳುತ್ತಿದ್ದರು.

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಸ್ವತಃ ನಾಟಿ ವೈದ್ಯರು ಮತ್ತು ಮಾಂತ್ರಿಕ ಮನೋವೈಜ್ಞಾನಿಕ ಚಿಕಿತ್ಸಕರು ಆಗಿದ್ದರಿಂದ ಮುಖ್ಯವಾಗಿ ಮನುಷ್ಯನ ಖಾಯಿಲೆ, ರೋಗ, ರುಜಿನಗಳಿಗೆ, ಹವಾಮಾನದ ವೈಪರೀತ್ಯಕ್ಕಿಂತಲೂ ಮನುಷ್ಯರ ಮನಸ್ಸಿನಲ್ಲಿ ಮೂಡುವ ಅವ್ಯಕ್ತ ಭಯ, ಆತಂಕಗಳೇ ಪ್ರಮುಖ ಕಾರಣವೆಂದು ತಿಳಿದಿದ್ದರು. ಹೀಗಾಗಿ ಮನುಷ್ಯರ ಮನ ಪರಿವರ್ತಿಸಿ ಈ ಭಯ ನಿವಾರಣೆಗೊಳಿಸಲು ಕಳೆಂಜೆ ದೈವ ಮನೆ ಮನೆ ಕುಣಿದು ಅಭಯ ನೀಡುತ್ತಾನೆಂಬ ನಂಬಿಕೆ ಮತ್ತು ಆಚರಣೆಗಳನ್ನು ಈ ಜನಾಂಗ ರೂಢಿಗೆ ತಂದರು. ಅದೇ ರೀತಿ ಸರ್ವರೋಗ ರುಜಿನಗಳ ನಿವಾರಣೆಗೂ ಆಟಿ ಅಮವಾಸ್ಯೆಯ ದಿನ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ವಂಶ ವೃಕ್ಷವಾದ ಪಾಳೆ (ಹಾಳೆ) ಮರದ ತೊಗಟೆಯ ರಸವನ್ನು ಕುಡಿಯಬೇಕೆಂಬ ಪದ್ಧತಿಯನ್ನು ಮೊತ್ತ ಮೊದಲು ಜಾರಿಗೆ ತಂದವರೂ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೇ ಆಗಿದ್ದಾರೆ. ಆಟಿಕಳೆಂಜೆ ದೈವ ಮುಕ್ತಾಯದ ದಿನ ರಾತ್ರಿ ಹೊತ್ತು ಕಡುಬು ಅಥವಾ ರೊಟ್ಟಿ ಅಥವಾ ದೋಸೆ, ಕೋಳಿ ಸಾಂಬಾರನ್ನು ಮೂರು ದಾರಿ ಸೇರುವ ಮರದ ಬುಡದಲ್ಲಿ ತೆಂಗಿನ ಸಿರಿಯಿಂದ ಮಾಡಿದ ಬಲಿ ಅಥವಾ ಬಾಳೆ ಎಲೆಯಲ್ಲಿ ಅಗೇಲು ಬಡಿಸಿ ಮಹಮ್ಮಾಯಿಗೆ ಪ್ರಾರ್ಥಿಸಲಾಗುತ್ತದೆ. ನಂತರ ಕೊಳ್ತಿರಿ (ಎಣ್ಣೆ ಹಚ್ಚಿದ ಬಟ್ಟೆ ಸುತ್ತಿದ ಬಿದಿರಿನ ಕೋಲು) ಹೊತ್ತಿಸಿ ಸ್ನಾನ ಮಾಡಿ ಮಡಿ ವಸ್ತ್ರ ಉಟ್ಟಿದ್ದ ಕಳೆಂಜ ಕಟ್ಟಿದ್ದ ವ್ಯಕ್ತಿಯನ್ನು ಅಲ್ಲಿ ಕುಳ್ಳಿರಿಸಿ ಆತನಿಗೆ ಅನ್ನ, ಕಡುಬು, ಕೋಳಿ ಸಾಂಬಾರನ್ನು ತಿನ್ನಿಸಲಾಗುತ್ತದೆ. ಕೊನೆಗೆ ಆತ ಉಳಿಸಿದ ಅನ್ನ ಸಾಂಬಾರನ್ನು ಅದೇ ಬಲಿಯೊಳಗೆ ಹಾಕಿ ಹಿಂತಿರುಗಿ ನೋಡದೆ ಮನೆಗೆ ಬರಲಾಗುತ್ತದೆ. ಕೆಲವರು ಈ ದೈವವನ್ನು "ಕಳೆಂಜ" ನೆಂದೂ, ಕಳೆಯುವ ಜೇವು (ಗಂಡಸು) ಎಂದು ಮುಂತಾಗಿ ತಮ್ಮದೇ ಆದ ದೃಷ್ಟಿ ಕೋನದಿಂದ ವಿಶ್ಲೇಷಿಸುತ್ತಾರೆ. ಆದರೆ ಆ ದೈವದ ಹೆಸರು "ಕಳಂಜ" ನೆಂದಾಗಲೀ ಅಥವಾ "ಕಳೆಯುವ ಜೇವು" (ಗಂಡಸು) ಎಂದಾಗಲೀ ಸೀಮಿತ ಅರ್ಥದಲ್ಲಿರದೆ ಈ ದೈವದ ಹೆಸರು "ಕಳೆಂಜೆ" ಎಂದಾಗಿದ್ದು ಈತ ಮಹಮ್ಮಾಯಿಯ ಅವತಾರವಾಗಿ ಊರಿನ ಮಾರಿಯನ್ನು ದೂರ ಮಾಡುವ ಧೂತನಾಗಿರುವ ದೈವವಾಗಿದೆ ಎಂಬುದು ಆ ಜನಾಂಗದ ಹಿರಿಯರ ನಂಬಿಕೆಯಾಗಿದೆ.

**೬.೨.೨. ಆಟಿ ಕಳೆಂಜ ದೈವದ ನರ್ತನ ವಿಧಾನ**

ಸೊಂಟಕ್ಕೆ ಇಜಾರ (ಚಲ್ಲಣ), ಮೈಗೆ ಉದ್ದ ತೋಳಿನ ಕೆಂಪು ಅಂಗಿ ಧರಿಸಿ, ತೆಂಗಿನ ಎಳೆ ಸಿರಿಯನ್ನು ತೆಳುವಾಗಿ ಸೀಳಿ ಇಜಾರದ ಮೇಲೆ ಸೊಂಟಕ್ಕೆ ಸುತ್ತಿಕೊಂಡು ಎರಡೂ ಅಂಗೈ ಮೇಲ್ಭಾಗ ಮತ್ತು ರಟ್ಟೆಗಳ ಸುತ್ತ ಸೀಳಲ್ಪಟ್ಟ ಎಳೆ ತೆಂಗಿನ

ಸಿರಿಯ ತುಂಡುಗಳನ್ನು ಕಟ್ಟಿ, ಎದೆ ಸುತ್ತಲೂ ಇದೇ ತೆಂಗಿನ ಎಳೆ ಸಿರಿಯ ಎದೆ ಜವೆರಿಯನ್ನು ಎದೆ ಪಟ್ಟಿಯಂತೆ ಧರಿಸಿಕೊಂಡಿರುತ್ತಾರೆ. ಕಿವಿಗಳ ಸುತ್ತ ತೆಂಗಿನ ಗರಿಯನ್ನು ಸುರುಳಿ ಸುತ್ತಿ ಮಾಡಲಾದ ಕೆಬಿಯಣಿಯನ್ನು, ತಲೆಗೆ ಹಾಳೆ ಮತ್ತು ತೆಂಗಿನ ಸಿರಿಯ ಕಿರೀಟವನ್ನೂ ಕಟ್ಟಿಕೊಂಡಿರುತ್ತಾರೆ. ಅಲ್ಲದೆ ಕುತ್ತಿಗೆ ಸುತ್ತ ಕೇಪುಳು ಹೂವಿನ ಮಾಲೆ ಹಾಕಿಕೊಳ್ಳುತ್ತಾರೆ. ಮುಖಕ್ಕೆ ಹಳದಿ ಬಣ್ಣದ ಅರ್ದಾಲ ಲೇಪಿಸಿ, ಹಣೆಯ ಮೇಲೆ ಬಿಳಿ ಅಥವಾ ಕೆಂಪು ಬಣ್ಣದ ಅಡ್ಡ ನಾಮ ಬಳಿದು ನಡುವೆ ಕಪ್ಪು ಬೊಟ್ಟನ್ನಿಡುತ್ತಾರೆ. ಕಣ್ಣಿನ ಹುಬ್ಬು ಮತ್ತು ರೆಪ್ಪೆಗೆ ಕಾಡಿಗೆ, ಕೆನ್ನೆಗೆ ಮತ್ತು ಗಲ್ಲದ ಕೆಳಗೆ ಕೆಂಪು ಬೊಟ್ಟು ಹಾಕಿ ಅದರ ಸುತ್ತ ಬಿಳಿ ಬಣ್ಣದ ಸಣ್ಣ ಚುಕ್ಕಿಗಳನ್ನಿಟ್ಟು ದಪ್ಪ ಮೀಸೆಯನ್ನು ಹಾಕಿಕೊಂಡಿರುತ್ತಾರೆ. ಕಾಲಿಗೆ ಗೆಜ್ಜೆ ಕಟ್ಟಿ ಕೈಯಲ್ಲಿ ಪನೆ ಛತ್ರವನ್ನು ಹಿಡಿದಿರುತ್ತಾರೆ. ಛತ್ರದ ಅಂಚಿನ ಸುತ್ತ ಸೀಳಲ್ಪಟ್ಟ ಎಳೆ ತೆಂಗಿನ ಸಿರಿಯ ತುಂಡುಗಳನ್ನು ಜರಿಯಂತೆ ನೇತಾಡಿಸುತ್ತಾರೆ. ಆಟಿಕಳೆಂಜೆ ದೈವಕ್ಕೆ ಸಾಮಾನ್ಯವಾಗಿ ಊರಿನ ಬಳೆ ಇಟ್ಟವರು ಕಟ್ಟುವ ನಿಯಮವಿಲ್ಲ.

ಹೀಗಾಗಿ ಯಾರಾದರೂ ಸಣ್ಣ ಪ್ರಾಯದವರೇ ಕಟ್ಟುತ್ತಾರೆ. ಹೀಗೆ ಅಲಂಕಾರಗೊಂಡ ಆಟಿ ಕಳೆಂಜ ದೈವದ ಜೊತೆ ಒಬ್ಬ ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗದ ಹಿರಿಯ ವ್ಯಕ್ತಿ ತೆಂಬರೆ ಹಿಡಿದುಕೊಂಡು ಆಟಿ ತಿಂಗಳಿನಲ್ಲಿ (ಆಷಾಡದಲ್ಲಿ) ತುಳು ನಾಡಿನ ಮನೆ ಮನೆಗಳಿಗೆ ಹೋಗಿ ತೆಂಬರೆ ಬಡಿಯುತ್ತಾ ಆಟಿ ಕಳೆಂಜೆ ದೈವ ಸಂಧಿ ಹೇಳುತ್ತಿದ್ದಂತೆ ಆಟಿ ಕಳೆಂಜೆ ದೈವ ಕುಣಿಯಲು ಆರಂಭಿಸುತ್ತದೆ. ಆಟಿ ಕಳೆಂಜೆ ಮನೆ ಭೇಟಿಯ ವೇಳೆ ಕಳೆಂಜ ದೈವ ಯಾವುದೇ ರೀತಿಯ ಮಾತುಗಳನ್ನಾಗಲೀ, ಮದಿಪುಗಳನ್ನಾಗಲೀ ಕೊಡದೆ ಮೌನವಾಗಿದ್ದು ಕಳೆಂಜ ದೈವದ ಪರವಾಗಿ ದೈವದ ಜೊತೆಗೆ ತೆಂಬರೆ ಹಿಡಿದುಕೊಂಡಿರುವ ವ್ಯಕ್ತಿ ಮಾತನಾಡುತ್ತಾನೆ. ದೈವ ಮನೆ ಮನೆಗೆ ಹೋಗುತ್ತಾ ಅಂಗಳ ಪ್ರವೇಶಿಸುತ್ತಲೇ ತೆಂಬರೆ ಹಿಡಿದುಕೊಂಡಿದ್ದ ಹಿರಿಯ ವ್ಯಕ್ತಿ ತೆಂಬರೆ ಬಡಿದು "ಕಳೆಂಜ ಬೂರೊಂಡೆ" (ಕಳೆಂಜ ಅಡ್ಡ ಬಿದ್ದಿದ್ದಾನೆಂದು ಮನೆಯ ಯಜಮಾನರಿಗೆ ಗೌರವ ಸೂಚಿಸಿ) ಊರ ಮಾರಿ ಕಳೆಪುನ ಕಳೆಂಜನ್ ತಿರ್ಗಪೊ" (ಊರಿನ ಮಾರಿ ಕಳೆಯುವ ಕಳೆಂಜೆ ದೈವವನ್ನು ತಿರುಗಿಸಿ ಕುಣಿಸುತ್ತೇವೆ") ಎಂದು ಹೇಳಿ ತೆಂಬರೆ ಬಡಿಯುತ್ತಾ ಕಳೆಂಜ ದೈವದ ಹುಟ್ಟು – ಕಟ್ಟಿನ ಸಂಧಿ ಹೇಳಿದಾಗ ಕಳೆಂಜ ದೈವ ಕೈಯಲ್ಲಿ ಹಿಡಿದುಕೊಂಡಿರುವ ಪನೆ ಛತ್ರಿಯನ್ನು ತಿರುಗಿಸುತ್ತಾ ಕುಣಿಯುತ್ತಾನೆ. ಸಂಧಿ ಮುಗಿಯುತ್ತಿದ್ದಂತೆ ತೆಂಬರೆ ಬಡಿಯುವ ಹಿರಿಯ ವ್ಯಕ್ತಿ "ಊರಮಾರಿನ್ ಕಳೆದ್, ಇಲ್ಲ್ ಬಾಕಿಲ್, ನರಮಾನಿ, ಕಂಜಿ, ಕೈಕಂಜಿ, ಕಿದೆ, ಕೊಟ್ಯಗ್ ಬರ್ಪಿಂಚಿ ಮಾರಿ – ಬೀರಿನ್ ಕಡಪ ರಾಜ್ಯೊಗು ತಟ್ಟಾದ್ ಪಾರಾದ್ ಕ್ಷೇಮೊಕೊರು ಕಳೆಂಜ ದೈವೊನೆ" (ಊರ ಮಾರಿಯನ್ನು ಕಳೆದು ಮನೆ, ಬಾಗಿಲು, ಮನುಷ್ಯ, ದನ, ಕರು, ಹಟ್ಟಿ, ಕೊಟ್ಟಿಗೆಗೆ ಬರುವ ಮಾರಿ ಕೋಟಲೆಯನ್ನು ಕಡಪ ರಾಜ್ಯ (ಗಡಿಭಾಗಕ್ಕಿಂತ ದೂರ) ಕ್ಕೆ ಎಸೆದು ಕ್ಷೇಮ ಕೊಡು ಕಳೆಂಜ ದೈವವೆ) ಎಂದು ಪ್ರಾರ್ಥಿಸಿ ಕಳೆಂಜಗ್ ಸಾಂತನಿ, ಪೆಲತ್ತರಿ, ಪುಳಿ, ಮುಂಚಿ, ಉಪ್ಪು, ಮಂಜೊಲು, ಅರಿಬಾರ್, ತಾರಾಯಿ, ತುಂಡರ್ವೆ, ಅಗ್ಯರೆ ಒಂಜಿ ಕೂಂಟಗೆ, ಪೂಲು, ಬಚ್ಚಿರೆ, ಕಳೆಂಜನ ಮರ್ಯಾದಿನ್ ಇಲ್ಲದ ಮಲ್ಲ ಪೊಂಜೋವು ಕನತ್ ಕೊರ್ಲೆ"(ಬೇಯಿಸಿದ ಹಲಸಿನ ಬೀಜ, ಹಲಸಿನ ಹಸಿ ಬೀಜ, ಹುಳಿ, ಮೆಣಸು, ಉಪ್ಪು, ಅರಶಿನ, ಅಕ್ಕಿ, ಭತ್ತ, ತೆಂಗಿನಕಾಯಿ, ಬಟ್ಟೆ, ಎಲೆ ಅಡಿಕೆ, ಇತ್ಯಾದಿ ಕಳೆಂಜನ ಮರ್ಯಾದಿಯನ್ನು ತಂದು ಕೊಡಿ ) ಎಂದು ಕೇಳಿಕೊಂಡಾಗ ಮನೆಯ ಯಜಮಾನಿ ಗೆರಸೆಯಲ್ಲಿ ಎಲ್ಲವನ್ನು ತಂದು ಕೊಡುವಳು.

ಈ ಆಟಿ ಕಳೆಂಜೆ ದೈವ ಕಟ್ಟುವ ವಿಧಾನದಲ್ಲಿ ಪ್ರಾದೇಶಿಕ ವ್ಯತ್ಯಾಸಗಳನ್ನು ನಾವು ಕಾಣಬಹುದು. ಬೆಳ್ತಂಗಡಿ, ಬಂಟ್ವಾಳ, ಪುತ್ತೂರು,ಸುಳ್ಯ, ಕಾಸರಗೋಡು, ಮಂಗಳೂರು, ಕಾರ್ಕಳ, ಉಡುಪಿ, ಕಡೆಗಳಲ್ಲಿ ಆಟಿ ಕಳೆಂಜ ದೈವದ ವೇಷ

ಭೂಷಣಗಳಲ್ಲಿ ವ್ಯತ್ಯಾಸವಿದೆ. ಆದರೆ ಕಳೆಂಜೆ ದೈವದ ಹುಟ್ಟು – ಕಟ್ಟು ಹೇಳುವ ಸಂಧಿಯಲ್ಲಿ ಮಾತ್ರ ಯಾವುದೇ ಬದಲಾವಣೆಗಳಿರುವುದಿಲ್ಲ. ಸುಳ್ಯ ಕಡೆಯಲ್ಲಿ ಮಾತ್ರ ಆಟಿ ಕಳೆಂಜೆ ದೈವದ ಜೊತೆ ನೆಕ್ಕಿ ಸೊಪ್ಪಿನ ಸೂಡಿಗಳನ್ನು ಎರಡು ಕೈಯಲ್ಲಿ ಹಿಡಿದುಕೊಂಡು ಸ್ತ್ರೀ ವೇಷ ಧರಿಸಿರುವ "ಕನ್ನಿ" ಎಂಬ ಹೆಸರಿನ ದೈವ ಇದ್ದು ಆಟಿ ಕಳೆಂಜೆ ದೈವದ ಕುಣಿತವಾದ ಬಳಿಕ ಕನ್ನಿ ಕುಣಿತ ನಡೆಯುತ್ತದೆ.

**೬.೨.೩. ಸಾವುಕೋಲ**

ಸತ್ತ ವ್ಯಕ್ತಿಯ ಆತ್ಮ, ಆತನ ಮರಣದ ಬಳಿಕ ಒಮ್ಮೆಲೇ ಬೇರೊಂದು ಕಾಯದಲ್ಲಿ ನೆಲೆಸಿ ಸ್ವತಂತ್ರ ಅಸ್ತಿತ್ವವನ್ನು ಪಡೆದುಕೊಳ್ಳದೆ ಮೃತ ವ್ಯಕ್ತಿಯ "ಆತ್ಮ ಕಾಲೆ, ಕುಲೆ, ಪೀಡೆ (ಪ್ರೇತಾತ್ಮ)" ಗಳ ರೂಪದಲ್ಲಿ ಸುತ್ತುತ್ತಿರುತ್ತದೆ. ಈ ಆತ್ಮಕ್ಕೆ ಉತ್ತರಕ್ರಿಯೆ ಅಥವಾ ಸಾವಿನ ಕ್ರಿಯಾ ವಿಧಾನಗಳು ನಡೆದು ಹದಿನಾರನೇ ಅಗೇಲು ಬಡಿಸಿ ಹದಿನಾರು ಕಾರ್ಣವರ (ಹಿಂದೆ ಮೃತಪಟ್ಟ ಹಿರಿಯರ) ಸಾಲಿಗೆ ಸೇರಿಸಿದ ಬಳಿಕವಷ್ಟೇ ಕಾಲೆ ಅಥವಾ ಆ ಪ್ರೇತಾತ್ಮಕ್ಕೆ ಸದ್ಗತಿ ದೊರಕಿ ಹಿಂದೆ ಮೃತಪಟ್ಟಿದ್ದ ಹಿರಿಯರ ಜೊತೆ "ಕುಲೆ" ಯಾಗಿ ಸೇರುವ ಅರ್ಹತೆ ಪಡೆಯುತ್ತದೆಯೆಂಬ ನಂಬಿಕೆ ತುಳುನಾಡಿನಲ್ಲಿದೆ. ಹೀಗಾಗಿ ಮೃತಪಟ್ಟ ಬಳಿಕ ಮೊದಲು ಕಾಲೆಯಾಗುವ ಆತ್ಮ ಉಪಟಳ ತೊಂದರೆಕೊಡುತ್ತದೆಯೆಂದು ಮೃತ ಪಟ್ಟ ವ್ಯಕ್ತಿಯ ಆತ್ಮದ ಬಗ್ಗೆ ಪ್ರಾಚೀನ ಕಾಲದಿಂದಲೂ ಮೃತಪಟ್ಟ ಕುಟುಂಬದವರ ಸಹಿತ ಸುತ್ತ ಮುತ್ತಲಿನ ಪರಿಸರದಲ್ಲಿ ಭಯ ಭೀತಿ ಆವರಿಸಿರುತ್ತದೆ. ಹಾಗಾಗಿ ಈ ಭಯ ನಿವಾರಣೆಗಾಗಿ ಮತ್ತು ಕಾಲೆಯ ರೂಪದಲ್ಲಿರುವ ಪ್ರೇತಾತ್ಮ ಸದ್ಗತಿ ಹೊಂದಿ ಕುಲೆಯಾಗಿ ಹಿರಿಯ ಆತ್ಮಗಳ ಜೊತೆ ಸೇರಿಕೊಳ್ಳಲಿ ಎಂಬ ಆಶಯದೊಂದಿಗೆ ಮೃತಪಟ್ಟ ವ್ಯಕ್ತಿಯ ಕುಟುಂಬಸ್ಥರು ಉತ್ತರ ಕ್ರಿಯೆಯ ದಿನ "ಸಾವುಕೋಲ"ವನ್ನು ಕೊಡುತ್ತಾರೆ. ಈ ಸಾವುಕೋಲವನ್ನು ನಡೆಸುವವರು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಾದರೂ ಗ್ರಾಮ ದೈವದ ಬಳೆ ತೊಟ್ಟವರಾಗಲೀ ಅಥವಾ ದೊಡ್ಡ ದೈವಗಳಿಗೆ ನೇಮ ಕಟ್ಟುವವರಾಗಲೀ ಸಾವು ಕೋಲದಲ್ಲಿ ಪಾಲ್ಗೊಳ್ಳಬಾರದೆಂಬ ಕಡ್ಡಾಯ ನಿಷೇಧವಿದೆ.

**೬.೨.೪. ಸಾವು ಕೋಲದ ಅಲಂಕರಣ ಮತ್ತು ನರ್ತನ ವಿಧಾನ**

ಮುಖಕ್ಕೆ ಹಳದಿ ಅಥವಾ ನಸು ನೇರಳೆ ಬಣ್ಣದ ಅರ್ದಾಲ ಹಾಕಿ ಕಪ್ಪು ಮೀಸೆ, ಹಣೆಗೆ ಕೆಂಪು ಬಿಳಿ ನಾಮದ ಮುಖವರ್ಣಿಕೆ ಹಾಕಿ, ತಲೆಗೆ ಅಡಿಕೆ ಹಾಳೆಯಿಂದ ತ್ರಿಶೂಲಕಾರದಲ್ಲಿ ಮಾಡಿದ ಕರೀಟವನ್ನು ಮೂರು ಜನರ ವೇಷಧಾರಿಗಳು ಧರಿಸಿರುತ್ತಾರೆ. ಅಲ್ಲದೆ ಕೆಂಪು ಇಚಾರ, ಉದ್ದ ಕೈಯಿರುವ ಕೆಂಪು ಅಂಗಿ ಹಾಕಿ ಹೆಗಲಿಗೆ ಉದ್ದನೆಯ ಕೆಂಪು ಶಾಲನ್ನು ಇಳಿಬಿಟ್ಟು ಸೊಂಟಕ್ಕೆ ಪಟ್ಟಿಕಟ್ಟಿಕೊಂಡು ಎರಡೂ ಕೈಗಳಲ್ಲಿ ತೆಂಗಿನ ಎಳೆಸಿರಿಯನ್ನು ಸೀಳಿ ಮಾಡಲ್ಪಟ್ಟ ಜವರಿ ಅವಾ ಸವಾಲೊ ಹಿಡಿದುಕೊಂಡು ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಸಾವುಕೋಲ ಕುಣಿತಕ್ಕೆ ಸಿದ್ಧವಾಗುತ್ತಾರೆ. ಕೆಲವು ಸಾವುಕೋಲದ ವೇಳೆ ಕೊರಗ ಕುಣಿತವೂ ಮನರಂಜನೆಗಾಗಿ ಹಿಂದೆ ನಡೆಯುತ್ತಿತ್ತು.

ಮೃತ ಪಟ್ಟ ವ್ಯಕ್ತಿಯ ಕುಟುಂಬಸ್ಥರು ನಡೆಸುವ ಉತ್ತರಕ್ರಿಯಾ ವಿಧಿ ವಿಧಾನಗಳಲ್ಲಿ ಸಾವುಕೋಲದ ವೇಷಧಾರಿಗಳು ತೊಡಗಿಕೊಳ್ಳುವುದು ಬಹಳ ವಿಶೇಷವೆನಿಸುತ್ತದೆ. ಯಾವುದೇ ಸಂಧಿ ಮತ್ತು ತೆಂಬರೆಯನ್ನು ಈ ಸಾವು ಕೋಲದಲ್ಲಿ ಬಳಸಬಾರದೆಂಬ ನಿಯಮವಿದೆ. ಅಲ್ಲದೆ ಈ ಸಾವುಕೋಲಕ್ಕೆ ಮೊದಲು ಎಣ್ಣೆ ಬೂಳ್ಯ ಕೊಡುವ ಕ್ರಮವಿರುವುದಿಲ್ಲ. ಬೆಳಗ್ಗೆ ಪ್ರಾರಂಭವಾಗುವ ಮೂರು ವೇಷಧಾರಿಗಳ ಕುಣಿತಗಳು ವಾದ್ಯ, ತಾಸೆ,

ಡೋಲುಗಳ ಹಿಮ್ಮೇಳದೊಂದಿಗೆ ನಡೆಯುತ್ತದೆ. ಈ ಕೋಲಗಳು ನಡೆಯಲು ಆರಂಭವಾದಗ ಮೃತ ಪಟ್ಟ ವ್ಯಕ್ತಿಯ ಕುಟುಂಬಸ್ಥರು ಉತ್ತರ ಕ್ರಿಯಾ ವಿಧಿ ವಿಧಾನಗಳನ್ನು ನಡೆಸಿ ಮೃತ ವ್ಯಕ್ತಿಯ ಹಿರಿಯ ಮಗನನ್ನು ಮನೆ ಬಾಗಿಲ ಮೆಟ್ಟಲಲ್ಲಿ ಕುಳ್ಳಿಸಿರಿಸಿ ಕ್ಷೌರಿಕನಿಂದ ತಲೆ ಬೋಳಿಸಿ, ಸ್ನಾನ ಮಾಡಿಸಿ, ಮೆಟ್ಟಲಲ್ಲಿ ಕುಂಬಳ ಕಾಯಿ ಮತ್ತು ಬಾಳೆಕಾಯಿಯನ್ನು ಕಡಿದು ಆ ತುಂಡುಗಳನ್ನು ಬಾಳೆ ಎಲೆಯಲ್ಲಿ ಅರಶಿನ ಮಿಶ್ರಿತ ಅನ್ನದೊಂದಿಗೆ ಮೃತ ವ್ಯಕ್ತಿಯ ಕುಟುಂಬಸ್ಥರು ಗೋರಿಯ ಕಡೆಗೆ ಹೋಗುವಾಗ ಸಾವುಕೋಲದ ವೇಷಧಾರಿಗಳೂ ಅವರನ್ನೂ ಅನುಸರಿಸಿಕೊಂಡು ಅಲ್ಲಿಗೆ ತೆರಳಿ ಅಲ್ಲೇ ಕುಣಿದು ಬಳಿಕ ಅಲ್ಲೇ ಬಣ್ಣ, ವಸ್ತ್ರಾದಿ ಅಲಂಕಾರಗಳನ್ನು ಕಳಚಿ ಸ್ನಾನ ಮಾಡಿಕೊಂಡು ಆ ಮನೆಗೆ ಬರುತ್ತಾರೆ. ಆದರೆ ಸಾವು ಕೋಲದ ಜೊತೆಗಿರುವ ಕೊರಗ. ವೇಷ ದುಃಖದಲ್ಲಿರುವವರನ್ನು ಕುಣಿದು ಮನರಂಜನೆಗೊಳಿಸುವುದೇ ಇದರ ಉದ್ದೇಶವಾಗಿರುತ್ತದೆ. ಈ ವೇಷಧಾರಿಯೂ ಸಾವುಕೋಲ ನಡೆಸುವವರನ್ನೂ ಅನುಸರಿಸುತ್ತಾನೆ.

**೬.೨.೫. ಕಾಲೆಕೋಲ**

"ಕಾಲೆ" ಎಂದರೆ ಕಪ್ಪಾಗಿದ್ದು ಎಂಬರ್ಥ. ಉದ್ದನೆಯ ಕೂದಲುಬಿಟ್ಟು ಕೋರೆಹಲ್ಲುಗಳೊಂದಿಗೆ ಸದಾ ನಾಲಗೆಯನ್ನು ಹೊರಚಾಚುತ್ತಾ ನೆರಳಿನಂತೆ ಹಿಂಬಾಲಿಸುವ ವಿಕಾರವಾಗಿರುವ ಅಗೋಚರ ದುಷ್ಟ ಶಕ್ತಿಯೇ "ಕಾಲೆ" ಎಂಬ ನಂಬಿಕೆ ತುಳುನಾಡಿನಲ್ಲಿದೆ. ಇದು ಬಾಣಂತಿಕೋಣೆ, ಬಾಣಂತಿ ಸ್ನಾನ ಮಾಡುವ ಬಚ್ಚಲು ಮನೆ, ಸತ್ತ ಮನೆಯಲ್ಲಿ, ಮೃತವ್ಯಕ್ತಿಯನ್ನು ಮಲಗಿಸಿದ ಸ್ಥಳದಲ್ಲಿ, ಹೆಣಸುಟ್ಟ ಸ್ಥಳಗಳನ್ನು ಹೆಚ್ಚಾಗಿ ತನ್ನ ಆವಾಸ ಸ್ಥಾನವನ್ನಾಗಿ ಮಾಡಿಕೊಂಡಿರುತ್ತದೆಯೆಂದು ನಂಬಲಾಗಿದೆ. ಖಾಯಿಲೆಯಲ್ಲಿ ಹಲವು ಸಮಯಗಳಿಂದ ಬಳಲುತ್ತಿದ್ದ ವ್ಯಕ್ತಿ ತೀರಿಕೊಂಡ ಮನೆಯಲ್ಲಿ ಈ ಕಾಲೆ ಬಹಳ ಹೆಚ್ಚು ತೊಂದರೆ ಕೊಡುತ್ತದೆಯೆಂಬ ನಂಬಿಕೆಯಿದೆ. ಅದೇ ರೀತಿ ನಿರ್ಜನ ಪ್ರದೇಶಗಳಲ್ಲಿ ವ್ಯಕ್ತಿ ಸಂಚರಿಸುವಾಗ ವಿಚಿತ್ರ ಕೂಗು, ಸಪ್ಪಳ ಇತ್ಯಾದಿ ರೂಪದಲ್ಲಿ ಈ ಕಾಲೆ ಭಯಗೊಳಿಸಿ ಭೀಕರ ಪೆಟ್ಟುಕೊಟ್ಟರೆ ವ್ಯಕ್ತಿಗೆ ಪಕ್ಷಪಾತ ಆಗುತ್ತದೆ ಎಂಬ ನಂಬಿಕೆ ಇದೆ. ಅದೇ ರೀತಿ, ಕಾಲೆ ಸೋಂಕಾದರೆ ಜ್ವರ, ಭಯ, ಚಿಂತೆಗಳು ವ್ಯಕ್ತಿಯನ್ನು ಕಾಡಿದಾಗ ಮಾಂತ್ರಿಕ ಚಿಕಿತ್ಸಕರಾದ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ನಾಟಿ ವೈದ್ಯರು ಮತ್ತು ಮಾಂತ್ರಿಕ ಜ್ಯೋತಿಷಿಗಳು ಕಾಲೆ ಕೋಲ, ರಾಹು ಗುಳಿಗ ಕೋಲ, ಕಾಲೆ ಬಿಡಿಸುವುದು ಇತ್ಯಾದಿಗಳ ಮೂಲಕ ಮನೋ ವೈಜ್ಞಾನಿಕ ಚಿಕಿತ್ಸೆಯನ್ನು ನಡೆಸುತ್ತಾರೆ. ಹಲವು ರೋಗಗಳಿಗೆ ಮನಸ್ಸೊಳಗೆ ತುಂಬಿಕೊಂಡಿರುವ ಭಯ, ಚಿಂತೆಗಳೇ ಪ್ರಮುಖ ಕಾರಣವೆಂದು ತಿಳಿದುಕೊಂಡಿರುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ನಾಟಿ ವೈದ್ಯರು ರೋಗಗ್ರಸ್ಥ ವ್ಯಕ್ತಿಯ ಮನಸ್ಸಿನೊಳಗೆ ಹುದುಗಿರುವ ಅವ್ಯಕ್ತ ಭಯವನ್ನು ಹೋಗಲಾಡಿಸಿ ಮನ ಪರಿವರ್ತಿಸುವ ಉದ್ದೇಶದಿಂದ ಮನಶಾಸ್ತ್ರೀಯ ನೆಲೆಯಲ್ಲಿ ಕಾಲೆಕೋಲ ಮತ್ತು ರಾಹು ಗುಳಿಗ ಕೋಲದಂತಹಾ ಕೋಲವನ್ನು ಕಟ್ಟುತ್ತಾರೆ.

ಕಾಲೆಕೋಲ ನಡೆಯುವ ಮೊದಲು ಅಂಗಳದಲ್ಲಿ ಜೇಡಿ ಮಣ್ಣು, ಸುಣ್ಣ, ಮಸಿಯ ಮೂಲಕ ಕಾಲೆ ಅಥವಾ ಪ್ರೇತಾತ್ಮದ ಚಿತ್ರವನ್ನು ಬರೆದು ಅದರ ಮುಂದೆ ಬಾಳೆದಿಂಡು ಅಥವಾ ತೆಂಗಿನ ಎಳೆಸಿರಿಯನ್ನು ಉಪಯೋಗಿಸಿ ಮಾಡಿದ ಬಲಿಯನ್ನು ಇಟ್ಟು ಅದರ ಸಮೀಪ ತೆಂಗಿನ ಎಳೆ ಚಿಗುರನ್ನು ತೆಳುವಾಗಿ ಸೀಳಿ ಮಾಡಲ್ಪಟ್ಟ ಸಿರಿ ಮತ್ತು ಕೇಮಳ ಹೂ ಹಾಗೂ ಇತರ ಹೂಗಳಿಂದ ಅಲಂಕರಿಸಲಾಗುತ್ತದೆ. ಅವುಗಳ ಮುಂದೆ ಬಾಳೆ ಎಲೆಯ ತುದಿ ತುಂಡಲ್ಲಿ ಹೊದ್ಲು ಬಡಿಸಿ ಅವುಗಳ ಮೇಲೆ ತೆಂಗಿನಕಾಯಿಗಳ ಎರಡೂ ಭಾಗವನ್ನಿಟ್ಟು ಬಲಿಯ ಒಳಗೆ ಬಾಳೆ ಎಲೆಯ ತುದಿ ತುಂಡಲ್ಲಿ ಹೊದ್ಲು, ತೆಂಗಿನ ಕಾಯಿಯ ಒಂದು ಭಾಗವನ್ನು ಇಟ್ಟಿರುತ್ತಾರೆ. ಅಂಗಳದಲ್ಲಿ ಬರೆದ ಕಾಲೆಯ ಚಿತ್ರಕ್ಕೆ ಬಿಳಿ ಬಟ್ಟೆಯನ್ನು ಪೂರ್ತಿ

ಮುಚ್ಚಲಾಗಿರುತ್ತದೆ. ನಂತರ ಖಾಯಿಲೆಯಿರುವ ವ್ಯಕ್ತಿಯನ್ನು ಸ್ನಾನ ಮಾಡಿಸಿ ಬಲಿ ಇಟ್ಟ ಜಾಗದ ಮುಂದೆ ಮಣೆಯಲ್ಲಿ ಕೂರಿಸುತ್ತಾರೆ. ಆತನ ಪಕ್ಕದಲ್ಲೇ ಮಂತ್ರವಾದಿ ಕುಳಿತು ಅಲ್ಲಿಂದ ಬಲಿಗೆ ಮಂತ್ರ ಹೇಳುತ್ತಾ ಕೇಮಳ ಹೂ ಹಾಕುತ್ತಿರುತ್ತಾನೆ. ಆಗ ಕಾಲೆಯ ವೇಷ ಕುಣಿತಕ್ಕೆ ತೊಡಗುತ್ತದೆ.

**೬.೨.೬. ಕಾಲೆ ಕೋಲದ ಅಲಂಕರಣ ಮತ್ತು ನರ್ತನ ವಿಧಾನ**



ಕಾಲೆಯ ವೇಷಧಾರಿ ಕಪ್ಪು ಬಣ್ಣವನ್ನು ಮುಖಕ್ಕೆ ಬಳಿದು ಹಣೆಗೆ ಬಿಳಿ ನಾಮ ಹಾಕಿ ಕಣ್ಣಿನ ಸುತ್ತ ವೃತ್ತಾಕಾರವಾಗಿ ಬಿಳಿ ಬಣ್ಣಗಳ ಗೆರೆ ಎಳೆದುಕೊಂಡು, ಮೂಗಿನ ತುದಿ, ಕೈ, ಉಗುರುಗಳಿಗೆ ಬಿಳಿ ಬಣ್ಣವನ್ನು ಹಚ್ಚಿಕೊಂಡಿರುತ್ತಾನೆ. ಹಾಳೆಯನ್ನು ಬಾಯಿಯಾಕಾರದಲ್ಲಿ ಕೊಯ್ದು ಅದರ ನಡುವೆ ಹಲ್ಲಿನಂತೆ ಚೂಪಾಗಿ ಕತ್ತರಿಸಿ ಹಲ್ಲುಗಳ ಮಧ್ಯೆ ನಾಲಿಗೆ ಹೊರ ಚಾಚಿಕೊಂಡರುವಂತೆ ಹಾಳೆಗೆ ಕೆಂಪು ಬಣ್ಣ ಬಳಿದು ಸಿಕ್ಕಿಸಿ ಅದನ್ನು ಎರಡೂ ಕಡೆಗಳಿಂದ ಹಗ್ಗದಲ್ಲಿ ಕಿವಿಯ ಮೇಲೆ ತಲೆಯ ಹಿಂದಕ್ಕೆ ಕಟ್ಟಿಕೊಂಡಿರುತ್ತಾನೆ. ದೇಹವಿಡಿ ಕಪ್ಪು ಬಣ್ಣವನ್ನು ಬಳಿದುಕೊಂಡು ತಲೆಗೆ ಪೂರ್ತಿ ಉದ್ದನೆಯ ಜೊಂಕು (ದಡ್ಪಾಳೆ ಎಲೆಯಿಂದ ಮಾಡಲಾದ ತೆಳು ನಾರು) ಅಥವಾ ದಡ್ಡಲ್ ಮರದ ನಾರಿಗೆ ಕಪ್ಪು ಬಣ್ಣ ಕೊಟ್ಟು ಅದನ್ನು ತಲೆಯ ಕೂದಲಂತೆ ಇಳಿ ಬಿಡಲಾಗಿರುತ್ತದೆ. ಕಪ್ಪು ಇಜಾರು ಹಾಕಿ ಅದರ ಮೇಲೆ ಸೊಂಟಕ್ಕೆ ತೆಂಗಿನ ಮಡಲಿಂದ ಸೀಳಲ್ಪಟ್ಟ ತೆಳು ಸಿರಿಯನ್ನು ಕಟ್ಟಿಕೊಂಡು ವೇಷಧಾರಿ ತೆಂಗಿನ ಗರಿಯಿಂದ ತಯಾರಿಸಲಾದ ಸೂಟೆ (ದೀವಟಿಗೆ) ಹಿಡಿದುಕೊಂಡಿರುತ್ತಾನೆ.

ಆದರೆ ಈ ಕಾಲೆಯ ವೇಷಧಾರಿಯ ಸೊಂಟಕ್ಕೆ ಒಂದು ಗಟ್ಟಿ ಹಗ್ಗದಿಂದ ಬಿಗಿದು ಮಂತ್ರವಾದಿ ಕುಳಿತಲ್ಲಿಂದ ಸ್ವಲ್ಪ ದೂರದಲ್ಲಿ ಮರಕ್ಕೆ ಕಟ್ಟಿ ಹಾಕಲ್ಪಟ್ಟಿರುತ್ತದೆ. ರೋಗಿಷ್ಟ ವ್ಯಕ್ತಿಯನ್ನು ಸ್ನಾನ ಮಾಡಿಸಿ ಒಳಗಿಂದ ಕರೆತಂದು ಬಲಿಯ ಮುಂದೆ ಕುಳ್ಳಿರಿಸುತ್ತಿದ್ದಂತೆ ಎರಡು ಜನ ನೆಲದಲ್ಲಿ ಹಾಸಿದ್ದ ಬಿಳಿ ಬಟ್ಟೆಯನ್ನು ಒಮ್ಮೆಲೇ ತೆಗೆದಾಗ ನೆಲದಲ್ಲಿ ಚಿತ್ರಿಸಿದ್ದ ಕಾಲೆಯ ಚಿತ್ರ ಕಾಣುತ್ತದೆ. ನಂತರ ಮೂರು ಕೋಳಿಗಳ ಪೈಕಿ ಒಂದು ಕೋಳಿಯನ್ನು ಬಲಿಗೆ ಕೊಯ್ದು ಅದರ ರಕ್ತವನ್ನು ರೋಗಿಷ್ಠ ವ್ಯಕ್ತಿಯ ಹಣೆಗೆ ತಾಗಿಸಿ ದೂರಕ್ಕೆ ಎಸೆಯಲಾಗುತ್ತದೆ. ಇತ್ತ ಮಂತ್ರವಾದಿ ಮಂತ್ರ ಹೇಳುತ್ತಿದ್ದಂತೆ ಒಬ್ಬ ಸಹಾಯಕ ಕಾಲೆ ವೇಷಧಾರಿಯನ್ನು ಮರದಿಂದ ಬಿಚ್ಚಿಸಿ ಹಗ್ಗವನ್ನು ಕೈಯ್ಯಲ್ಲಿ ಹಿಡಿದುಕೊಂಡು ಬಲಿಯ ಹತ್ತಿರ ಬರುತ್ತಿದ್ದಂತೆ ಕಾಲೆಯ ವೇಷಧಾರಿ ಒಮ್ಮೆಲೇ ಆರ್ಭಟಿಸುತ್ತಾ ರೋಗಿಯ ಮೇಲೆ ಬೀಳಲು ಬರುತ್ತಾನೆ. ಆದರೆ ಸಹಾಯಕ ಹಗ್ಗದಿಂದ ಗಟ್ಟಿಯಾಗಿ ಹಿಡಿದುಕೊಂಡಿರುತ್ತಾನೆ. ಕೊನೆಗೆ ಆವೇಶಗೊಂಡಿದ್ದ ಕಾಲೆ ಶಾಂತ ಸ್ಥಿತಿಗೆ ಬಂದು "ನಾನು ಇನ್ನು ಮುಂದೆ ಇವನ ಶರೀರದಿಂದ ದೂರ ಹೋಗುತ್ತೇನೆ"ಎಂದು ಮಂತ್ರವಾದಿಗೆ ಭಾಷೆಯಿತ್ತು. ಅಭಯ ನೀಡಿ ಅಲ್ಲಿಯೇ ಬೀಳುತ್ತದೆ. ಆಗ

ಪೂಜಾರಿ ನೀರು ಸಿಂಪಡಿಸಿದಾಗ ಸಹಾಯಕರು ಕಾಲೆಯ ವೇಷಧಾರಿಯನ್ನು ಎತ್ತಿಕೊಂಡು ಹೋಗಿ ಮಲಗಿಸುತ್ತಾರೆ. ನಂತರ ಮಂತ್ರವಾದಿ ಬಲಿಯನ್ನು ಎತ್ತಿ ರೋಗಿಷ್ಟ ವ್ಯಕ್ತಿಯ ತಲೆಸುತ್ತಿ ಮೂರು ಬಾರಿ ನೀವಳಿಸಿ ದೂರದ ಕಾಸರಕನ ಮರದ ಬುಡದಲ್ಲಿ ಬಲಿಯನ್ನಿಟ್ಟು ತನ್ನ ಕಂಟಕದಿಂದ ನೆಲಕ್ಕೆ ಮೂರು ಗೆರೆ ಎಳೆದು ದೂರ ಎಲ್ಲಾದರೂ ಹೋಗು, ನಮ್ಮ ಜೊತೆ ಬರಬೇಡ; ಬಂದರೆ ಈ ಕಟಂಕದಿಂದ ತುಂಡು ಮಾಡುತ್ತೇನೆ ಎಂದು ಹೇಳುತ್ತಾನೆ.

ಆಗ ಸೂಟೆಯೊಂದಿಗೆ ಕಾಲೆ ವೇಷಧಾರಿಯೂ ಅಲ್ಲಿಗೆ ಜೊತೆಗೆ ಹೋಗಿ ಬಲಿಗೆ ಸೂಟೆಯನ್ನು ಹಾಕಿ ತನ್ನ ಅಲಂಕಾರ ವೇಷ ಭೂಷಣಗಳನ್ನೆಲ್ಲಾ ಅಲ್ಲಿಯೇ ಕಳಚಿ ಬಲಿಯೊಳಗೆ ಹಾಕಿ ಬರುತ್ತಾನೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಈ ರೀತಿಯ ದೈವಗಳನ್ನಲ್ಲದೆ ಧಾರ್ಮಿಕ ಆಚರಣೆಯ ಇನ್ನೂ ಹಲವಾರು ದೈವಗಳಿಗೆ ಕೋಲ ನೇಮಗಳನ್ನು ಕೈಗೊಳ್ಳುತ್ತಾರೆ. ಸಾವಿರದ ಒಂದು ದೈವಗಳಿಗೆ ಕೋಲ, ನೇಮಗಳನ್ನು ಕೈಗೊಳ್ಳುವ ಅಧಿಕಾರ ಈ ಜನಾಂಗಕ್ಕೆ ಮಾತ್ರವೇ ಇರುವ ಕಟ್ಟಳೆಯಿರುವುದರಿಂದ ಇಂತಿಷ್ಟೇ ದೈವಗಳಿಗೆ ಮಾತ್ರವೇ ಕೋಲ ನೇಮಗಳನ್ನು ನಡೆಸಬೇಕೆಂಬ ನಿರ್ಬಂಧವೇನೂ ಈ ಜನಾಂಗಕ್ಕಿಲ್ಲ.

**೬.೩. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ಬೇಸಾಯ ಸಂಬಂಧಿ ಕುಣಿತಗಳು**

ಬೇಸಾಯ ತುಳುವರ ಬದುಕಿನ ಮೂಲ ನೆಲೆ. ಮಾತ್ರವಲ್ಲ ಬೇಸಾಯ ತುಳುನಾಡಿನ ಸಂಸ್ಕೃತಿಯ ಪ್ರತೀಕವೂ ಹೌದು. ಹಾಗಾಗಿ ತುಳುನಾಡಿನಲ್ಲಿ ಬೇಸಾಯದ ಆರಂಭದಿಂದ ಹಿಡಿದು ಮುಕ್ತಾಯದವರೆಗಿನ ಬೇಸಾಯದ ಕೆಲಸವನ್ನು ಉದ್ಯೋಗವೆಂದು ಪರಿಗಣಿಸದೆ ಅದೊಂದು ಸೇವೆಯೆಂದು ತಿಳಿದು ಅದರಲ್ಲಿ ಭಯ ಭಕ್ತಿಯಿಂದ ತೊಡಗಿಕೊಳ್ಳುತ್ತಾರೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರೂ ಸಹಾ ತುಳುನಾಡ ಸಂಸ್ಕೃತಿಯ ಪ್ರತಿನಿಧಿಗಳಾಗಿರುವುದರಿಂದ ತುಳುವರ ಜೀವನಾಡಿಯಾಗಿ, ಸಾಂಸ್ಕೃತಿಕ ಪ್ರತೀಕವಾಗಿರುವ ಬೇಸಾಯದ ಮಹತ್ವ, ಕಾಲಮಾನೀಯ ವ್ಯವಸಾಯದ ಚಟುವಟಿಕೆಗಳ ಅರಿವು, ಜವಾಬ್ದಾರಿ, ಎಚ್ಚರಿಕೆಗಳನ್ನು ದೈವಾರಾಧನೆಯನ್ನು ಕೈಗೊಳ್ಳುವ ಮೂಲಕ ಮತ್ತು ಇತರ ಕಾಲಮಾನೀಯ ಸಂಬಂಧಿ ಕುಣಿತಗಳನ್ನು ನಡೆಸುವ ಮೂಲಕ ಆಚರಣಾ ಬದ್ಧವಾಗಿ ನಿರ್ದೇಶಿಸುವ ಸಾಮೂಹಿಕ ಹೊಣೆಗಾರಿಕೆಯನ್ನು ವಹಿಸಿಕೊಂಡಿದ್ದಾರೆ. ಹೀಗಾಗಿ ಈ ಜನಾಂಗ ಗದ್ದೆಕೋರಿ (ಕಂಡಕೋರಿ) ಜಾತ್ರೆಯ ದಿನ ಎರುಕೋಲ, ಕುದುರೆಕೋಲ, ಕೊರಗಕೋಲ, ನಾಗನಿಮಕೋಲ (ನಾಗಕೋಲ), ಮೊಕರೆಕೋಲ, ಮಾಲೊದದಕಾರ್ಯೊ, ಪೊಲ್ಸೊಡಿ ನಲಿಕೆ (ಪೊಲಿನಲಿಕೆ) ಮುಂತಾದ ಬೇಸಾಯದ ನಿರ್ದೇಶನಾತ್ಮಕ ಆರಾಧನಾ ಮತ್ತು ಅಚರಣಾ ಬದ್ಧ ಕುಣಿತವನ್ನು ಸೇವೆಯ ರೂಪದಲ್ಲಿ ಕೈಗೊಳ್ಳುತ್ತಾರೆ.

**೬.೩.೧. ಕಂಡಕೋರಿ ಅಥವಾ ಗದ್ದೆಗೋರುವ ಜಾತ್ರೆ**

ಬೇಸಾಯ, ತುಳುವರ ಬದುಕಿನ ಜೀವನಾಡಿ. ಹಾಗಾಗಿ ಬೇಸಾಯವನ್ನು ಅವರು ಪೂಜ್ಯ ಭಾವನೆಯಿಂದ ಕಾಣುವಂತೆ, ಬೆಳೆಬೆಳೆದು ಆಶ್ರಯ ನೀಡುವ ಭೂಮಿಯನ್ನು ಸಹಾ ಅವರು ಅಷ್ಟೇ ಪೂಜ್ಯನೀಯ ಸ್ಥಾನ ನೀಡಿ ಆರಾಧಿಸುತ್ತಾರೆ. ಹಾಗಾಗಿ ಪ್ರಾಚೀನ ಕಾಲದಿಂದಲೂ ಬೇಸಾಯದ ವಿಶಾಲ ಭೂಮಿ ಇದ್ದ ಗುತ್ತು, ಬಾರಿಕೆ, ಬೀಡು, ಅರಮನೆಗಳ ಮನೆತನದವರು ಹರಕೆಯ ರೂಪದಲ್ಲಿ ತಮ್ಮ ವಿಶಾಲ ಬೇಸಾಯದ ಭೂಮಿಯನ್ನು ಊರವರ ಎತ್ತು, ಕೋಣಗಳಿಂದ ಉಳುಮೆ ಮಾಡಿಸಿ, ಅಲ್ಲಿಗೆ ಸ್ಥಳೀಯ ದೇವರನ್ನು ಬರ ಮಾಡಿಸಿ, ದೈವಗಳಿಗೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಂದ ಕೋಲ, ನೇಮಗಳನ್ನು ಕೊಡಿಸಿ, ಬಳಿಕ ಆ ಬೇಸಾಯದ ಗದ್ದೆಗೆ ನಾಟಿ ಮಾಡುತ್ತಾರೆ. ಜಾತ್ರೆಯಂತೆ

ನಡೆಯುವ ಈ ಕ್ರಮವನ್ನು "ಕಂಡಕೋರಿ" ಅಥವಾ "ಗದ್ದೆಗೋರುವ ಜಾತ್ರೆ" (ಕೋರಿ ಜಾತ್ರೆ) ಎಂದು ಮುಂತಾಗಿ ಕರೆಯುತ್ತಾರೆ.

**೬.೩.೨. ಕಂಡಕೋರಿ ಜಾತ್ರೆಗೆ ಆಹ್ವಾನ ನೀಡುವ ಕೊರಗಕೋಲ**

ಹಿಂದೆಲ್ಲಾ ಈಗಿನ ಹಾಗೆ ಸಂಪರ್ಕ ಸಾಧನಗಳಾಗಲೀ ಸಂವಹನ ಮಾಧ್ಯಮಗಳಾಗಲೀ ಇರಲಿಲ್ಲ. ಹೀಗಾಗಿ ಕಂಡಕೋರಿಯ ಹಿಂದು ಮುಂದಿನ ದಿನಗಳಲ್ಲಿ ಇಡೀ ಊರಿನ ಜನತೆಗೆ ಕಂಡದ ಕೋರಿ ನಡೆಯುವ ಸಂಗತಿಯನ್ನು ಮತ್ತು ಅದರ ಮಹತ್ವ ತಿಳಿಸುವ ಜವಾಬ್ದಾರಿ ಈ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಗಿತ್ತು. ಹೀಗಾಗಿ ಅತ್ಯಂತ ಪ್ರಾಚೀನ ಕಾಲದಿಂದಲೂ ಧಣಿಗಳ ಮನೆಯಲ್ಲಿ ಚಾಕರಿ ಮಾಡುತ್ತಾ ಬೇಸಾಯದ ಕೆಲಸದಲ್ಲಿ ತೊಡಗಿಕೊಂಡಿದ್ದು ದೈವತ್ವವನ್ನು ಪಡೆದೆನೆಂದು ನಂಬಲಾಗಿರುವ ಕೊರಗ ಜನಾಂಗದ ಮುಖಂಡನ ಪ್ರತೀಕವಾಗಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ "ಕೊರಗ ಭೂತ"ವೆಂಬ ಕೋಲಕಟ್ಟಿ ಊರಿಡೀ "ಕಂಡ ಕೋರಿ"(ಗದ್ದೆಗೋರುವ ಜಾತ್ರೆ) ಜಾತ್ರೆಯ ದಿನ ಹಾಗೂ ಅದರ ಮಹತ್ವವನ್ನು ತಿಳಿಸುವ ಕೆಲಸವನ್ನು ನಿರ್ವಹಿಸ ತೊಡಗಿ ಅದನ್ನು ಇಂದಿಗೂ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಸಾಮಾನ್ಯವಾಗಿ ಕೊರಗ ದೈವ ದೇಹವಿಡೀ ಕಪ್ಪು ಬಣ್ಣ ಬಳಿದುಕೊಂಡು ಕಪ್ಪು ಮುಖವರ್ಣಿಕೆ ಹಾಕಿ ಸೊಂಟಕ್ಕೆ ಕಪ್ಪು ಇಜಾರ ಧರಿಸಿ ತೆಂಗಿನ ಎಳೆಸಿರಿಯಿಂದ ತಯಾರಿಸಲಾದ ಸಿರಿಯನ್ನು ಸೊಂಟಕ್ಕೆ ಕಟ್ಟಲಾಗಿರುತ್ತದೆ. ಆದರೆ ಗದ್ದೆ ಕೋರಿ ಜಾತ್ರೆಗೆ "ಲೆಪ್ಪು ಹೇಳುವ" (ಆಮಂತ್ರಿಸುವ) ಕೊರಗ ದೈವಕ್ಕೆ ಹಳದಿ ಬಣ್ಣದ ಮುಖವರ್ಣಿಕೆ ಹಾಕಿ ಹುಬ್ಬುಗಳಿಗೆ ಕಪ್ಪು ಬಣ್ಣ ಹಚ್ಚಿ, ಹಣೆಯ ನಡುವೆ ಬಿಳಿ ಬೊಟ್ಟು ಇಟ್ಟು ಅದರ ಸುತ್ತ ಕೆಂಪು ಚುಕ್ಕಿಗಳನ್ನಿಡಲಾಗುತ್ತದೆ. ಅದೇ ರೀತಿ ಕೆನ್ನೆಗಳಿಗೆ ಮತ್ತು ಗಲ್ಲಗಳಿಗೂ ಬಿಳಿ ಬೊಟ್ಟಿನ ಸುತ್ತ ಕೆಂಪು ಚುಕ್ಕಿಗಳನ್ನಿಡಲಾಗಿರುತ್ತದೆ. ಕೆಂಪು ಬಣ್ಣದ ಉದ್ದ ತೋಳಿನ ಅಂಗಿ, ಕೆಂಪು ಬಣ್ಣದ ಇಜಾರ ಅದರ ಮೇಲೆ ಕೆಂಪು, ಹಳದಿ, ಕಪ್ಪು, ಸೀರೆಗಳನ್ನು ಹಗ್ಗದಲ್ಲಿ ನೆರಿಗೆ ಹಿಡಿದು "ನೆರಿಸೀರೆ"ಯನ್ನು ಸೊಂಟಕ್ಕೆ ಕಟ್ಟಲಾಗಿರುತ್ತದೆ. ಕೈಯಲ್ಲಿ ಉದ್ದದ ಕೋಲನ್ನು ಹಿಡಿದುಕೊಂಡು ತಲೆಯ ಕೂದಲನ್ನು ಉದ್ದವಾಗಿ ಬಿಟ್ಟಿರುತ್ತಾರೆ. ಅಥವಾ ಕೆಂಪು ಹಳದಿ, ಬಣ್ಣಗಳ ಬಟ್ಟೆಯನ್ನು ತಲೆಗೆ ಕಟ್ಟಿ ಬೆನ್ನಿನ ಹಿಂಭಾಗದಲ್ಲಿ ತಲೆಗೂದಲಿನಂತೆ ಇಳಿ ಬಿಟ್ಟಿರುತ್ತಾರೆ. ತಲೆಯಲ್ಲಿ ಎರಡು ಕೋಂಟಿನ ಕೊರಗ ಮುಟ್ಟಾಳೆ ಇರುತ್ತದೆ.

ಹೀಗೆ ಅಲಂಕಾರಗೊಂಡ ಕೊರಗ ಕೋಲದ ವೇಷಧಾರಿಯ ಜೊತೆಗೆ ತೆಂಬರೆ ಹಿಡಿದುಕೊಂಡು ಓರ್ವ ವೇಷಧಾರಿಯ ಪತ್ನಿ, ಹಾಗೂ ಸಿಕ್ಕಿದ ವಸ್ತುಗಳನ್ನು ಹಿಡಿದುಕೊಳ್ಳುವ ಇನ್ನೊಬ್ಬ ವ್ಯಕ್ತಿ ಇರುತ್ತಾನೆ ಹೀಗೆ ಮನೆಮನೆಗೆ ತೆರಳುವ ಕೊರಗ ಕೋಲದ ವೇಷಧಾರಿ "ಒಡತ್, ಒಡತ್, ಪಾರ್ದ್ ಪಾರ್ದ್ ನಾಗೆರೆಕಲ್ಲ್, ದುರ್ಗಲ್ ಧೂಪೆ, ಮಣ್ಣಪಾಪು ಯನ್ ಎತ್ತಿ ಬರೊಕ್ಕು ಅವ್ವ ಅಂಚಿ ಆಯೊ, ಯಾನ್ ಇಂಚಿ ಆಯೆ. ಆಣಗ್ ಪೊಣ್ಣಗ್ ಒಂಜರ್ವೆ ಅಪ್ಪೈತ್! (ಓಡಿ ಓಡಿ ನಾಗೆರ ಕಲ್ಲು, ದುರ್ಗಕಲ್ಲಧೂಪೆ, ಮಣ್ಣಪಾಪು ಮೂಂತಾದ ಬೆಟ್ಟಗಳು ನಾನು ಓಡಿ ಬಂದ ರಭಸಕ್ಕೆ ಅವು ಆ ಕಡೆ ಉಳಿದವು, ನಾನು ಈಚೆಗೆ ಆದೆ. ಗಂಡು ಹೆಣ್ಣಿಗೆ ಒಂದೇ ರೀತಿಯ ಬಟ್ಟೆ ಆಯ್ತಲ್ಲಾ ! ಅಪ್ಪಾ !!) ಎಂದು ಮುಂತಾದ ಹಾಸ್ಯ ಮಿಶ್ರಿತ ವಿಶಿಷ್ಟ ಮಾತಿನ ನುಡಿಕಟ್ಟುಗಳ ಮೂಲಕ ಮನರಂಜನೆಯನ್ನೂ, ಗದ್ದೆಗೋರುವ (ಕಂಡಕೋರಿ) ಜಾತ್ರೆಗೆ ಎತ್ತು, ಕೋಣಗಳೊಂದಿಗೆ ತಾವೆಲ್ಲರೂ ಬರಬೇಕೆಂದು ಆಹ್ವಾನವನ್ನೂ ನೀಡುತ್ತಾನೆ.

**೬.೩.೩. ನಾಗನಿಮ (ನಾಗತಣಿಮ)**

"ನಾಗನಿಮ" ಅಥವಾ "ನಾಗತನಿಮ" ಎಂದರೆ ನಾಗನನ್ನು ತಂಪುಗೊಳಿಸುವುದು ಅಥವಾ ನಾಗನನ್ನು ಸಂತೃಪ್ತಿಗೊಳಿಸುವುದು ಎಂಬರ್ಥವಿದೆ. ಗದ್ದೆಗೋರುವ ಜಾತ್ರೆ (ಕಂಡದಕೋರಿ ಜಾತ್ರೆ) ಆರಂಭದ ಮೊದಲನೇ ರಾತ್ರಿಯಿಂದ "ನಾಗನಿಮ" ವಿಧಿ ವಿಧಾನದ ಮೂಲಕ ಆರಂಭವಾಗುತ್ತದೆ. ಗದ್ದೆಗೋರುವ (ಕಂಡಕೋರಿ) ಜಾತ್ರೆ ನಡೆಯುವ ಮನೆಯ ದೈವದ ಚಾವಡಿ ಅಥವಾ ಪ್ರತ್ಯೇಕ ಚಪ್ಪರದಲ್ಲಿ ಮನೆಯ ಯಜಮಾನನ ಉಸ್ತುವಾರಿಯಲ್ಲಿ, ದೈವದ ಪೂಜಾರಿ, ದೈವದ ನೇಮ ಕೈಗೊಳ್ಳುವ ನಲ್ಕೆ, ಅಜಿಲ ಅಥವಾ ಪಾಣಾರ, ಗ್ರಾಮ ದೈವಕ್ಕೆ ಸೂಟೆ (ದೀವಟಿಗೆ) ಹಿಡಿಯುವ "ಕಾಪ" ಎಂದು ಕರೆಯಲಾಗುವ ಮುಗೇರ ಮುಖಂಡ, ಊರಿನ ಗುತ್ತು, ಮಾಗಣೆ, ತಂತ್ರಿಗಳ ಕುಟುಂಬ ಸದಸ್ಯರೆಲ್ಲ ಸೇರಿ ಈ ಆಚರಣೆಯನ್ನು ನಡೆಸುತ್ತಾರೆ.

ದೈವದ ಕೊಡಿಯಡಿ ಚಪ್ಪರದ ಅಟ್ಟಳಿಗೆಯಲ್ಲಿ ಒಂದು ಗೆರಸೆಯಲ್ಲಿ ಒಂದು ಸೇರು ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ, ಎಲೆ ಅಡಿಕೆಗಳನ್ನಿಟ್ಟು ಗಣಪತಿ ಸ್ತುತಿ (ಗಣಪತಿ ಸುತ್ಯೆ) ಮಾಡಿ ಮನೆಯ ಯಜಮಾನನ ನೇತೃತ್ವದಲ್ಲಿ ನಾಗಬಿರ್ಮೆರ್ ಹಾಗೂ ಕುಟುಂಬದ ಮತ್ತು ಜಾಗದ ದೈವಗಳನ್ನು ಪ್ರಾರ್ಥಿಸಲಾಗುತ್ತದೆ. ನಂತರ ಹರಿವಾಣವೊಂದರಲ್ಲಿ ಬೆಳ್ತಿಗೆ ಅಕ್ಕಿಯನ್ನು ಹಾಕಿ ನಾಗಬನದ ಕಡೆಗೆ ಹೊರಡುತ್ತಾರೆ. ಆಗ ಸೇರಿದವರೆಲ್ಲರೂ ಹರಿವಾಣದಲ್ಲಿ ಅಕ್ಕಿ ಹಿಡಿದುಕೊಂಡು ಹೋಗುತ್ತಿರುವ ಮನೆಯ ಯಜಮಾನ ಮತ್ತು ಪೂಜಾರಿ, ನಲ್ಕೆ ಅಜಿಲ ಅಥವಾ ಪಾಣಾರ ಮತ್ತು ಸೂಟೆ (ದೀವಟಿಕೆ) ಹಿಡಿದುಕೊಂಡಿರುವ ಕಾಪರನ್ನು ಹಿಂಬಲಿಸುತ್ತಾರೆ. ಅಷ್ಟರಲ್ಲಿ ಮನೆಯ ಯಜಮಾನ ಗದ್ದೆಗೋರುವ ಜಾತ್ರೆ ನಡೆಯುವ ಗದ್ದೆಯ ಬದುವಿನ ಮೇಲೆ ಪ್ರದಕ್ಷಿಣೆ ಹಾಕುವಾಗ ಊರಿನ ಕಾಪ ಗ್ರಾಮಸ್ಥರಿಂದ ಹರಕೆ ರೂಪದಲ್ಲಿ ಬಂದಿರುವ ಕೊಳ್ತಿರಿ (ಎಣ್ಣೆಯಲ್ಲಿ ಅದ್ದಿದ್ದ ಬಿಳಿ ಬಟ್ಟೆ ಸುತ್ತಿ ಉರಿಸಿಡುವ ಬಿದಿರಿನ ಕೋಲು ಮತ್ತು ಆ ಮನೆಯಲ್ಲೇ ತಯಾರು ಮಾಡಿದ ಕೊಳ್ತಿರಿ)ಗಳನ್ನು ಬೆಂಕಿಹಚ್ಚಿ ಉರಿಸಿ ಆ ಗದ್ದೆಯ ಬದುವಿನ ಸುತ್ತ ನೆಡುತ್ತಾನೆ. ನಂತರ ಮನೆಯ ಯಜಮಾನ ಹರಿವಾಣದ ಅಕ್ಕಿಯೊಂದಿಗೆ ಮತ್ತೆ ಮನೆ ಬಳಿಯಿರುವ ಕೊಡಿಯಡಿಗೆ ಚಪ್ಪರಕ್ಕೆ ಬಂದು ಅಕ್ಕಿ ಇರುವ ಹರಿವಾಣವನ್ನು ದೈವದ ಪೂಜಾರಿಗೆ ನೀಡುತ್ತಾನೆ. ಪೂಜಾರಿ ಆ ತಟ್ಟೆಯನ್ನು ಕಾಪನಿಗೆ ಕೊಡುತ್ತಾನೆ. ಕಾಪ ಮರು ದಿನ ನೇಮ (ಕೋಲ) ಕಟ್ಟುವ ನಲ್ಕೆ ಅಜಿಲ ಅಥವಾ ಪಾಣಾರನಿಗೆ ನಿಗೆ ವೀಳ್ಯದ ರೂಪದಲ್ಲಿ ನೀಡುತ್ತಾನೆ. ಗದ್ದೆಗೋರುವ ಜಾತ್ರೆ ನಡೆಯುವ ಗದ್ದೆಯಲ್ಲಿ ಹರಕೆ ರೂಪದಲ್ಲಿ ಈ ಕೋಳ್ತರಿಯನ್ನು ಉರಿಸಿದರೆ ಆ ಬೆಳಕಿಗೆ ಭೂಮಿ ಮತ್ತು ಕೃಷಿ ಬೆಳೆಗಳಿಗೆ ರಕ್ಷಣೆ ನೀಡುವ ನಾಗ ಅಲ್ಲಿಗೆ ಬಂದು ಬೆಳೆ ಹೆಚ್ಚಾಗುವಂತೆ ಆಶೀರ್ವದಿಸಿ ಹೋಗುತ್ತದೆಯೆಂಬ ನಂಬಿಕೆಯಿದೆ.

**೬.೩.೪. ಪೂಕರೆ ಹಾಕುವುದು**

ನಾಗತಣಿಮ ಆಚರಣೆಯ ಎರಡನೇ ದಿನ ಬೆಳಗ್ಗೆಯಿಂದ ಮಧ್ಯಾಹ್ನದವರೆಗೆ ಗದ್ದೆಗೋರುವ ಜಾತ್ರೆ ಅಥವಾ ಕಂಡದ ಕೋರಿ ಜಾತ್ರೆ ನಡೆಯುತ್ತದೆ. ಊರಿನ ಎತ್ತು ಕೋಣಗಳಿರುವ ಗ್ರಾಮಸ್ಥರು ಹಿಂದೆ ತಾವು ಹೇಳಿಕೊಂಡ ಹರಕೆಯಂತೆ ಆಯಾ ಊರಿನ ಕೊರಗಕೋಲದ ಜೊತೆ ತಮ್ಮ ತಮ್ಮ ಎತ್ತು ಕೋಣಗಳನ್ನು ಗದ್ದೆ ಗೋರುವ ಜಾತ್ರೆ (ಕಂಡದಕೋರಿ ಜಾತ್ರೆ) ನಡೆಯುವಲ್ಲಿಗೆ ತಂದು ಆ ಗದ್ದೆಯಲ್ಲಿ ಕೆಲವರು ಉಳುಮೆ ಮಾಡಿಸಿದರೆ, ಇನ್ನು ಕೆಲವರು ಕಂಬಳ ಸ್ಪರ್ಧೆ ನಡೆಸುತ್ತಾರೆ. ನಂತರ ಮಧ್ಯಾಹ್ನವಾಗುತ್ತಿದ್ದಂತೆ ಗದ್ದೆಗೋರುವ ಜಾತ್ರೆ ನಡೆಸುವ ಮನೆ ಯಜಮಾನ ತನ್ನ ಒಂದು ಜೊತೆ ಎತ್ತು ಅಥವಾ

ಕೋಣಗಳನ್ನು ಗದ್ದೆಯಿಂದ ಮೇಲೆ ಹತ್ತಿಸಿ ಅವುಗಳಿಗೆ ಆರತಿ ಬೆಳಗಿ ಅರಸಿನ ಮತ್ತು ಸುಣ್ಣ ಮಿಶ್ರಿತ "ಕುರ್ದಿ ನೀರನ್ನು ಸಂಪ್ರೋಕ್ಷಿಸಿ ಅವುಗಳನ್ನು ಸ್ನಾನ ಮಾಡಿಸಿ ಮೇಯಲು ಕಟ್ಟುತ್ತಾನೆ. ಬಳಿಕ ಸೇರಿದವರಿಗೆ ಹಾಗೂ ಗಣ್ಯರು ಅತಿಥಿಗಳಿಗೆ ಊಟೋಪಚಾರ ನಡೆಯುತ್ತದೆ. ಇದಾದ ಬಳಿಕ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಂದ ಎರುಕೋಲ ಮತ್ತು ಕುದುರೆಕೋಲ ನಡೆಯುತ್ತದೆ. ನಂತರ ಕೋಲ ಮುಗಿಯುತ್ತಿದ್ದಂತೆಯೇ ಇತ್ತ ಪೊಕರೆ ಹಾಕುವ ಆಚರಣೆ ನಡೆಸಲು ಸಿದ್ಧತೆ ನಡೆಯುತ್ತದೆ.

ತುಳುವಿನಲ್ಲಿ ಹೂವನ್ನು "ಪೂವು" ಎಂದೂ, ಉದ್ದನೆಯ ಕೋಲನ್ನು "ಕರೆ" ಎಂದೂ ಕರೆಯುತ್ತಾರೆ. ಹಾಗಾಗಿ ಹೂವಿನಿಂದ ಅಲಂಕರಿಸಲ್ಪಟ್ಟ ಉದ್ದನೆಯ ಕಂಬವನ್ನು "ಪೂಕರೆ" ಎನ್ನುತ್ತಾರೆ. ಅತೀ ಎತ್ತರದ ಉತ್ತಮ ಜಾತಿಯ ಮರದ ಕಂಬ ಅಥವಾ ಅಡಿಕೆ ಮರದ ಕಂಬಕ್ಕೆ ಅದರ ಮಧ್ಯ ಭಾಗದಿಂದ ಮರದ ತುದಿವರೆಗೆ ನಿರ್ದಿಷ್ಟ ಅಂತರದಲ್ಲಿ "ಗೂರ್ಮ" ಎನ್ನುವ ಕಬ್ಬಿಣದ ಸಾಧನದಲ್ಲಿ ಕಂಬದ ಸುತ್ತಲೂ ತೂತುಗಳನ್ನು ಕೊರೆದು ಅದಕ್ಕೆ ತೆಳುವಾದ ಬಿದಿರು ಅಥವಾ ಅಡಿಕೆ ಮರದ ಸಲಾಕೆಯನ್ನು ಕೆಳ ಭಾಗದಿಂದ ಮೇಲ್ಭಾಗಕ್ಕೆ ಏರಿಕೆಯ ಕ್ರಮದಲ್ಲಿ ಅಳವಡಿಸಲಾಗುತ್ತದೆ. ಈ ಎಲ್ಲಾ ಸಲಾಕೆಗಳು ಕೆಳ ಭಾಗದಲ್ಲಿ ಉದ್ದವಾಗಿಯೂ ಮರದ ಕಂಬದ ಮೇಲ್ಭಾಗದಲ್ಲಿ ಚಿಕ್ಕದಾಗಿಯೂ ಇದ್ದು ಇದು ದೂರದಿಂದ ತ್ರಿಭುಜದಂತೆ ಕಾಣುತ್ತದೆ. ಆದರೆ ಈ ಎಲ್ಲ ಸಲಾಖೆಗಳಿಗೆ ಕೆಳಭಾಗದಿಂದ ತುದಿಯವರೆಗೆ ಹಗ್ಗದಿಂದ ಬೇರೆ ಬೇರೆ ಬಣ್ಣದ ಹೂಗಳನ್ನು ಕಟ್ಟಲಾಗುವುದರಿಂದ ಇದನ್ನು ಪೊಕರೆ ಎಂದು ಹೇಳುವುದು ರೂಢಿಯಲ್ಲಿದೆ.

ಹೀಗೆ ಅಲಂಕರಿಸಲ್ಪಟ್ಟ ಕಂಬವನ್ನು ಗದ್ದೆಗೋರುವ ಜಾತ್ರೆ ನಡೆಯುವ ಗದ್ದೆ (ಕಂಡದಕೋರಿ ಜಾತ್ರೆಯ ಗದ್ದೆ) ಯ ಮಧ್ಯೆ ಶಾಸ್ತ್ರೋಕ್ತವಾಗಿ ನಿಲ್ಲಿಸುವ ಕ್ರಮವಿದೆ. ಇದಕ್ಕಾಗಿ ಗ್ರಾಮದ ಆಚಾರಿ (ಬಡಗಿ) ಈ ಪೊಕರೆ ಕಂಬವನ್ನು ಗದ್ದೆಯ ಮಧ್ಯೆ ಸಾಗಿಸಲು ಒಂದು ವಿಶೇಷ ರೀತಿಯ ಮರದ ಬಂಡಿಯನ್ನು ತಯಾರಿಸಿ ಅದರಲ್ಲಿ ಪೊಕರೆ ಕಂಬವನ್ನಿರಿಸಿ ಆ ಬಂಡಿಯೊಳಗೆ ತಾನು ಕುಳಿತು ಪೊಕರೆ ಕಂಬ ಅಲುಗಾಡದಂತೆ ಹಿಡಿದುಕೊಂಡಿರುತ್ತಾನೆ. ಪೊಕರೆ ಇರುವ ಈ ಬಂಡಿಯನ್ನು ಗದ್ದೆಯವರಗೆ ಸೇರಿದ ಜನರು ಕೊಂಬು, ಕಹಳೆ, ವಾದ್ಯ, ಡೋಲು, ತಾಸೆ, ಹಿಮ್ಮೇಳದೊಡನೆ ತರುತ್ತಾರೆ. ನಂತರ ಆಚಾರಿ ತಯಾರಿಸಿದ ಮರದ ಸಣ್ಣೆ ಯಂತ್ರದ ಮೂಲಕ ಪೊಕರೆ ಕಂಬವಿರುವ ಬಂಡಿ ತನ್ನಷ್ಟಕ್ಕೆ ಗದ್ದೆಯ ಮಧ್ಯೆ ತೆಗೆದಿದ್ದ ಹೊಂಡದ ಬಳಿ ತೆರಳುವಂತೆ ಮಾಡುತ್ತಾನೆ. ಬಳಿಕ ಆ ಹೊಂಡಕ್ಕೆ ಹೂ, ಹಾಲು, ಎಳನೀರು ಮತ್ತು ತೀರ್ಥವನ್ನು ಹಾಕಿ ಪೊಕರೆ ಕಂಬವನ್ನು ಊರಿನ ಕಾಪನ ಸಹಚರರು ನೆಡುತ್ತಾರೆ. ಬಳಿಕ ಪೊಕರೆಯನ್ನು ಹೊತ್ತೊಯ್ದಿದ್ದ ಬಂಡಿಯನ್ನು ಹಿಂದಕ್ಕೆ ಎಳೆದು ತರುತ್ತಾರೆ. ಇದನ್ನು ಪೊಕರೆ ಹಾಕುವುದು ಎನ್ನುತ್ತಾರೆ. ಪೊಕರೆ ಹಾಕಿದ ಬಳಿಕ ಮೆರವಣಿಗೆಯ ಮೂಲಕ ಮನೆಯ ಯಜಮಾನ ತನ್ನ ಮನೆಗೆ ಬಂದು ಮನೆಯೊಳಗೆ ಪ್ರವೇಶಿಸುತ್ತಿದ್ದಂತೆ ಆತನ ಪತ್ನಿ ಮನೆಯ ಮೆಟ್ಟಲಲ್ಲಿ ಅವನ ಕಾಲಿಗೆ ನೀರು ಹಾಕಿ ಆರತಿ ಬೆಳಗಿ ಹಣೆಗೆ ಕಂಕುಮವನ್ನಿಟ್ಟು ಸ್ವಾಗತಿಸುತ್ತಾಳೆ. ಅಷ್ಟರಲ್ಲಿ ಗ್ರಾಮದ ಕಾಪ ಗದ್ದೆಯಿಂದ ಗದ್ದೆ ಉಳುವಾಗ ಹೇಳುವ ಉರಲ್‌ದನಿಯನ್ನು ಹೇಳುತ್ತಾ ಬಂದು ಮನೆಯ ಯಜಮಾನನ ಅಂಗಳದಲ್ಲಿ ನಿಲ್ಲುತ್ತಾನೆ. ಆಗ ಆ ಮನೆಯವರು ಅವನಿಗೆ ಪೊಕರೆಯ ಮರ್ಯಾದೆಯಾಗಿ ಬಾಳೆ ಎಲೆಯಲ್ಲಿ ಅನ್ನ, ಸಾರು ಮತ್ತು ವಿಶೇಷ ತಿನಿಸುಗಳನ್ನು ಕೊಡುತ್ತಾರೆ.

ಜೊತೆಗೆ ಭತ್ತ, ಅಕ್ಕಿ, ತೆಂಗಿನಕಾಯಿ, ಎಲೆ ಅಡಿಕೆ, ಹಣ ಇತ್ಯಾದಿಗಳನ್ನು ಕೊಡಲಾಗುತ್ತದೆ. ಅಷ್ಟರಲ್ಲಿ ಗ್ರಾಮ ದೈವದ ಸೇವೆ ನಡೆಸುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಮುಖ್ಯಸ್ಥ ತೆಂಗಿನ ಎಳೆ ಸಿರಿಯಿಂದ ತಯಾರು

ಮಾಡಿದ "ಬಲಿ"ಯನ್ನು ತಯಾರು ಮಾಡುತ್ತಾನೆ. ನಂತರ ಈ ಬಲಿ ಇಡಲು ಮನೆಯೊಳಗಿಂದ ಮನೆಯವರು ಕುಂಕುಮ ಮತ್ತು ಅರಶಿನದಲ್ಲಿ ಅದ್ದಿದ ಅನ್ನ (ಮುದ್ರೆ), ಒಂದು ಕಲಸೆ ಭತ್ತ ಮತ್ತು ಒಂದು ಕೊಳ್ತಿರಿಯನ್ನು ಭೂತದ ಪೂಜಾರಿಗೆ ತಂದು ಕೊಡುತ್ತಾರೆ. ಆತ ಅದನ್ನು ಪಡೆದುಕೊಂಡು ಗ್ರಾಮ ದೈವದ ಸೇವೆ ನಡೆಸುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಮುಖಂಡನಿಗೆ ತಂದು ಕೊಡುತ್ತಾರೆ. ಅಷ್ಟರಲ್ಲಿ ದೈವದ ಸೇವೆ ಕೈಗೊಳ್ಳುವ ನಲ್ಕೆ ಅಜಿಲ ಅಥವಾ ಪಾಣಾರ ಮುಖಂಡ ಈ ಕೊಳ್ತರಿಯನ್ನು ಬಲಿ ಮುದ್ರೆಯೊಳಗಿಟ್ಟು ಅದನ್ನು ಅಂಗಳದ ಒಂದು ಮೂಲೆಯಲ್ಲಿ ಇಡುತ್ತಾನೆ. ಇದನ್ನು "ಮುದ್ರೆ" ಇಡುವುದು ಎನ್ನುವರು. ಇದಾದ ನಂತರ ಕೋಲ ಕಟ್ಟುವ ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗದವರಿಗೆ ಫಲಹಾರ ನೀಡಿ, ಪಡಿಯರಿ (ಪಡಿಯಕ್ಕಿ) ಕೊಟ್ಟು, ದೈವಕಟ್ಟಲು ಎಣ್ಣೆ ಬೂಳ್ಯ (ಎಣ್ಣೆ ವೀಳ್ಯ) ಕೊಡುತ್ತಾರೆ. ಬಳಿಕ ಕುಟುಂಬದ ಕುಲ ದೈವಗಳಿಗೂ, ಜಾಗದ ದೈವಗಳಿಗೂ, ಇದಾದ ಬಳಿಕ ಎರುಕೋಲ, ಕುದುರೆಕೋಲಗಳು ನಡೆದು ಮರುದಿನ ಬೆಳಗ್ಗೆ "ಮೂಲೊದ ಕಿರಿಯೊ" (ಮೂಲೊಕಾರ್ಯೊ) ನಡೆದು ಕೊನೆಗೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಹೆಂಗಸರಿಂದ "ಮೂರಿಲೆನಲಿಕೆ ನಲಿಕೆ (ಕಲಶನಲಿಕೆ) ನಡೆಯುವುದರೊಂದಿಗೆ ಗದ್ದೆಗೋರುವ ಜಾತ್ರೆ (ಕಂಡದಕೋರಿ ಜಾತ್ರೆ) ಮುಕ್ತಾಯಗೊಳ್ಳುತ್ತದೆ.

**೬.೩.೫. ಎರುಕೋಲ**

ಗದ್ದೆಗೋರುವ ಜಾತ್ರೆಯ ದಿನ ಗ್ರಾಮಸ್ಥರೆಲ್ಲರೂ ತಾವು ಹೇಳಿಕೊಂಡಿರುವ ಹರಕೆಯಂತೆ ತಮ್ಮ ತಮ್ಮ ಎತ್ತು ಕೋಣಗಳನ್ನು ಗದ್ದೆಗೋರುವ ಜಾತ್ರೆ ನಡೆಯುವ ಗದ್ದೆಯಲ್ಲಿ ಉಳುಮೆ ನಡೆಸಿ ಮಧ್ಯಾಹ್ನದ ಹೊತ್ತಿಗೆ ಗದ್ದೆಯಿಂದ ಎತ್ತು ಕೋಣಗಳನ್ನು ಮೇಲೆ ತಂದು ಸ್ನಾನ ಮಾಡಿಸಿ ಮೇಯಲು ಕಟ್ಟಿ ಊಟ ಮಾಡಿ ವಿಶ್ರಾಂತಿ ತೆಗೆದುಕೊಳ್ಳುವ ವೇಳೆ ಹೆಚ್ಚಾಗಿ ಎರುಕೋಲವು ಮನರಂಜನೆಗೋಸ್ಕರ ಮತ್ತು ತಮ್ಮ ತಮ್ಮ ಎತ್ತು ಕೋಣಗಳ ಬಗ್ಗೆ ಹೇಳಿಕೊಂಡಿರುವ ಹರಕೆಯನ್ನು ತೀರಿಸುವ ಉದ್ದೇಶದಿಂದ ನಡೆಯುತ್ತದೆ.

ಎರುಕೋಲದ ವೇಷಧಾರಿಸಿ ಮುಖಕ್ಕೆ ಅರ್ಧಾಲ, ಸಫೇತ್, ಇಂಗಳಿಕ, ಕಪ್ಪು ಇತ್ಯಾದಿ ಬಣ್ಣಗಳಿಂದ ಎತ್ತು ಅಥವಾ ಕೋಣದ ಮುಖದಂತೆ ಬಣ್ಣ ಹಚ್ಚಿಕೊಂಡು ತಲೆಗೆ ಗಟ್ಟಿಯಾಗಿ ಬಟ್ಟೆಯನ್ನು ಕಟ್ಟಿ ಅಡಿಕೆ ಹಾಳೆಯಿಂದ ಮಾಡಲ್ಪಟ್ಟ ಎತ್ತುವಿನ ಮುಖವಾಡವನ್ನು ಧರಿಸಿ ಸೊಂಟಕ್ಕೆ ತೆಂಗಿನ ಎಳೆಸಿರಿಯಿಂದ ತಯಾರಿಸಿದ ಸಿರಿಯನ್ನು ಕಟ್ಟಿಕೊಂಡಿರುತ್ತಾನೆ. ಎದೆಗೆ ತೆಂಗಿನ ಎಳೆ ಸಿರಿಯನ್ನು ಸೀಳಿ ಎದೆ ಸಿರಿಯನ್ನು, ಕೈಯ್ಯಮಣಿಕಟ್ಟಿಗೂ ಎಳೆ ಸಿರಿಯನ್ನು ಕಟ್ಟಿಕೊಂಡಿರುತ್ತಾನೆ. ಅಲ್ಲದೆ ಉದ್ದವಾಗಿರುವ ಆಯತಾಕಾರವಾದ ಬಿದಿರಿನ ಕೋಲನ್ನು ಜೋಡಿಸಿ ಅದನ್ನು ಬೆನ್ನಿನ ಹಿಂಭಾಗಕ್ಕೆ ಅಣಿ (ಪ್ರಭಾವಳಿಯಂತೆ) ಯಂತೆ ಕಟ್ಟಿ, ಎರಡೂ ಹೆಗಲ ಬಳಿಯಿರುವ ಬಿದಿರಿನ ಕೋಲಿಗೆ ಎರಡು "ನಿಶಾನಿ" ಎಂದು ಕರೆಯಲಾಗುವ ಕೆಂಪು ಧ್ವಜವನ್ನು ಕಟ್ಟಲಾಗಿರುತ್ತದೆ. ಮತ್ತು ಇದರ ಸುತ್ತಲೂ ಮೇಲಿಂದ ಕೆಳಗೆ ಇಳಿಯುವಂತೆ ತೆಂಗಿನ ಮಡಲಿನ ಸಿರಿಯನ್ನು ನೇತಾಡಿಸಲಾಗಿರುತ್ತದೆ. ಕಾಲಿಗೆ ಗಗ್ಗರ ಕಟ್ಟಿ ದೈವದಾಗಿ ಕುಣಿಯಲು ಸಿದ್ಧಗೊಳುತ್ತಾನೆ. ಎರಡು ಕೈಗಳಲ್ಲಿ ಸವಾಲೊ (ಚಾಮರ) ಇರುತ್ತದೆ. ಈ ಕೋಲದೊಂದಿಗೆ ಕೊರಗ ವೇಷಧಾರಿಯೂ ಗದ್ದೆ ಉಳುವಾಗ ದನಿ ಕೊಡುವ ಉರಲ ಧಾಟಿಯಂತೆ ಸಂಧಿ ಹೇಳುತ್ತಾ ವಿವಿಧ ವಾದ್ಯ, ತಾಸೆ, ಡೋಲು, ಮುಂತಾದ ವಾದ್ಯಗಳ ಹಿಮ್ಮೇಳದೊಂದಿಗೆ ಕುಣಿಯುತ್ತದೆ. ಇದರ ಬಳಿಕ ಪೊಕರೆಯನ್ನು ಬಂಡಿಗೇರಿಸಲಾಗುತ್ತದೆ. ನಂತರ ಬಂಡಿಗೇರಿಸಲ್ಪಟ್ಟ ಪೊಕರೆಯನ್ನು ಎರುಕೋಲದೊಂದಿಗೆ ಮೆರವಣಿಗೆಯಲ್ಲಿ ತರಲಾಗುತ್ತದೆ. ಗದ್ದೆಯ ಮಧ್ಯೆ ಪೊಕರೆ ಕಂಬ ನೆಟ್ಟ ಬಳಿಕ ಎರುಕೋಲ ಮುಕ್ತಾಯವಾಗುತ್ತದೆ. ಈ

ಕೋಲದಲ್ಲಿ ದೈವದ ಮದಿಮು ಅಥವಾ ನುಡಿ ಕೊಡುವುದಾಗಲೀ, ವಸಯ (೧೬ ಅವತಾರ) ಆಗುವುದಾಗಲೀ ಇರುವುದಿಲ್ಲ.

**೬.೩.೬. ಕುದುರೆಕೋಲ**

ಪೊಕರೆ ಗದ್ದೆಯ ಅಥವಾ ಗದ್ದೆಗೋರುವ ಜಾತ್ರೆ ನಡೆಯುವ ಗದ್ದೆಯ ಸಮೀಪದ ನಾಗಬನದಲ್ಲಿ ಬ್ರಾಹ್ಮಣ ಪುರೋಹಿತರಿಂದ ನಾಗಪೂಜೆ ನಡೆಯುತ್ತಿದ್ದಂತೆ ಇತ್ತ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಂದ ಕುದುರೆ ಕೋಲ ನಡೆಯುತ್ತದೆ. ದೈವ ಕಟ್ಟುವವರು ಕುದುರೆಯ ರೀತಿಯ ಮುಖವರ್ಣಿಕೆ ಮಾಡಿಕೊಂಡು ಬಿದಿರಿನ ಕೋಲುಗಳಿಂದ ಮಾಡಿದ ಕುದುರೆಯ ದೇಹದ ಆಕಾರಕ್ಕೆ ಕೆಂಪು ಬಟ್ಟೆ ಮತ್ತು ಎಳೆ ಸಿರಿಯಿಂದ ಅಲಂಕರಿಸಿ ಆ ರಚನೆಯ ಮುಖಭಾಗಕ್ಕೆ ಅಡಿಕೆ ಹಾಳೆಯಿಂದ ಕುದುರೆಯ ಮುಖ ಮತ್ತು ಬಾಲವನ್ನು ಮಾಡುತ್ತಾರೆ. ಕುದುರೆಯ ರಚನೆಯ ನಡುವೆ ದೈವ ಕಟ್ಟುವ ವ್ಯಕ್ತಿಯ ದೇಹ ನಸುಳುವಷ್ಟು ಜಾಗದ ಅಂತರವಿದ್ದು, ಕುದುರೆಯ ಆಕೃತಿಯ ಒಳಭಾಗ ಪ್ರವೇಶಿಸಿ ದೈವ ಕಟ್ಟುವ ವ್ಯಕ್ತಿ ಈ ಆಕೃತಿಯ ಖಾಲಿ ಸ್ಥಳದ ಮುಂಭಾಗ ಮತ್ತು ಹಿಂಭಾಗಕ್ಕೆ ಜೋಡಿಸಲಾದ ತೆಂಗಿನ ಮಡಲಿನ ದಂಟಿನಿಂದ ಸೀಳಿದ ತೆಳು ನಾರನ್ನು (ಇದನ್ನು ತುಳುವಿನಲ್ಲಿ ಪಾಂದಲ್ ಎನ್ನುತ್ತಾರೆ) ತನ್ನ ಎರಡೂ ಹೆಗಲ ಮೇಲೆ ಹಾಕಿ ಕುದುರೆಯ ಆಕೃತಿಯನ್ನು ತನ್ನ ಸೊಂಟದವರೆಗೆ ಇಳಿಯ ಬಿಟ್ಟಿರುತ್ತಾನೆ. ಹಾಗಾಗಿ ಇದನ್ನು ನೋಡುವಾಗ ಕುದುರೆಯಲ್ಲಿ ಕುಳಿತು ನಡೆದಾಡುವಂತೆ ಕಾಣುತ್ತದೆ.

ದೈವದ ವೇಷಧಾರಿ ಉದ್ದ ಕೈಯ್ಯ ಕೆಂಪು ಅಂಗಿ ಧರಿಸಿ ಕೆಂಪು ಬಣ್ಣದ ಇಜಾರ ಧರಿಸಿರುತ್ತಾನೆ. ಕೈಗಳಿಗೆ ಕೈದಂಡೆ ಮತ್ತು ತೆಂಗಿನ ಮಡಲಿನ ಎಳೆಸಿರಿ ಮತ್ತು ಕೇಪುಳ ಹೂವಿನ ಅಲಂಕರಣವಿರುತ್ತದೆ. ಭುಜಪಟ್ಟಿ, ಕಿವಿಗೆ ಕಿವಿಯಣಿ, ಎದೆಗೆ ಎದೆಪಟ್ಟಿ, ಇದ್ದು ತಲೆಕೂದಲನ್ನು ತಲೆಯ ಮೇಲಕ್ಕೆ ತ್ರಿಕೋನಾಕಾರದಲ್ಲಿ ಕಟ್ಟಿ ಬಟ್ಟೆಯಿಂದ ಸುತ್ತಿ ಗಟ್ಟಿಗೊಳಿಸುತ್ತಾರೆ. ಇದನ್ನು "ಚೆಂಡ್‌ಪಾಡುನೆ" ಎನ್ನುತ್ತಾರೆ. ಹೀಗೆ ಹಾಕಲ್ಪಟ್ಟ ತಲೆಚೆಂಡಿಗೆ ಆಧಾರವಾಗುವಂತೆ ಹಣೆಯ ಮೇಲ್ಭಾಗದಲ್ಲಿ "ತಲೆಪಟ" ಎಂದು ಕರೆಯಲಾಗುವ ಕಿರೀಟವನ್ನು ಕಟ್ಟಲಾಗುತ್ತದೆ. ತಲೆಯ ಹಿಂಭಾಗದಲ್ಲಿ "ಉದುರಿ" ಎಂದು ಕರೆಯಲಾಗುವ ಉದ್ದನೆಯ ಕೃತಕ ಕೂದಲನ್ನು ಬೆನ್ನಿನ ಮೂಲಕ ಇಳಿಯ ಬಿಟ್ಟಿರುತ್ತಾರೆ. ಕೈಗಳಲ್ಲಿ ಸೀಳಲ್ಪಟ್ಟ ತೆಂಗಿನ ಎಳೆಸಿರಿಯ "ಸವಾಲೊ" ಎನ್ನಲಾಗುವ ಚಾಮರವಿರುತ್ತದೆ. ಕಾಲಿಗೆ ಗಗ್ಗರ ಕಟ್ಟಲಾಗುತ್ತದೆ.

ಹೀಗೆ ಅಲಂಕಾರಗೊಂಡ ದೈವ ಕೊಂಬು, ಕಹಳೆ, ಓಲಗ, ವಾದ್ಯ, ತಾಸೆ, ಡೋಲಿನ ಹಿಮ್ಮೇಳನಗಳೊಂದಿಗೆ ನರ್ತಿಸುತ್ತದೆ. ಸಾಮಾನ್ಯವಾಗಿ ಗದ್ದೆಗೋರುವ ಜಾತ್ರೆಯ ವೇಳೆಯಲ್ಲಿ ನಡೆಯುವ ಕುದುರೆಕೋಲದ ಜೊತೆ "ಉರವೆಕೋಲ"ವೂ ನಡೆಯುತ್ತದೆ. "ಉರವೆ" ಎಂದರೆ ತುಳುವಿನಲ್ಲಿ ಉರಗ ಅಥವಾ ನಾಗ ಎಂಬ ಅರ್ಥವಿದೆ. ಮುಖಕ್ಕೆ ಹಾವಿನ ರೀತಿಯಲ್ಲಿ ಬಣ್ಣ ಹಚ್ಚಿ ಮೈಗೆ ಉದ್ದ ಕೈಯ್ಯ ಕೆಂಪಂಗಿ, ಕಾಲಿಗೆ ಕೆಂಪನೆಯ ಇಜಾರ ಹಾಕಿಕೊಂಡು ಸೊಂಟಕ್ಕೆ ಅರ್ಧನೆರಿಗೆ ಹಿಡಿದ ಸಿರೆಯ ನೆರಿಗೆ ಸೊಂಟದ ಮುಂಭಾಗದಲ್ಲಿ ಇಳಿಯಬಿಟ್ಟು ಸೀರೆಯ ಉಳಿದ ಭಾಗವನ್ನು ಸೊಂಟದ ಸುತ್ತ ಸುತ್ತಲಾಗುತ್ತದೆ. ತಲೆಗೆ ಉದ್ದವಾದ ಉದುರಿಯನ್ನು ತಲೆಗೂದಲಂತೆ ಕಟ್ಟಿ ಇಳಿಯ ಬಿಡಲಾಗುತ್ತದೆ. ಕೈಗಳಿಗೆ ಸೀಳಿದ ತೆಂಗಿನ ಗರಿಯ ಸಿರಿಯಿಂದ ಮಾಡಿದ ಹೂವಿನ ಹೆಡೆಯಾಕಾರದ ಹೂವನ್ನು ಕೈದಂಡೆಯೊಂದಿಗೆ ಕಟ್ಟಿ, ಎದೆಗೆ ತೆಂಗಿನ ಎಳೆಸಿರಿಯ ಎದೆ ಸಿರಿಯನ್ನು ಮತ್ತು ಎದೆಗೆ ಎಳೆಸಿರಿಯನ್ನು ಕಟ್ಟಲಾಗುತ್ತದೆ.

ಸಾಮಾನ್ಯವಾಗಿ ಉರವೆ ಕೋಲವನ್ನು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಮಾತ್ರ ಕಟ್ಟಲ್ಪಡುತ್ತಾರೆ. ಕುದುರೆ ಕೋಲದ ಜೊತೆಯಲ್ಲಿ ಇರುವ ಉರವೆಕೋಲ, ಕುದುರೆಕೋಲದ ಜೊತೆಗೆ ಕುಣಿಯುತ್ತದೆ.

**೬.೩.೬. ಮೂಲೊದ ಕಿರಿಯೊ ಅಥವಾ ಮಾಲೊದ ಕಾರ್‍ಯೊ)**

ಸತ್ಯ ಯುಗದಲ್ಲಿ ಕನ್ನಿ ಮತ್ತು ಕಾಡ್ತಿ ಎಂಬ ದೈವಗಳು ಮಣ್ಣಿನ ಸಣ್ಣ ಗಡಿಗೆಯಲ್ಲಿ (ಇದನ್ನು ತುಳುವಿನಲ್ಲಿ ಮೂರಿಲು ಎನ್ನುತ್ತಾರೆ) ನೆಲೆಯಾಗಿ ಕಾರಣಿಕ ಮೆರೆದವು ಎಂಬ ನಂಬಿಕೆಯ ಹಿನ್ನಲೆಯಲ್ಲಿ ಆ ದೈವಗಳನ್ನು ಪ್ರತೀ ಊರಿನ ಗುಡಿ, ಮಾಡ,ಗುಂಡ, ಗುತ್ತು, ಬಾರಿಕೆ, ಬೀಡು, ಅರಮನೆಗಳಲ್ಲಿ ಆರಾಧಿಸಲಾಗುತ್ತದೆ. ಈ ದೈವಗಳು ಗದ್ದೆ, ಬೇಸಾಯದ ರಕ್ಷಣೆಯನ್ನು ಮಾಡಿಕೊಂಡು ಬಂದವೆಂಬ ನಂಬಿಕೆಯ ಹಿನ್ನಲೆಯಲ್ಲಿ ಈಗಲೂ ನಾಗನ ಹೆಡೆಯ ಚಿತ್ರವಿರುವ ಮಣ್ಣಿನ ಗಡಿಗೆಗಳಲ್ಲಿ (ಮಣ್ಣಿನ ಮೂರಿ) ನೀರು ತುಂಬಿಸಿ, ಹೂಗಳಿಂದ ಅಲಂಕರಿಸಿ, ಅಗೇಲು ಬಡಿಸುವ ಮೂಲಕ ಆ ದೈವಗಳನ್ನು ಈಗಲೂ ಆರಾಧಿಸುತ್ತಾರೆ. ಈ ಭೂಮಿ ಉಂಟಾದ ಕಾಲದಿಂದಲೇ ಅಥವಾ ಭೂಮಿಯ ಮೂಲದಿಂದಲೇ ಈ ದೈವಗಳು ಜನತೆಯ ಹಸಿವನ್ನು ನೀಗಿಸುವ ಗದ್ದೆ ಮತ್ತು ಬೇಸಾಯದ ರಕ್ಷಕರಾಗಿ ನೆಲೆಗೊಂಡವೆಂಬ ನಂಬಿಕೆಯಿಂಥ ಈ ದೈವಗಳನ್ನು ಮೂಲೊದ ಕಿರಿಯೊ ಅಥವಾ ಮಾಲೊದ ಕಾರ್‍ಯೊ ಎಂಬಿತ್ಯಾದಿ ರೂಪದಲ್ಲಿ ಆರಾಧಿಸುತ್ತಾರೆ.

ಪ್ರತೀ ಊರಿನ ಗುತ್ತು – ಬಾರಿಕೆ, ಬೀಡು ಅರಮನೆಗಳಲ್ಲಿ ಈ ದೈವಗಳಿಗೆ ಪ್ರತ್ಯೇಕವಾದ ಮೂರಿಲೆ ದೈವದ ಗುಡಿ ಮಾಡವಿರುತ್ತದೆ. ಹಾಗಾಗಿ ಇಲ್ಲಿ ಪ್ರತೀ ಗದ್ದೆಗೋರುವ ಜಾತ್ರೆ ವೇಳೆ ಈ ದೈವಗಳಿಗೆ ಈ ರೀತಿಯಲ್ಲಿ ಹರಕೆ ತೀರಿಸಲಾಗುತ್ತದೆ. ಈ ದೈವಗಳಿಗೆ ಮೂಲೊದಕಾರ್‍ಯೊ ನಡೆದ ಬಳಿಕ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಹೆಂಗಸರು ಇದೇ ದೈವಗಳ ಬಗ್ಗೆ ಸಂಧಿ ಹೇಳುತ್ತಾ ಹಾಡಿ ಕುಣಿದಾಡುತ್ತಾರೆ. ಇದನ್ನು ಮೂರ್ಲೆ ನಲಿಕೆ ಎನ್ನುತ್ತಾರೆ. ಕನ್ನಿ ಕಾಡ್ತಿ ದೈವಗಳಿಗೆ ಮೂಲೊಕಾರ್‍ಯೊ ಅಥವಾ ಮೂಲೊದ ಕಾರ್‍ಯೊ ನಡೆಸಿದ ಬಳಿಕ ಆ ಮನೆಯ ಯಜಮಾನ ತನ್ನ ತಲೆಗೆ ಮುಂಡಾಸು ಕಟ್ಟಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಹೆಂಗಸರಿಗೆ ಪ್ರತೀಯೊಬ್ಬರಿಗೂ ಬಳೆ, ಸೀರೆ, ಧೋತ್ರ, ಕುಂಕುಮ, ಎಲೆ ಅಡಿಕೆ, ಎಣ್ಣೆ ಹೂ, ಹಿಂಗಾರಗಳನ್ನು ಕೊಡುವ ಮೂಲಕ ಮೂರ್ಲೆ ಕುಣಿತಕ್ಕೆ ವೀಳ್ಯ ಕೊಡುತ್ತಾನೆ. ಇದನ್ನು ಪಡೆದುಕೊಂಡ ನಲ್ಕೆ, ಅಜಿಲ ಅಥವಾ ಪಾಣಾರ ಹೆಂಗಸರು ಹತ್ತಿರದ ನದಿ, ಕೆರೆ, ಕೊಳಗಳಲ್ಲಿ ಸ್ನಾನ ಮಾಡಿಕೊಂಡು ಬಂದು ಮುಖಕ್ಕೆ ಪೌಡರು, ಕಣ್ಣಿಗೆ ಕಾಡಿಗೆ ಹಚ್ಚಿ, ಹಣೆಗೆ ತಿಲಕ, ತಲೆಗೆ ಹೂ – ಹಿಂಗಾರ ಮುಡಿದು ಯಜಮಾನ ಕೊಟ್ಟ ಹೊಸ ಸೀರೆ ಉಟ್ಟು ಅಲಂಕಾರಗೊಂಡು ಯಜಮಾನನ ಮನೆಯ ಅಂಗಳಕ್ಕೆ ಬರುತ್ತಾರೆ. ಇವರ ಪೈಕಿ ಒಬ್ಬಾಕೆ ತೆಂಬರೆ ಹಿಡಿದು  ಲಯಗತಿಯಲ್ಲಿ ಬಾರಿಸುತ್ತಿದ್ದರೆ ಆ ತಾಳಕ್ಕೆ ಇತರರು ಹಾಡು ಹೇಳುತ್ತಾ ಮೈ ಬಳುಕಿಸಿ ಕುಣಿಯುತ್ತಿರುತ್ತಾರೆ. ಕುಣಿತವೆಲ್ಲ ಮುಗಿದ ಬಳಿಕ ಮನೆ ಯಜಮಾನ ಎಲ್ಲರಿಗೂ ಅಕ್ಕಿ ಅಥವಾ ಭತ್ತ ತೆಂಗಿನಕಾಯಿ, ಎಲೆ ಅಡಿಕೆ, ಉಪ್ಪು, ಮೆಣಸು, ಅರಶಿನ, ಹಣ, ಇತ್ಯಾದಿಗಳನ್ನು ನೀಡುತ್ತಾನೆ.

**೬.೪. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ವಾರ್ಷಿಕಾವರ್ತನದ ಕುಣಿತಗಳು**

**೬.೪.೧. ಸ್ತ್ರೀಯರ ಕುಣಿತಗಳು – ಪೊಲ್ಸೊಡಿ ನಲಿಕೆ (ಪೊಲಿ ನಲಿಕೆ)**

"ಪೊಲ್ಸು" ಎಂದರೆ ತುಳುವಿನಲ್ಲಿ "ಅದೃಷ್ಟ", "ಶುಭ", "ಐಶ್ವರ್ಯ" ಮುಂತಾದ ಹೆಸರುಗಳಿವೆ. "ಒಡಿ" ಎಂದರೆ "ಹೆಚ್ಚುಪುದು" ಎಂದರ್ಥವಿದೆ. ಹಾಗಾಗಿ ಪೊಲ್ಸೊಡಿ ನಲಿಕೆ ಅಥವಾ ಪೊಲ್ಸೊಡಿ ಪೋಪಿನಿ ಎಂದರೆ ಐಶ್ವರ್ಯ ಹೆಚ್ಚಿಸಲು ಕುಣಿಯುತ್ತಾ ಹೋಗುವುದು ಎಂದು ಅರ್ಥವಾಗುತ್ತದೆ. ಅಸ್ಪೃಶ್ಯತೆ ಹೆಚ್ಚಿದ್ದ ಅತ್ಯಂತ ಪ್ರಾಚೀನ ಕಾಲದಲ್ಲೇ ತಮಿಳುನಾಡಿನಲ್ಲಿ

ಪಾಣ, ಪಾಳ್ಣನ್, ಪಾಣನ್ ಎದು ಕರೆಯಲ್ಪಡುತ್ತಿದ್ದ ನಲ್ಕೆ, ಅಜಿಲ ಅಥವಾ ಪಾಣಾರ ಸಮಾಜದ ಗಂಡಸರು ಮತ್ತು ಹೆಂಗಸರು ಮುಂಜಾನೆ ಹೊತ್ತು ಮನೆ ಮನೆಗೆ ಹಾಡು ಹಾಡುತ್ತಾ ಹೋಗುವುದು ಅತ್ಯಂತ ಶುಭ ಶಕುನ ಎಂಬ ನಂಬಿಕೆಯಿತ್ತು. ಇದೇ ನಂಬಿಕೆಯನ್ನು ಪ್ರಾಚೀನ ಕಾಲದಿಂದಲೂ ತುಳುನಾಡಿನ ತುಳುವರೂ ಈ ಸಮುದಾಯದ ಮೇಲೆ ಇರಿಸಿದ್ದರಿಂದ ಅದರಲ್ಲೂ ಈ ಸಮುದಾಯದ ಮಹಿಳೆಯರು ಶುಭ ಶಕುನ, ಅದೃಷ್ಟ, ಐಶ್ವರ್ಯ, ಎಂದು ಮುಂತಾದ ನಂಬಿಕೆಗಳಿವೆ. ಹೀಗಾಗಿ ಕುಣಿತದ ಮೂಲಕ ಅದೃಷ್ಟ ಅಥವಾ ಐಶ್ವರ್ಯ ಹೆಚ್ಚಿಸುವ ಪೊಲ್ಸೊಡಿ ಪೋಪಿನಿ ಅಥವಾ ಪೊಲ್ಸೊಡಿ ನಲಿಕೆ ಆರಾಧನಾ ಕುಣಿತವಾಗಿ ಪರಿಗಣಿಸಲ್ಪಟ್ಟಿದೆ.

**೬.೪.೨. ಪೊಲ್ಸೊಡಿ ನಲಿಕೆ (ಪೊಲಿ ನಲಿಕೆ) ಯ ವಿಧಾನ**

ಮಂಗಳೂರು, ಮೂಡಬಿದ್ರಿ, ಕಾರ್ಕಳ, ಉಡುಪಿಯ ಕೆಲವು ಭಾಗಗಳಲ್ಲಿ ಈ ರೀತಿಯ ಕುಣಿತವಿದ್ದು ಸಪ್ಟೆಂಬರ್ ಅಥವಾ ಅಕ್ಟೋಬರ್ ತಿಂಗಳಲ್ಲಿ ಮೊದಲಿನ ಭತ್ತದ ಕಟಾವು (ಏಣೇಲು ಬೆಳೆ) ಸಂದರ್ಭ ಮೊದಲು ಕೊಯ್ದ ಭತ್ತದ ತೆನೆಯ ಐದು ಸೂಡಿ(ಹಿಡಿ) ಯನ್ನು ದೀಪ ಬೆಳಗಿ ಮನೆಯ ಮಾಡಿಗೆ (ಛಾವಣಿಗೆ) ಎಸೆಯುತ್ತಾರೆ. ನವೆಂಬರ್ ತಿಂಗಳು ಕಳೆದ ಬಳಿಕ ಒಂದು ದಿನ ಹಗಲು ನಲ್ಕೆ ಅಜಿಲ ಅಥವಾ ಪಾಣಾರ ಹೆಂಗಸರು ತುಳುನಾಡಿನ ಭತ್ತದ ಕಾರಣಿಕ ಮಹತ್ವ ತಿಳಿಸುವ ಸಂಧಿಯನ್ನು ಹಾಡುತ್ತಾ ತೆಂಬರೆ ಬಡಿಯುತ್ತಾ ಗದ್ದೆ ಇರುವ ಮನೆ ಮನೆಗೆ ಬಂದು ಕುಣಿಯುತ್ತಾರೆ. ಕುಣಿತ ನಿಂತ ಬಳಿಕ ಮಾಡಿನಲ್ಲಿದ್ದ ಭತ್ತದ ಸೂಡಿಗಳನ್ನು ಆ ಮನೆಯವರು ಕೆಳಗೆ ತುಳಸೀ ಕಟ್ಟೆಯ ಮುಂಭಾಗದಲ್ಲಿ ಇರಿಸಿದಾಗ ಈ ಪೊಲ್ಸೊಡಿ ನಲಿಕೆಯ ಹೆಂಗಸರು ಭತ್ತದ ಸೂಡಿಯಿಂದ ಆ ಭತ್ತವನ್ನು ಬೇರ್ಪಡಿಸಿ ಭತ್ತವನ್ನು ಹಾಗೂ ಅದರ ಜೊತೆ ಅಕ್ಕಿ, ತೆಂಗಿನಕಾಯಿ ಹಣವನ್ನು ಪಡೆದುಕೊಂಡು ತೆರಳುತ್ತಾರೆ.

**೬.೪.೩. ಮಾದಿರೊ ನಲಿಕೆ**

ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಪ್ರಾಚೀನ ಕಾಲದಿಂದಲೂ ಸಾಮಾಜಿಕ ಹಿತಚಿಂತಕರೂ ವ್ಯಕ್ತಿಗತ ಮನೋವಿಶ್ಲೇಷಕರೂ ಆಗಿದ್ದರಿಂದ ಓದು ಬರಹ ಇಲ್ಲದಿದ್ದರೂ ಜನರ ಬಡತನ, ನೋವು, ಹಸಿವು, ದಬ್ಬಾಳಿಕೆ, ಗಂಡು – ಹೆಣ್ಣಿನ ತಲ್ಲಣ, ನೋವು ನಲಿವು, ಆಸೆ ಆಕಾಂಕ್ಷೆ ಇತ್ಯಾದಿ ಅಂಶಗಳೆಲ್ಲದರ ಬಗ್ಗೆಯೂ ತಮ್ಮ ಸ್ಮರಣ ಶಕ್ತಿಯ ಮೂಲಕ ಕ್ಷಣ ಮಾತ್ರದಲ್ಲೇ ಹಾಡು ಕಟ್ಟಿ, ರಾಗ, ತಾಳ, ಹಿಮ್ಮೇಳಗಳೊಂದಿಗೆ ಆ ಹಾಡಿಗೆ ನಾಟ್ಯವಾಡುವ ಕಲಾತ್ಮಕತೆಯನ್ನು ರಕ್ತಗತವಾಗಿ ರೂಢಿಸಿಕೊಂಡವರಾಗಿದ್ದಾರೆ. ಇದಕ್ಕೆ ಈ ಜನಾಂಗದ ಹೆಂಗಸರೇ ನಡೆಸುವ ಕುಣಿತಗಳಾದ ಮಾದಿರೊನಲಿಕೆ, ಚೆನ್ನುಕುಣಿತ, ಕನ್ಯಾಪು, ಜೋಗಿ–ಪುರುಷನಲಿಕೆ ಇತ್ಯಾದಿಗಳೇ ನಿದರ್ಶನವಾಗಿದೆ.

**೬.೪.೪. ಮಾದಿರೊ ನಲಿಕೆಯ ವಿಧಾನ (ಉಲರ್ಾಟೊ)**

"ಮಾದಿರೊ" ಎಂದರೆ ತುಳುವಿನಲ್ಲಿ ಸುಂದರಿ, ಚೆಲುವೆ ವೆಂಬರ್ಥವಿದೆ. ಹಾಗಾಗಿ ಈ ಮಾದಿರೊ ನಲಿಕೆ ಸುಂದರವಾದ ಹೆಣ್ಣೊಬ್ಬಳ ಬದುಕಿನ ಎಲ್ಲಾ ಆಯಾಮಗಳನ್ನು ಪ್ರತಿಬಿಂಬಿಸುವ ಗೀತ ಗಾಯನ ನೃತ್ಯವಾಗಿದೆ. ಪ್ರಾಚೀನ ಕಾಲದಲ್ಲಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಮಹಿಳೆಯರು ಮಾದಿರ ಕುಣಿತವನ್ನು ಬೇಸಿಗೆ ಕಾಲದಲ್ಲಿ ಮನೆ ಮನೆಗೆ ಹೋಗಿ ನಡೆಸುತ್ತಿದ್ದರು. ಈ ಮಾದಿರ ನಲಿಕೆ ತಂಡದಲ್ಲಿ ಇಂತಿಷ್ಟೇ ಜನರಿರಬೇಕೆಂಬ ನಿಯಮವಿಲ್ಲ. ತಂಡದಲ್ಲಿ ಒಬ್ಬಾಕೆ ಮುಖಕ್ಕೆ ಬಿಳಿ ಅಥವಾ ಹಳದಿ ಬಣ್ಣ ಹಚ್ಚಿ, ಹಣೆಗೆ ಕೆಂಪು ಬೊಟ್ಟು, ಕಣ್ಣಿಗೆ ಕಾಡಿಗೆ, ಗಲ್ಲಕ್ಕೆ ಚುಕ್ಕಿಯನ್ನಿಟ್ಟು ತುಟಿಗೆ ಕೆಂಪು ಬಣ್ಣವನ್ನು ಹಚ್ಚಿಕೊಂಡು ತಲೆ ಬಾಚಿ ತಲೆ ಕೂದಲು ಉದ್ದ ಕಾಣಲು "ಉದುರಿ" ಎಂಬ ಕೃತಕ ತಲೆಗೂದಲನ್ನು

ನೆಯ್ದು ಇಳಿ ಬಿಟ್ಟಿರುತ್ತಾರೆ. ಸೀರೆಯನ್ನು ಸೊಂಟದ ಮುಂಭಾಗದಲ್ಲಿ ನೆರಿಗೆ ಬೀಳುವಂತೆ (ಭರತನಾಟ್ಯದವರು ಉಡುವ ಸೀರೆಯ ಮುಂಭಾಗ ನೆರಿಗೆ ಇರುವಂತೆ) ಉಟ್ಟು ರವಿಕೆ ತೊಟ್ಟು, ಕೈಬಳೆ, ಕಾಲಿಗೆ ಗೆಜ್ಜೆ ಕಟ್ಟಿಕೊಂಡಿರುತ್ತಾಳೆ. ಇವಳು ಸುಂದರಿಯಾದ ಮಾದಿರೊ ಆಗಿರುತ್ತಾಳೆ. ಈ ತಂಡದ ಉಳಿದವರೂ ಸಹಾ ಸೀರೆಯನ್ನು ಅದೇ ರೀತಿ ಉಟ್ಟುಕೊಂಡಿತ್ತಾರಾದರೂ "ಮಾದಿರೊ" ನಷ್ಟು ಅಲಂಕಾರಗೊಂಡಿರುವುದಿಲ್ಲ. ಅತ್ಯಂತ ಪ್ರಾಚೀನ ಕಾಲದಲ್ಲಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದ ಮಹಿಳೆಯರ ಇಂತಹಾ ಕುಣಿತಗಳು ತುಳುನಾಡಿನೆಲ್ಲೆಡೆ ಅತ್ಯಂತ ಪ್ರಭಾವಿತಗೊಂಡು ವೈಶಿಷ್ಟವೆನಿಸಿತ್ತು. ಆಗಿನ ಮಾದಿರೊ ನಲಿಕೆ ತಂಡದ ಮಹಿಳೆಯರ ವೇಷ ಭೂಷಣವೂ ತೀರಾ ಭಿನ್ನವಾಗಿತ್ತು. ಆಗ ರವಿಕೆ ಧರಿಸದೇ ಇರುತ್ತಿದ್ದ ಮಹಿಳೆಯರು ಸೀರೆಯನ್ನು ಸೊಂಟದ ಮುಂಭಾಗ ನೆರಿಗೆ ಹಾಕಿ (ಇದನ್ನು ಕತ್ತರಿ ನೆರಿಗೆ ಎನ್ನುತ್ತಿದ್ದರು) ಅದೇ ರೀತಿ ಸೀರೆಯನ್ನು ಎದೆಯ ಮೇಲೆ ಸೆರಗನ್ನಾಗಿಸಿಕೊಳ್ಳತ್ತಿದ್ದರು. ಇದನ್ನು "ಗೇಂಟಿ ಹಾಕುವುದು" ಎಂದು ಕರೆಯಲಾಗುತ್ತಿತ್ತು.

ಈ ತಂಡದಲ್ಲಿ ಒಬ್ಬಾಕೆ ತೆಂಬರೆ ಬಡಿಯುತ್ತಾ

ದಾರಿಲೊನೇ ಮಾದಿರೊ, ದಾರಿಲೊನೇ ಮದಿರೊ

ಮಾದಿರೊಂದು ಪನ್ಪಿನಾಲ್ ಮಾ ಪೊರ್ಲ್‌ದಿ ಮಾದಿರೊ॥ ದಾರಿಲೊನೇ॥

ಬೊಲ್ಲೆರೆ ಚೆನ್ನನ್ ತೂಯನೊ ಮಾದಿರೊ

ಅಡ್ಪುನೊಂದುಲ್ಲನೊ ಮಾದಿರೊ ॥ ದಾರಿಲೊನೋ ॥

ಹೀಗೆ ಸುಶ್ರಾವ್ಯವಾಗಿ, ಹಾಡುತ್ತಾ ಹಾಡಿನ ಧಾಟಿಗೆ ತೆಂಬರೆಯ ವಿಶಿಷ್ಟ ಛಾಪಿನ ಬಡಿತದೊಂದಿಗೆ ತಂಡದ ಕುಣಿತ ಆರಂಭವಾಗುತ್ತದೆ. ಈ ಸಂದರ್ಭ ಮಾದಿರೊ ತಂಡದ ಮಧ್ಯೆ ನಿಂತು ಕುಣಿಯುತ್ತಿದ್ದರೆ, ಉಳಿದವರು ಈಕೆಯ ಸುತ್ತ ನಿಂತು ಕುಣಿಯುತ್ತಾರೆ. ಈ ಹಾಡು ಮತ್ತು ಕುಣಿತದಲ್ಲಿ ಯುವಕನ ಬಾಹ್ಯ ಸೌಂದರ್ಯಕ್ಕೆ ಮರುಳಾಗಿ ಆತನನ್ನು ಮದುವೆಯಾದ ಸುಂದರಿಯೊಬ್ಬಳು ಕೊನೆಗೆ ತನ್ನ ಗಂಡನಿಂದಲೇ ಅತೀವ ಹಿಂಸೆಗೊಳಪಟ್ಟು ಕಣ್ಣೀರಿನಿಂದ ಕೈತೊಳೆವ ಹೆಣ್ಣಿನ ದಯನೀಯ ಸ್ಥಿತಿಯ ಬಗ್ಗೆ ಸಮಾಜಕ್ಕೆ ಸಂದೇಶ ನೀಡುವ ರೀತಿ ಪ್ರತಿಬಿಂಬಿತಗೊಂಡಿರುತ್ತದೆ.

**೬.೪.೫. ಕನ್ಯಾಪು ನಲಿಕೆ**

"ಕನ್ಯಾಪು" ಎಂದರೆ ಕನ್ಯೆ ಹುಡುಗಿ ಎಂದರ್ಥ. ಜೋಳ ದೇಶದ ದೇವು ಸೆಟ್ಟಿ ಮತ್ತು ಕಲ್ಯಾಣಿ ಅಮ್ಮ ದಂಪತಿಗಳ ಏಳು ಜನ ಗಂಡು ಮಕ್ಕಳ ಪೈಕಿ ಒಬ್ಬಾಕೆ. ಈಕೆ ಮೂಡಾಯಿ (ಪೂರ್ವ) ಘಟ್ಟ ಇಳಿದು ತುಳು ದೇಶ ನೋಡಿ ತನ್ನ ತಂದೆ ತಾಯಿಗಳು ಸೊಮನಾಥ ದೇವರಿಗೆ ಹೇಳಿಕೊಂಡಿದ್ದ ಹರಕೆಯನ್ನು ತೀರಸಲೆಂದು ತನ್ನ ಮೂಲದ ಆಳುಗಳಾದ ಕೊರಗ ಜನಾಂಗದವರಿಂದ ತೊಟ್ಟಿಲು ಮಾಡಿಸಿಕೊಂಡು ಆ ತೊಟ್ಟಿಲಿನಲ್ಲಿ ಕುಳಿತು ಕೊರಗ ಜನಾಂಗದ ಆಳುಗಳ ದಂಡಿಗೆಯಲ್ಲಿ ತುಳುನಾಡಿಗೆ ಮಾಯಿ ಹುಣ್ಣಿಮೆಯ ದಿನ ತಿಂಗಳ ಬೆಳಕಿನಲ್ಲಿ ಬರುತ್ತಾಳೆ. ಹೀಗೆ ಬಂದವಳು ಮಾಯಿ ಹುಣ್ಣಿಮೆ (ಮಾಗಿ ಹುಣ್ಣಿಮೆ) ಯಂದು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವನೊಂದಿಗೂ, ಸುಗ್ಗಿ ಹುಣ್ಣಿಮೆಯ ಸಂದರ್ಭ ಪರವ ಮಕ್ಕಳೊಂದಿಗೂ ಸೋಮನಾಥ ದೇವಾಲಯಕ್ಕೆ ಹೋಗುವುದರ ಕುರಿತ ಗೀತಗಾಯನ ನೃತ್ಯವೇ ಗೀತ ನಾಟ್ಯವೇ ಕನ್ಯಾಪು ನಲಿಕೆಯ ಮೂಲ ಆಶಯವಾಗಿದೆ. ಅಂದರೆ ಇಲ್ಲಿ ಮಾಯಿ ಹುಣ್ಣಿಮೆ (ಮಾಗಿಯ ಹುಣ್ಣಿಮೆ) ಮತ್ತು ಸುಗ್ಗಿ ಹುಣ್ಣಿಮೆಯ ಕುರಿತ ಮಹತ್ವವನ್ನು ತಿಳಿಯಪಡಿಸುವುದೇ ಈ ಕನ್ಯಾಪು ನಲಿಕೆಯ ಪ್ರಧಾನ ಉದ್ದೇಶವಾಗಿದೆ. ಆದರೆ

ಕನ್ಯಾಪು ನಲಿಕೆಯಲ್ಲಿ ಹೆಂಗಸರು ವೇಷತೊಟ್ಟು ಕುಣಿಯಬಾರದೆಂಬ ನಿಷೇಧವಿರುವುದರಿಂದ ಇದರಲ್ಲಿ ಹೆಂಗಸರು ಕುಣಿಯದೆ ಗಂಡಸರೇ ಗಂಡು ಹೆಣ್ಣಿನ ವೇಷತೊಟ್ಟು ಕುಣಿಯುತ್ತಾರೆ.

ಕನ್ಯಾಪು ಕುಣಿತವು ಪ್ರಾದೇಶಿಕವಾಗಿ ಭಿನ್ನತೆಯನ್ನು ಪಡೆದುಕೊಂಡಿದೆ. ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ನಡೆಸುವ ಕನ್ಯಾಪು ಕುಣಿತದಲ್ಲಿ ಗಂಡು ಮತ್ತು ಹೆಣ್ಣಿನ ವೇಷವಿದ್ದರೆ, ಪರವರು ಇದನ್ನು "ಮದಿಮಯ – ಮದಿಮಲ್ ನಲಿಕೆ" (ಮದುಮಗ – ಮದುಮಗಳ ಕುಣಿತ ) ಎನ್ನುತ್ತಾರೆ. ಉಡುಪಿ ಕುಂದಾಪುವನ್ನು ಬಿಟ್ಟರೆ ಪುತ್ತೂರು, ಬಂಟ್ವಾಳ, ಸುಳ್ಯ, ಕಾಸರಗೋಡು, ಬೆಳ್ತಂಗಡಿ, ಮೂಡಬಿದ್ರಿ ಪರಿಸರಗಳಲ್ಲಿ ಕನ್ಯಾಪು ಕುಣಿತವನ್ನು ಮಾಯಿ ಹುಣ್ಣಿಮೆಯಿಂದ ಸುಗ್ಗಿಯವರೆಗೆ ಒಂದು ತಿಂಗಳ ಕಾಲ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ನಡೆಸುತ್ತಾರೆ. ಆದರೆ ಕಾಸರಗೋಡು ವಿಟ್ಲ, ಬಂಟ್ವಾಳ ಕುಣಿತವನ್ನೇ ವೃತ್ತಿಯನ್ನಾಗಿಸಿಕೊಂಡಿರುವ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು ಹೆಚ್ಚಾಗಿ ನಡೆಸುತ್ತಾರೆ. ಆದರೆ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಂತೆ ಪರವರು ಇತರ ಯಾವುದೇ ಕಾಲಬದ್ಧ, ಋತುಮಾನೀಯ, ಆಚರಣಾತ್ಮಕ, ಆರಾಧನಾತ್ಮಕ, ಮತ್ತು ಮನರಂಜನಾತ್ಮಕ ಕುಣಿತವನ್ನು ನಡೆಸುವುದಿಲ್ಲವಾದ್ದರಿಂದ ಪರವರು ನಡೆಸುವ ಕಾಲಬದ್ಧ ಋತುಮಾನೀಯ, ಮನರಂಜನಾತ್ಮಕ ಏಕೈಕ ಕುಣಿತವೆಂದರೆ "ಮದಿಮಯ ಮದ್ಮಾಲ್ ನಲಿಕೆ" ಮಾತ್ರವಾಗಿರುವುದು ಅತ್ಯಂತ ವಿಶೇಷವೆನಿಸುತ್ತದೆ.

ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ಕನ್ಯಾಪು ನಲಿಕೆಯಲ್ಲಿ ಇಬ್ಬರ ಪೈಕಿ ಒಬ್ಬಾತ ಗಂಡು ವೇಷವನ್ನು, ಇನ್ನೊಬ್ಬ ಹೆಣ್ಣು ವೇಷವನ್ನು ತೊಟ್ಟಿರುತ್ತಾನೆ. ಗಂಡು ಬಿಳಿ ಪಂಚೆಯನ್ನು ಕಚ್ಚೆ ಹಾಕಿ, ಉದ್ದ ತೋಳಿನ ಅಂಗಿ, ತಲೆಗೆ ಮುಂಡಸು ಕಟ್ಟಿಕೊಂಡಿರುತ್ತಾನೆ. ಮುಖಕ್ಕೆ ದಪ್ಪ ಪೌಡರ್ ಅಥವಾ ಸಫೇತ್ ಹಚ್ಚಿ ಹಣೆಗೆ ಉದ್ದನೆಯ ಕರವಸ್ತ್ರ ಕಟ್ಟಿಕೊಂಡಿರುತ್ತಾನೆ ಹೆಂಗಸು ವೇಷಧಾರಿ ಹೆಂಗಸಿನಂತೆ ವೇಷಧಾರಿ ತಲೆಗೆ "ಉದುರಿ" ಎಂಬ ಉದ್ದನೆಯ ಟೋಪನ್ ಕೂದಲನ್ನು ನೇಯ್ದು ಇಳಿ ಬಿಟ್ಟಿರುತ್ತಾನೆ. ಮುಖಕ್ಕೆ ಪೌಡರ್ ಕಣ್ಣಿಗೆ ಕಾಡಿಗೆ, ತುಟಿಗೆ ಕೆಂಪು ಬಣ್ಣ, ಹಣೆಗೆ ಕೆಂಪು ಬೊಟ್ಟು, ಕಿವಿಗೆ ಆಭರಣ, ಕೈಗೆ ಬಳೆ, ಕಾಲಿಗೆ ಗೆಜ್ಜೆ, ಮೂಗುತಿ ಕೊರಳಿಗೆ ಹಾರ ಹಾಕಿಕೊಂಡಿರುತ್ತಾನೆ. ಇವರ ಜೊತೆಗಿರುವ ಕೊರಗ ವೇಷಧಾರಿ ಕಪ್ಪಗಿನ ತುಂಡು ಬಟ್ಟೆಯುಟ್ಟು, ತಲೆಗೆ ಎರಡು ಕೋಂಟಿನ ಮುಟ್ಟಾಳೆ ಇಟ್ಟುಕೊಂಡು ಕೈಯ್ಯಲ್ಲಿ ಕೋಲು ಹಿಡಿದು ಕನ್ಯಾಪು ವೇಷನ ಜೊತೆ ಕುಣಿಯುತ್ತಾನೆ. ತಂಡದಲ್ಲಿ ಒಬ್ಬ ಹೆಂಗಸು ಅಥವಾ ಗಂಡಸು ತೆಂಬರೆ ಹಿಡಿದು ಕನ್ಯಾಪು ಹಾಡನ್ನು ಸಂಧಿಯ ರೂಪದಲ್ಲಿ ಹೇಳಿ ತೆಂಬರೆ ಬಡಿಯುವಾಗ ಕನ್ಯಾಪು ತಂಡ ಕುಣಿದು ಕೊನೆಗೆ ಮನೆಯ ಯಜಮಾನ ಕೊಟ್ಟ ಹಣ, ಅಕ್ಕಿ, ತೆಂಗಿನಕಾಯಿ ಇತ್ಯಾದಿಗಳನ್ನು ಪಡೆದು ಇನ್ನೊಂದು ಮನೆಗೆ ತೆರಳುತ್ತದೆ.

**೬.೫. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ವಾರ್ಷಿಕಾವರ್ತನದ ಪುರುಷರ ಕುಣಿತಗಳು :**

"ಜೋಗಿ" ಗಳೆಂದರೆ "ಯೋಗಿಗಳು" ಅಥವಾ "ಸಿದ್ಧಿ ಪುರುಷರು" ಎಂದರ್ಥ. ತುಳುನಾಡಿನಲ್ಲಿ ಬೌದ್ಧ, ಜೈನ, ಧರ್ಮಗಳು ನಶಿಸಿ ಜಾತಿ ವೈಷಮ್ಯ, ಮತೀಯ ಸಂಘರ್ಷಗಳು ಹೆಚ್ಚಾಗಿ ಕೆಳ ಜಾತಿಯವರೆನಿಸಿಕೊಂಡಿದ್ದ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಂತಹಾ ಅನೇಕ ಸಮುದಾಯಗಳು ವೈದಿಕ ಧರ್ಮದ ದಬ್ಬಾಳಿಕೆಯಿಂದಾಗಿ ಸಂದಿಗ್ಧ ಪರಿಸ್ಥಿತಿಗೆ ಒಳಗಾಗಿದ್ದವು. ಇಂತಹಾ ಸಂದರ್ಭದಲ್ಲಿ ತುಳುನಾಡಿಗೆ ಉತ್ತರ ಭಾರತದಿಂದ ಬಂದ ಜೋಗಿ ಸಿದ್ಧಿ ಪುರುಷರ "ನಾಥಪಂಥ" (ಜೋಗಿಪಂಥ) ವೈದಿಕರ ದಬ್ಬಾಳಿಕೆಯ ವಿರುದ್ಧ ಸೆಟೆದು ನಿಂತು ತುಳುನಾಡ ಸಂಸ್ಕೃತಿಯ ನಿರ್ಮಾತೃಗಳೆನಿಸಿದ್ದ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯಗಳಾಂತಹ ಇತರ ಶೋಷಿತ ಸಮುದಾಯಗಳ ಬೆಂಬಲಕ್ಕೆ

ನಿಂತವು. ಆ ನಂತರ ತಾವು ನಿರ್ಮಿಸಿದ ಮಠಗಳಲ್ಲಿ ದೈವ-ಭೂತಗಳನ್ನು ಪ್ರತಿಷ್ಠಾಪಿಸಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಂದ ನೇಮ, ನಡಾವಳಿಗಳನ್ನು ನಡೆಸಿ ದಲಿತರ ಬಗೆಗೆ ವಿಶೇಷ ಕಾಳಜಿ ತೋರಿ ಈ ಶೋಷಿತರನ್ನು ಸಮಾಜದ ಮುಖ್ಯವಾಹಿನಿಗೆ ತರಲು ಶಕ್ತಿ ಮೀರಿ ಶ್ರಮಿಸಿತು. ಇದರ ದ್ಯೋತಕವಾಗಿ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರಿಗೆ ಈ ನಾಥಪಂಥ ಅಥವಾ ಜೋಗಿ ಪುರುಷರು ಆರಾಧ್ಯರೆನಿಸಿ ಅವರ ಕುರಿತಾಗಿ ತುಳುನಾಡಿನಲ್ಲಿ ನಂಬಿಕೆ ಬರುವಂತೆ ಹಾಡು ರಚಿಸಿ ಮನೆ ಮನೆಗೆ ತೆರಳಿ ಆಚರಣಾತ್ಮಕವಾಗಿ ಕುಣಿಯ ತೊಡಗಿದರು.

**ಜೋಗಿ ಪುರುಷರ ನಲಿಕೆಯಲ್ಲಿ ನಾಲ್ಕು ಬಗೆಯಿದೆ. ಅವುಗಳೆಂದರೆ**

೧. ಸೋಣೊದ ಜೋಗಿ ಪುರುಷೆರೆ ನಲಿಕೆ

೨. ಜೋಗಿ ಪುರುಷೆರೆ ನಲಿಕೆ

೩. ಕಾವೇರಿ ಪುರುಷೆರೆ ನಲಿಕೆ

೪. ಮಾಯಿದ ಪುರುಷೆರೆ ನಲಿಕೆ

**೬.೫.೧. ಸೋಣೊದ ಜೋಗಿ ಪುರುಷರ ಕುಣಿತ**

ಇದು ಸಾಮಾನ್ಯವಾಗಿ ಶ್ರಾವಣ ತಿಂಗಳಲ್ಲಿ ಹಗಲಲ್ಲಿ ನಡೆಯುವ ಕುಣಿತ ಈ ಕುಣಿತ ಸಾಮಾನ್ಯವಾಗಿ ಹಿಂದೆ ಕಾಸರಗೋಡು, ಪುತ್ತೂರು, ವಿಟ್ಲ, ಬಂಟ್ವಾಳಗಳಲ್ಲಿ ಹೆಚ್ಚಾಗಿ ಈ ಕುಣಿತ ನಡೆಯುತ್ತಿತ್ತು. ಸೋಣದ ಜೋಗಿ ವೇಷವನ್ನು ಹುಡುಗನೊಬ್ಬನಿಗೆ ಹಾಕಿಸಲಾಗುತ್ತದೆ. ಇವನ ಜೊತೆಗೆ ತೆಂಬರೆ ಹಿಡಿದುಕೊಂಡು ಹಾಡು ಹೇಳಲು ಹಿರಿಯನೊಬ್ಬನಿರುತ್ತಾನೆ. ವೇಷಧಾರಿ ಕೆಂಪು ಅಂಗಿ ಇಜಾರ ಧರಿಸಿ ಸೀರೆಯನ್ನು ಹಗ್ಗದಲ್ಲಿಟ್ಟು ನೆರಿಗೆ ಹಿಡಿದು ಇಜಾರದ ಮೇಲೆ ಸೊಂಟಕ್ಕೆ ಕಟ್ಟಿಕೊಳ್ಳುತ್ತಾನೆ. ಇದನ್ನು ಇದನ್ನು "ನೆರಿ ಸೀರೆ" ಎನ್ನಲಾಗುತ್ತದೆ. ಇದರ ಮೇಲೆ ಬಿಳಿ ಬಟ್ಟೆಯನ್ನು ಮಡಚಿ ಪಟ್ಟಿಯಂತೆ ಸೊಂಟಕ್ಕೆ ಸುತ್ತಲಾಗುತ್ತದೆ. ಮುಖಕ್ಕೆ ನಸು ಕೆಂಪು ಬಣ್ಣದ ಅರ್ದಲ, ತುಟಿಗೆ ಕೆಂಪು, ಕಣ್ಣಿನ ಹುಬ್ಬಿಗೆ ಕಾಡಿಗೆ, ಗಲ್ಲಗಳಿಗೆ ಬಿಳಿ ಚುಕ್ಕಿಯ ಬೊಟ್ಟು ಅವುಗಳ ಸುತ್ತ ಚಿಕ್ಕ ಕಪ್ಪು ಬೊಟ್ಟು ಹಣೆಗೆ ಅಡ್ಡ ನಾಮಗಳನ್ನು ಹಾಕಿಕೊಂಡಿರುತ್ತಾರೆ. ತಲೆಗೆ ಭೂತ ಕಟ್ಟುವ ವೇಳೆ ಹಾಕುವಂತೆ ತಲೆ ಚೆಂಡು ಹಾಕಿ ಅದಕ್ಕೆ ಆಧಾರವಾಗಿ ತಲೆಯ ಸುತ್ತಲೂ ಸುತ್ತುವರಿಯುವ ತ್ರಿಶಂಕುವಿನಾಕಾರದ ಬಹಳ ವಿಶಿಷ್ಟವುಳ್ಳ ತೆಂಗಿನ ಮಡಲಿನ ಎಳೆ ಸಿರಿಯ ಕೀರಿಟವನ್ನು ಕಟ್ಟಲಾಗುತ್ತದೆ. ಕೆಲವು ಕಡೆಯಲ್ಲಿ ಸೋಣದ ಜೋಗಿ ಪುರುಷ ವೇಷಧಾರಿ ಭೂತದ ಅಲಂಕಾರದಂತೆ ಕಿರೀಟ, ಕೆಬಿಯಣಿ, ಗಗ್ಗರ ಕಟ್ಟಿಕೊಂಡು ಕೈಯಲ್ಲಿ ಸವಾಲೊ (ಚಾಮರ) ಹಿಡಿದುಕೊಂಡಿರುತ್ತಾನೆ.

ಸೋಣದ ಜೋಗಿ ಪುರುಷರ ಕುಣಿತದಲ್ಲಿ ಹಾಡು ಅಥವಾ ಸಂಧಿ ಇರುವುದಿಲ್ಲ. ತೆಂಬರೆ ಹಿಡಿದ ವ್ಯಕ್ತಿ ಮತ್ತು ಜೋಗಿ ಪುರುಷ ವೇಷಧಾರಿಯ ನಡುವೆ ಸಂಭಾಷಣೆ ಮಾತ್ರ ನಡೆದು ಅ ಬಳಿಕ ಕುಣಿತಕ್ಕೆ ಪೀಠಿಕೆ ರೂಪದಲ್ಲಿ ಮಾತನ್ನಾರಂಭಿಸಿ ತೆಂಬರೆಯ ಬಡಿತಕ್ಕೆ ಕುಣಿಯಲಾಗುತ್ತದೆ. ಇದೊಂದು ಆರಾಧನಾಬದ್ಧ ಕುಣಿತವಾಗಿರುವುದರಿಂದ ಮೊದಲು ಗ್ರಾಮದ ದೇವಸ್ಥಾನದಲ್ಲಿ ಕಲಶ ನೀರಿನ ಸ್ನಾನ ಮಾಡಿ ಅಲಂಕಾರಗೊಂಡ ವೇಷಧಾರಿ ಗೆಜ್ಜೆ ಪೂಜೆ ನಡೆಸಿ, ಪ್ರಾರ್ಥಿಸಿ, ನಂತರ ದೇವರ ಮುಂದೆ ಗೆಜ್ಜೆ ಕಟ್ಟಿ ಮೊದಲು ಅಲ್ಲೇ ಕುಣಿದು ಬಳಿಕ ಮನೆ ಮನೆಗಳಿಗೆ ತೆರಳುವ ಕ್ರಮವಿದೆ. ಮನೆಗೆ ತೆರಳಿ ಕುಣಿದ ಬಳಿಕ ಮನೆಯ ಹೆಂಗಸರು ಎಣ್ಣೆ ನೀವಿದ ದೀಪದ ಬತ್ತಿಯನ್ನು ಉರಿಸಿ ಅಂಗಳದಲ್ಲಿರಿಸಿ ಅದರ ಸುತ್ತ ಎಣ್ಣೆ, ಸೀಗೆಯ ನೀರು ಅಥವಾ ಬೂದಿಯ ನೀರು ಅಥವಾ ಸುಣ್ಣ ಮಿಶ್ರಿತ ಅರಶಿನ ಕುರ್ದಿ ನೀರನ್ನು ಹಾಕಿ ಜೋಗಿ

ಪುರುಷನ ಮುಂದೆ ಮಾರಿ – ದೃಷ್ಟಿಯನ್ನು ಕಳೆಯುವ ಶಾಸ್ತ್ರ ಮಾಡುತ್ತಾರೆ. ನಂತರ ವೇಷಧಾರಿಗೆ ಗೆರಸೆಯಲ್ಲಿ ಅಕ್ಕಿ, ಭತ್ತ, ತೆಂಗಿನಕಾಯಿ, ಹುಳಿ, ಮೆಣಸು, ಉಪ್ಪು ಹಣ ಇತ್ಯಾದಿಗಳನ್ನು ಕೊಡುತ್ತಾರೆ.

**೬.೫.೨. ವಿಧಿ – ನಿಷೇಧಗಳು**

ಸೋಣದ ಜೋಗಿ ಪುರುಷ ಶಿವನ ಪ್ರತೀಕವೆಂದು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಕಲ್ಪಿಸಿ ಅದಕ್ಕೆ ಪೂರಕವಾಗಿ ಕತೆ ಹೆಣೆದು ಅದಕ್ಕೆ ತಕ್ಕಂತೆ ಕುಣಿತವನ್ನು ಆಚರಣಾತ್ಮಕ ಮತ್ತು ಆರಾಧನಾ ಬದ್ಧವಾಗಿ ನಡೆಸಿಕೊಂಡು ಬಂದಿರುವುದು ಬಹಳ ವಿಶಿಷ್ಟವೆನಿಸಿದೆ. ತಾನೇ ಸೃಷ್ಟಿಸಿದ ಮಗಳಾದ ಶಾರದೆಯನ್ನು ತಾನೇ ಮದುವೆಯಾದ ಬ್ರಹ್ಮನ ಈ ಕ್ರಮಕ್ಕೆ ಬೇಸೆತ್ತ ಶಿವ ಐದು ತಲೆಯುಳ್ಳ ಬ್ರಹ್ಮನ ಒಂದು ರುಂಡವನ್ನು ಕತ್ತರಿಸಿದಾಗ ಕತ್ತರಿಸಲ್ಪಟ್ಟ ಬ್ರಹ್ಮನ ಕಪಾಲ(ರುಂಡ) ಶಿವನ ಕಿರುಬೆರಳಲ್ಲಿ ಸಿಕ್ಕಿ ನೇತಾಡುತ್ತದೆ. ಇದಕ್ಕೆ ಪಶ್ಚತ್ತಾಪಪಟ್ಟ ಶಿವ ಬ್ರಹ್ಮ ಹತ್ಯಾದೋಷದ ಪರಿಹಾರಕ್ಕಾಗಿ ಭೂಲೋಕದಲ್ಲಿ ಜೋಗಿ ಪುರುಷರ ವೇಷದಲ್ಲಿ ಭಿಕ್ಷಾಟನೆ ಮಾಡುತ್ತಾನೆಂಬ ನಂಬಿಕೆಯ ಹಿನ್ನಲೆಯಲ್ಲಿ ನಲ್ಕೆ ಯಾನೇ ಅಜಿಲ (ಪಾಣಾರ) ಜನಾಂಗದವರು ಧರ್ಮದ ತಿಂಗಳಾದ ಸೋಣ ತಿಂಗಳಲ್ಲಿ (ಸಿಂಹ ಶ್ರಾವಣ) ಸೋಣೊದ ಜೋಗಿ ಪುರುಷರ ನಲಿಕೆ ನಡೆಸುತ್ತಾರೆ. ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಶಿವನಿಗೂ "ಜಟಾಧಾರಿ ಗುಳಿಗ" ಅಥವಾ "ಜಟಾಧಾರಿ ಬಂಟೆ" ಎಂದು ಮುಂತಾದ ಹೆಸರಿನಲ್ಲಿ ದೈವದ ಕೋಲ (ನೇಮ) ನಡೆಸುತ್ತಾರೆ. ಆದರೆ ಜಟಾಧಾರಿ ಗುಳಿಗ ಅಥವಾ ಜಟಾಧಾರಿ ಬಂಟ ಮೈಮೆ ನೇಮ ನಡೆಯುವ ಪ್ರದೇಶಗಳಲ್ಲಿ (ಗ್ರಾಮಗಳಲ್ಲಿ) ಸೋಣದ ಜೋಗಿ ಪುರುಷರ ಕುಣಿತ ನಡೆಸುವುದು ಕಡ್ಡಾಯವಾಗಿ ನಿಷೇಧವಾಗಿದೆ.

**೬.೫.೩. ಜೋಗಿ ಪುರುಷೆರೆ ನಲಿಕೆ**

ಜೋಗಿ ಮಠದ ಕೇಂದ್ರ ಸ್ಥಾನ ಮಂಗಳೂರಿನ ಕದ್ರಿಯಾದರೂ ಪ್ರಾಚೀನ ಕಾಲದಲ್ಲೇ ಈ ಮಠಗಳ ಶಾಖೆಗಳು ಬೇರೆ ಬೇರೆ ಕಡೆಗಳಲ್ಲಿ ಸ್ಥಾಪಿತಗೊಂಡಿದ್ದವು. ಹೀಗಾಗಿ ಆಯಾಯ ಪ್ರದೇಶದಲ್ಲಿರುವ ಶಾಖಾ ಮಠಗಳಿಗೆ ಅನುಗುಣವಾಗಿ ಜೋಗಿ ಪುರುಷರ ಕುಣಿತಗಳು ಪ್ರಾದೇಶಿಕ ಮತ್ತು ಋತುಮಾನೀಯ ವ್ಯತ್ಯಾಸವನ್ನು ಪಡೆದುಕೊಂಡವು. ಇದರ ಪ್ರಕಾರ ಈಕುಣಿತವನ್ನು ಪುತ್ತೂರು, ಬಂಟ್ವಾಳ, ಮಂಗಳೂರು, ಕಾಸರಗೋಡು ಪ್ರದೇಶಗಳಲ್ಲಿ ಸೋಣದ ಜೋಗಿ ಪುರುಷೆರೆ ನಲಿಕೆ ಎಂದು ಕರೆಯಲ್ಪಟ್ಟರೆ, ವಿಟ್ಲ ಸೀಮೆಯಲ್ಲಿ ಜೋಗಿ ಪುರುಷೆರೆ ನಲಿಕೆ ಎಂಬುದಾಗಿಯೂ, ಸುಳ್ಯ ಪರಿಸರದಲ್ಲಿ ಕಾವೆರಿ ಕಾವೇರಿ ಪುರುಷೆರೆ ನಲಿಕೆ ಎಂದೂ, ಕಾರ್ಕಳ, ಮೂಡಬಿದಿರೆ ಕಡೆಗಳಲ್ಲಿ ಮಾಯಿದ ಪುರುಷೆರೆ ನಲಿಕೆಯೆಂದೂ ಕರೆಯಲಾಗುತ್ತದೆ.

ವಿಟ್ಲ ಸೀಮೆಯಲ್ಲೂ ಹಿಂದೆ ಜೋಗಿ ಮಠವಿದ್ದ ಕಾರಣ ಈ ಪರಿಸರದಲ್ಲಿ ಜೋಗಿ ಕುಣಿತ "ಜೋಗಿ ಪುರುಷರ" ಕುಣಿತವೆಂಬ ಹೆಸರಲ್ಲಿ ನಡೆಯುತ್ತದೆ. ಜೋಗಿ ಪುರುಷಧಾರಿ ಕೆಂಪು, ಇಜಾರ, ಉದ್ದಕ್ಕೆ ಕೆಂಪು ಅಂಗಿ ಧರಿಸಿ ಕೈಗಳಿಗೆ ಕೈ ದಂಡೆಯಂತೆ ಎಳೆಸಿರಿಯಿಂದ ಮಾಡಿದ ಪುಂಡಯಿ ಮತ್ತು ಕೇಪುಳ ಹೂವನ್ನು ಕಟ್ಟಿ ಕೊಳ್ಳುತ್ತಾರೆ. ಅದೇ ರೀತಿ ಇಜಾರದ ಮೇಲೆ ಸೊಂಟಕ್ಕೆ ಸೀಳಲ್ಪಟ್ಟ ತೆಂಗಿನ ಎಳೆಸಿರಿಯ ಸಿರಿ ಲಂಗವನ್ನು ಧರಿಸುತ್ತಾನೆ. ಮುಖಕ್ಕೆ ನಸುಕೆಂಪು ಬಣ್ಣದ ಅರ್ಧಾಲ ಹಾಕಿ, ಕಣ್ಣಿನ ಹುಬ್ಬಿಗೆ ಕಾಡಿಗೆ ಮೀಸೆ ಹಚ್ಚಿಕೊಂಡು ಹಣೆಗೆ ಮೂರು ಬಿಳಿ ಅಡ್ಡ ನಾಮದ ನಡುವೆ ಒಂದು ದೊಡ್ಡ ಕೆಂಪು ಬೊಟ್ಟನ್ನಿಟ್ಟು ಎರಡೂ ಗಲ್ಲಕ್ಕೆ ಕಪ್ಪು ಬೊಟ್ಟಿನ ಸುತ್ತ ಬಿಳಿ ಅಥವಾ ಕೆಂಪು ಬಣ್ಣದ ಚುಕ್ಕಿಗಳನ್ನಿಟ್ಟುಕೊಂಡಿರುತ್ತಾನೆ. ಕಾಲಿಗೆ ಗೆಜ್ಜೆ ಕಟ್ಟಿ ಕೈಯಲ್ಲಿ ಘಂಟಾಮಣಿ ಇರುತ್ತದೆ. ಇನ್ನೊಂದು ಕೈಯಲ್ಲಿ ಸೀಳಲ್ಪಟ್ಟ ತೆಂಗಿನ ಎಳೆ ಸಿರಿಯ ಸವಾಲೊ (ಚಾಮರ)

ಇರುತ್ತದೆ. ತಲೆಗೆ ಚೆಂಡು ಹಾಕಿ ಅದರ ಮೇಲೆ ತೆಂಗಿನ ಎಳೆ ಸಿರಿಯಿಂದ ತಯಾರಿಸಿದ ಕಿರೀಟವಿರುತ್ತದೆ. ತಲೆಯ ಹಿಂಭಾಗ ಕೃತಕ ಕೂದಲನ್ನು (ಉದುರಿ ಅಥವಾ ತೆಂಗಿನ ಮಡಲಿನ ಎಳೆ ಸಿರಿಯನ್ನು ತೆಳುವಾಗಿ ಸೀಳಿ ಮಾಡಿದ ಉದ್ದನೆಯ ತಲೆಗೂದಲಿನಾಕಾರದ ಸಿರಿಯನ್ನು) ಇಳಿ ಬಿಡಲಾಗಿರುತ್ತದೆ. ಕಿವಿಗಳಿಗೆ ಕೇಪುಳ ಹೂವಿನ ಅಥವಾ ಸಿರಿಯ ಕೆಬಿಯಣಿ (ಕೇಪುಳ ಹೂವನ್ನು ಬೈ ಹುಲ್ಲಿನ ಅಥವಾ ಮುಳಿಹುಲ್ಲಿನ ಸಣ್ಣ ತುಂಡು ಭಾಗಕ್ಕೆ ನೆಯ್ದು ಮಾಡುವ ಅಲಂಕಾರ ಅಥವಾ ಸಿರಿಯ ಅಲಂಕಾರ) ಯನ್ನು ಕಟ್ಟಲಾಗಿರುತ್ತದೆ. ಎದೆಗೆ ಸೀಳಲ್ಪಟ್ಟ ಮಡಲಿನ ಎಳೆ ಸಿರಿಯ ಎದೆ ಪಟ್ಟಿ ಹಾಗೂ ಕೊರಳಿಗೆ ಮಣಿಸರಗಳನ್ನು ಹಾಕಿ ಕೊಂಡಿರುತ್ತಾನೆ.

ವೇಷಧಾರಿ ಜೋಗಿ ಪುರುಷರ ಕುಣಿತ ಆರಂಭದ ಮೊದಲು ತಮ್ಮ ಮನೆಯ ತುಳುಸೀ ಕಟ್ಟೆ ಮುಂಭಾಗ ಗಣಪತಿ ಸುತ್ತಿಗೆ (ಬಾಳೆಯ ಎಲೆಯಲ್ಲಿ ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ) ಇಟ್ಟು ಗೆಜ್ಜೆಯನ್ನು ಅದರ ಮುಂದೆ ಇಟ್ಟು ಪ್ರಾರ್ಥಿಸಿ ಹಿರಿಯರು ಆ ಗೆಜ್ಜೆಯನ್ನು ಅವನ ಕೈಗೆ ನಿಡುತ್ತಾರೆ. ನಂತರ ಆತ ಗೆಜ್ಜೆ ಕಟ್ಟಿಕೊಳ್ಳತ್ತಾನೆ. ಕುಣಿತದ ಕೊನೆಯಲ್ಲಿ ಸಹಾ ಗಣಪತಿ ಸುತ್ತಿಗೆ ಇಟ್ಟೇ ಕಾಲಿನ ಗೆಜ್ಜೆಯನ್ನು ಬಿಚ್ಚಿ ಗಣಪತಿ ಸ್ತುತಿಗೆ ಇಟ್ಟ ಪಕ್ಕದಲ್ಲಿ ಇನ್ನೊಂದು ಬಾಳೆ ಎಲೆಯಲ್ಲಿ ಸ್ವಲ್ಪ ಅವಲಕ್ಕಿ, ಬೆಲ್ಲ, ತೆಂಗಿನಕಾಯಿಗಳ ಮಿಶ್ರಣದ ಕಜ್ಜಾಯವನ್ನು ಇಟ್ಟು ದೀಪ ಮತ್ತು ಊದು ಬತ್ತಿ ಉರಿಸಿ ಹಾಕುತ್ತಾರೆ. ನಂತರ ಊರಿನವರಿಂದ ಬಂದ ಹರಕೆಗಳನ್ನು ದೈವ, ದೇವರಿಗೆ ತೀರಿಸಲಾಗುತ್ತದೆ.

**೬.೫.೪. ಕಾವೇರಿ ಪುರುಷೆರೆ ನಲಿಕೆ**

ತುಲಾ ರಾಶಿಯ ಸಂಕ್ರಾಂತಿಯಂದು ಕೊಡಗಿನ ಕಲಾಕಾವೇರಿಯಲ್ಲಿ ತೀರ್ಥೋದ್ಭವಾಗಿ ಕಾವೇರಿ ಸಂಕ್ರಾಂತಿ ಜಾತ್ರೆ ನಡೆಯುತ್ತದೆ. ಈ ವೇಳೆ ಸುಳ್ಯ ಬಂಟ್ವಾಳ, ಸುಬ್ರಹ್ಮಣ್ಯ ಪರಿಸರದಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು "ಕಾವೇರಿ ಪುರುಷೆರೆ ನಲಿಕೆ" ಎಂಬ ಹೆಸರಿನಲ್ಲಿ ಕುಣಿತವನ್ನು ನಡೆಸುತ್ತಾರೆ. ಸುಳ್ಯ ಪರಿಸರದಲ್ಲಿ ನಡೆಯುವ ಕಾವೇರಿ ಪುರುಷರ ನಲಿಕೆ ವೇಷವು ಇತರ ಕಡೆಗಳ ವೇಷಗಳ ಅಲಂಕಾರಗಳಿಗಿಂತ ಭಿನ್ನವಾಗಿರುತ್ತದೆ. ಇಲ್ಲಿನ ವೇಷಧಾರಿ ಕೆಂಪು ಇಜಾರ, ಕೆಂಪು ಅಂಗಿ ಧರಿಸಿ ಇಜಾರದ ಮೇಲೆ ಸೊಂಟಕ್ಕೆ ಹಗ್ಗದ ಮೂಲಕ ಸೀರೆಗಳನ್ನು ನೆರಿಗೆ ಹಿಡಿದು ಮಾಡಿದ ನೆರಿಸೀರೆಗಳನ್ನು ಎರಡು–ಮೂರು ಅಂತರಕ್ಕೆ ಕಟ್ಟಿಕೊಳ್ಳುತ್ತಾನೆ. ಕೈಗಳಿಗೆ ಅಂಗಿಯ ಮೇಲೆ ಕೇಪುಳ ಹೂ ಮತ್ತು ತೆಂಗಿನ ಎಳೆ ಸಿರಿಯ ಪುಂಡಯಿ ಹಾಗೂ ಅಲಂಕಾರಿಕ ಸಿರಿಯನ್ನು ಕೈಯ್ಯ ತಟ್ಟಿನ ಮೇಲೆ ಮತ್ತು ರೆಟ್ಟೆಗಳಿಗೆ ಕಟ್ಟಿಕೊಂಡಿರುತ್ತಾನೆ. ಹೆಗಲಿಗೆ ಸೀಳಲ್ಪಟ್ಟ ತೆಂಗಿನ ಮಡಲಿನ ಸಿರಿಯ ಜವೆರಿ ಅಥವಾ ಹೂವಿನ ಮಾಲೆಯನ್ನೂ, ಕಿವಿಗಳಿಗೆ ರಟ್ಟಿನಿಂದ ಅಥವಾ ತೆಂಗಿನ ಎಳೆ ಸಿರಿಯಿಂದ ಮಾಡಲಾದ ಕೆಬಿಯಣಿಯನ್ನೂ ಕಟ್ಟಿಕೊಂಡಿರುತ್ತಾನೆ. ಮುಖಕ್ಕೆ ತಿಳಿ ಕೆಂಪು ಅಥವಾ ಹಳದಿ ಬಣ್ಣದ ಅರ್ಧಾಲ ಲೇಪಿಸಿ ಗಲ್ಲಗಳಿಗೆ ಕಪ್ಪು ಅಥವಾ ಕೆಂಪು ಬಣ್ಣದ ಬೊಟ್ಟನ್ನಿಟ್ಟು ಅವುಗಳ ಸುತ್ತ ಬಿಳಿ ಬಣ್ಣದ ಚುಕ್ಕಿಗಳ ನೀಡುತ್ತಾನೆ. ಹಣೆಗೆ ಬಿಳಿ ಅಡ್ಡ ನಾಮದ ಮಧ್ಯೆ ಕೆಂಪು ಬೊಟ್ಟನ್ನಿಡಲಾಗುತ್ತದೆ. ಹುಬ್ಬಿಗೆ ಕಾಡಿಗೆ ಹಚ್ಚಿ, ಕಾಲಿಗೆ ಗೆಜ್ಜೆ ಕಟ್ಟಿ ಕೈಯ್ಯಲ್ಲೊಂದು ಕೋಲು ಹಿಡಿದುಕೊಂಡಿರುತ್ತಾನೆ.

ಈ ಕಾವೇರಿ ಪುರುಷ ವೇಷಗಾರನೊಂದಿಗೆ ತೆಂಬರೆ ಹಿಡಿದುಕೊಂಡ ಹಿರಿಯನೊಬ್ಬನಿದ್ದು ಈತ ವೇಷಧಾರಿಯೊಂದಿಗೆ ಸಂಭಾಷಣೆ ನಡೆಸಿದ ಬಳಿಕ ತೆಂಬರೆ ಬಡಿಯುತ್ತಾನೆ. ಆಗ ಆ ತೆಂಬರೆಯ ಬಡಿತಕ್ಕೆ ತಕ್ಕ ಹಾಗೆ ವೇಷಧಾರಿ ಕುಣಿಯುತ್ತಾನೆ. ಇದಕ್ಕೂ ಯಾವುದೇ ರೀತಿಯ ಸಂಧಿಯಾಗಲೀ, ಹಾಡಾಗಲೀ ಇರುವುದಿಲ್ಲ. ವೇಷಧಾರಿ ಮನೆಯಂಗಳಕ್ಕೆ ಬರುತ್ತಿದ್ದಂತೆ ತೆಂಬರೆ ಹಿಡಿದ ಹಿರಿಯ ವ್ಯಕ್ತಿ "ಕಾವೇರಿ ಪುರುಷೆರ್ ಬತ್ತೆರ್" (ಕಾವೇರಿ ಪುರುಷರು

ಬಂದರು) ಎಂದಾಗ ಮನೆಯವರು "ಎಡ್ಡೆ ಆಂಡ್" (ಒಳ್ಳೆಯದಾಯಿತು) ಎನ್ನುತ್ತಾರೆ. ನಂತರ ತೆಂಬರೆ ಹಿಡಿದ ವ್ಯಕ್ತಿ ಮೊದಲು ತೆಂಬರೆ ಬಡಿದು ಕಥನ ರೂಪದಲ್ಲಿ ಸಂಭಾಷಣೆಗೆ ತೊಡಗಿದಾಗ ಅದಕ್ಕೆ ಉತ್ತರವಾಗಿ ವೇಷಧಾರಿ ಉತ್ತರಿಸಿ ಕಥನ ಮುಂದುವರಿಕೆಗೆ ದಾರಿ ಮಾಡಿಕೊಡುತ್ತಾನೆ. ಜೋಗಿ ಪುರುಷ, ಕಾವೇರಿ ತೀರ್ಥ ಕ್ಷೇತ್ರಕ್ಕೆ ಬಂದು ಗುರುವಿನ ಅಪ್ಪಣೆ ಪ್ರಕಾರ ಮನೆ ಮನೆಗೆ ಭಿಕ್ಷೆ ಬೇಡಿ, ಸಿಕ್ಕಿದ ಕಾಣಿಕೆಗಳನ್ನು ಕಾವೇರಿಯಮ್ಮನಿಗೆ ಅರ್ಪಿಸಿ ಬಳಿಕ ಅಲ್ಲಿಯೇ ಮಾಯಾ ಸ್ವರೂಪಿ ಗಣಗಳಾಗಿ ನಿಂತು ಬಳಿಕ ಕೊಡಗಿನ ಘಟ್ಟದಿಂದ ಇಳಿಯುವಾಗ "ಮರುಳು ಕೆಂಚಿರಾಯ"ನಾಗಿ ಇಳಿದುದರ ಬಗ್ಗೆ ಕಥನ ರೂಪದೊಂದಿಗೆ ಸಂಭಾಷಣೆ ಮುಕ್ತಾಯವಾಗುತ್ತದೆ.

**೬.೫.೫. ವಿಧಿ – ನಿಷೇಧಗಳು**

ಕಾವೇರಿ ಪುರುಷರ ವೇಷ ಧರಿಸುವ ಮೊದಲು ಕಡ್ಡಾಯವಾಗಿ ಊರಿನ ದೇವಸ್ಥಾನದಲ್ಲಿ ಹೋಗಿ ಕಲಶ ನೀರು ಸ್ನಾನ ಮಾಡಿ ಪೂಜೆ ಸಲ್ಲಿಸಿ ಅಲ್ಲೇ ವೇಷ ಭೂಷಣ ಧರಿಸಿ ಹೊರಡುತ್ತಾರೆ. ಆದರೆ ಸುಳ್ಯ ಮುಂತಾದ ಕಡೆಗಳಲ್ಲಿ ಈ ತಂಡದ ಜೊತೆ ಆದಿ ದ್ರಾವಿಡ ಜನಾಂಗದ ವ್ಯಕ್ತಿಯನ್ನು ಕರೆದುಕೊಂಡು ಹೋಗುವುದು ವಿಶೇಷವಾಗಿದೆ. ಕಾವೇರಿ ಪುರುಷ ವೇಷಧಾರಿಯ ಜೊತೆ ಇರುವ ಈ ಆದಿ ದ್ರಾವಿಡ ಜನಾಂಗದ ವ್ಯಕ್ತಿ ದಾರಿ ಮಧ್ಯೆ ಸಿಗುವ ತೋಟಕ್ಕೆ ನುಗ್ಗಿ ಅಲ್ಲಿಂದ ಕಾಯಿ, ಪಲ್ಯೆ, ಹಣ್ಣು, ಹಂಪಲುಗಳನ್ನು ಕಿತ್ತುಕೊಂಡು ತಮಾಷೆ ಮಾಡುತ್ತಾ ಸಿಕ್ಕ ವಸ್ತುಗಳ ಹೊರೆಯನ್ನು ಹೊತ್ತು ಕೊಂಡಿರುತ್ತಾನೆ. ನಂತರ ಈ ವಸ್ತುಗಳನ್ನು ತಲ ಕಾವೇರಿ ಅಥವಾ ತಮ್ಮ ಊರಿನ ದೇವಸ್ಥಾನಗಳಿಗೆ ಒಪ್ಪಿಸುವುದು ಆತನ ಜವಾಬ್ದಾರಿಯಾಗಿರುತ್ತದೆ. ಕಾವೇರಿ ಪುರುಷರ ನಲಿಕೆ ಮುಗಿದ ಬಳಿಕ ಊರಿನ ಗುತ್ತು – ಬಾರಿಕೆಗಳಲ್ಲಿ ಕಾವೇರಿ ಪುರುಷರ ವೇಷ ಧರಿಸುವ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರನ್ನು ಮುಂದಿಟ್ಟುಕೊಂಡು ಕೆಂಚಿರಾಯನ ಪೂಜೆ ನಡೆಯುತ್ತದೆ.

**೬.೫.೬. ಮಾಯಿದ ಪುರುಷೆರೆ ನಲಿಕೆ**

ತುಳುವಿನ "ಮಾಯಿ" ಎಂದರೆ ಕನ್ನಡದಲ್ಲಿ "ಮಾರ್ಚ್" ತಿಂಗಳು ಎಂದರ್ಥ. ಈ ವೇಳೆ ಹುಣ್ಣಿಮೆಯಿಂದ ಸಂಕ್ರಾಂತಿಯವರೆಗೆ ಮೂಡಬಿದ್ರಿ ಕಾರ್ಕಳ ಪ್ರದೇಶಗಳಲ್ಲಿ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ಮಾಯಿದ ಪುರುಷೆರೆ ನಲಿಕೆಯನ್ನು ರಾತ್ರಿ ಹೊತ್ತು ನಡೆಸುತ್ತಾರೆ. ಈ ಕುಣಿತಕ್ಕೆ ಇಂತಿಷ್ಟೇ ಜನರಿರಬೇಕೆಂಬ ನಿಯಮವಿಲ್ಲ. ಆದರೆ ಬೆಸ ಸಂಖ್ಯೆ ಬರುವಷ್ಟು ವೇಷಧಾರಿಗಳಿರಬೇಕಾಗಿರುವುದು ಕಡ್ಡಾಯ. ಇದರಲ್ಲಿನ ಹಾಡು ಕೂಡಾ ಸಂಧಿಯಾಗಿರುತ್ತದೆ. ಗಂಡಸರೇ ಇರುವ ಈ ತಂಡದಲ್ಲಿ ಒಬ್ಬ ರಾಜ ಕುಮಾರನ ವೇಷ ಧರಿಸಿದರೆ, ಇನ್ನೊಬ್ಬ ಯುವತಿಯ ವೇಷವನ್ನೂ, ಇನ್ನೊಬ್ಬ ಅಜ್ಜಿಯ ವೇಷವನ್ನೂ ಧರಿಸಿ, ಇನ್ನುಳಿದವರು ಬಿಳಿ ಬಟ್ಟೆಯ ಕಚ್ಚೆ ಹಾಕಿ ತಲೆಗೆ ಮುಂಡಾಸು ಕಟ್ಟಿಕೊಂಡು ಬರಿ ಮೈಗೆ ನಾಮ ಬಳಿದು ಕೊಂಡಿರುತ್ತಾರೆ. ರಾಜ ಕುಮಾರನ ವೇಷಧಾರಿ ರಾಜ ಕುಮಾರನಂತೆ ಕಚ್ಚೆ, ಅಂಗಿ, ಕೀರಿಟ ಧರಿಸಿ ಮುಖಕ್ಕೆ ಸಪೇತ(ಬಿಳಿ) ಬಣ್ಣ ಹಚ್ಚಿ ಹಣೆಗೆ ಅಡ್ಡ ಕೆಂಪು ನಾಮದ ಮಧ್ಯೆ ಬೊಟ್ಟುಗಳನ್ನು ಮತ್ತು ಮೀಸೆಯನ್ನು ಇಟ್ಟು ಹುಬ್ಬಿಗೆ ಕಾಡಿಗೆ ಹಾಕಿರುತ್ತಾನೆ.

ಯುವತಿಯ ಪಾತ್ರಾಧಾರಿ ಯುವತಿಯಂತೆ ಸೀರೆ, ರವಿಕೆ, ಕೈ ಬಳೆ, ಕುತ್ತಿಗೆಗೆ ಸರ, ಕಿವಿಗೆ ಬೆಂಡೋಲೆ, ಕಾಲಿಗೆ ಗೆಜ್ಜೆ, ಮುಖಕ್ಕೆ ಬಿಳಿ ಬಣ್ಣದ ಅರ್ಧಾಲ, ತುಟಿಗೆ ಕೆಂಪು ಬಣ್ಣ, ಹಣೆಗೆ ಕೆಂಪು ಬೊಟ್ಟು, ಮೂಗುತಿ, ಕೃತಕವಾದ ತಲೆಗೂದಲನ್ನು ಸಿಕ್ಕಿಸಿ ಸೆಯ್ದು, ಹೂ ಮುಡಿದು ಬೆನ್ನಿನ ಹಿಂದೆ ಇಳಿ ಬಿಟ್ಟಿರುತ್ತಾನೆ. ಅಜ್ಜಿಯ ವೇಷಧಾರಿ ಮುಖಕ್ಕೆ ಬಿಳಿ

ಬಣ್ಣ ಹಚ್ಚಿ. ಅಜ್ಜಿಯ ಮುಖ ಹಣೆ, ಗಲ್ಲಗಳಲ್ಲಿ ನೆರಿಗೆ ಇರುವಂತೆ ಬಿಳಿ ಬಣ್ಣದಿಂದ ನೆರಿಗೆ ಬಿಡಿಸಿ ಹಣೆಯಲ್ಲಿ ಬೊಟ್ಟು, ಹುಬ್ಬಿಗೆ ಬಿಳಿ ಬಣ್ಣವನ್ನು ಹಾಕಿ ಕೃತಕ ತಲೆಕೂದಲನ್ನು ಹಿಂಭಾಗದಲ್ಲಿ ತುರುಬು ಹಾಕಿಕೊಂಡು ತಲೆಗೂದಲಿಗೆ ಬಿಳಿಬಣ್ಣವನ್ನು ಲೇಪಿಸಿ, ಹಳೆಯ ಸೀರೆಯನ್ನುಟ್ಟು ಕೈಯ್ಯಲ್ಲಿ ಜೋಳಿಗೆ ಹಾಗೂ ಕೋಲು ಹಿಡಿದುಕೊಂಡಿರುತ್ತಾನೆ. ಉಳಿದ ವೇಷಧಾರಿಗಳು ಮುಖಕ್ಕೆ ಸಫೇತ ಅರ್ದಲವನ್ನು ಹಚ್ಚಿ ಕೆಲವರು ಮೀಸೆ ಬಳಿದುಕೊಂಡರೆ, ಇನ್ನು ಕೆಲವರು ಮುಖಕ್ಕೆ ಬಿಳಿಬಣ್ಣವನ್ನು ಹಚ್ಚಿ ಹಣೆಗೆ ಅಡ್ಡನಾಮ ಹಾಕಿ ನಡುವೆ ಕೆಂಪುಬೊಟ್ಟನ್ನಿಟ್ಟು ತಲೆಗೆ ಮುಂಡಾಸು ಸುತ್ತಿಕೊಂಡಿರುತ್ತಾರೆ. ಅದೇರೀತಿ ಕೈ, ಎದೆ, ಹೊಟ್ಟೆಗೆ ಮೂರು ಅಡ್ಡನಾಮಗಳನ್ನು ಬಳಿದು ಜನಿವಾರ ಧರಿಸಿ ಕಾಲಿಗೆ ಗೆಜ್ಜೆ ಕಟ್ಟಿಕೊಂಡಿರುತ್ತಾರೆ. ಎಲ್ಲರೂ ತುಟಿಗೆ ಕೆಂಪು ಬಣ್ಣ ಹಚ್ಚಿಕೊಂಡಿರುತ್ತಾರೆ.

ಮನೆಯ ಬಾಗಿಲಿಗೆ ಬರುವ ತಂಡದಲ್ಲಿರುವ ಹಿರಿಯ ವ್ಯಕ್ತಿ ತೆಂಬರೆ ಬಾರಿಸಿ ಸಂಧಿ ಹೇಳುತ್ತಿದ್ದಂತೆ ಆಯಾ ವೇಷಧಾರಿಗಳು ಅವರವರ ವೇಷಕ್ಕೆ ತಕ್ಕಂತೆ ಕುಣಿಯುತ್ತಾರೆ. ಮಾಯಿದ ಜೋಗಿ ಪುರುಷರ ಸಂಧಿ ಇಡೀ ಸಾಹಿತ್ಯ ಜಗತ್ತಿನಲ್ಲೇ ಅತ್ಯಂತ ವಿಶಿಷ್ಟ ಕಥನ ಕಾವ್ಯವಾಗಿ ಪರಿಣಮಿಸಿರುವುದು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರ ಕಲಾತ್ಮಕ ಸೃಜನಶೀಲತೆಗೆ ಸಾಕ್ಷಿಯಾಗಿದೆ. ಸತ್ಯಯುಗದಲ್ಲಿ ಏಳು ಜನ ಜೋಗಿ ಪುರುಷರು ತನ್ನ ಮುದ್ದಿನ ತಂಗಿ ಜೋಗೆತಿಯನ್ನು ಚೆನ್ನಾಗಿ ನೋಡಿಕೊಳ್ಳಿ ಎಂದು ತಮ್ಮ ತಮ್ಮ ಪತ್ನಿಯರಿಗೆ ತಿಳಿಸಿ ಯುದ್ಧಕ್ಕೆ ಹೋಗುತ್ತಾರೆ. ಆದರೆ ಏಳು ಜನ ಜೋಗಿ ಪುರುಷರ ಪತ್ನಿಯರು ನಾದಿನಿ ಜೋಗೆತಿಯ ಮೇಲೆ ಮತ್ಸರ ಪಟ್ಟು ಕಷ್ಟ ಕೊಡುತ್ತಾರೆ. ಒಂದು ದಿನ ಏಳು ಜನ ಜೋಗಿ ಪುರುಷರ ಪತ್ನಿಯರು ಜೋಗೆತಿ ನಾದಿನಿಯನ್ನು ಉಪಾಯವಾಗಿ ಕಾಡಿನಿಂದ ಕಾಡ ಸಂಪಿಗೆ ಹೂಗಳನ್ನು ಕೊಯ್ದುಕೊಂಡು ಬರೋಣವೆಂದು ಹೇಳಿ ಕಾಡಿಗೆ ಕರೆದುಕೊಂಡು ಬರುತ್ತಾರೆ. ಬಳಿಕ ಕಾಡಿನಲ್ಲಿ ಕಾಡ ಸಂಪಿಗೆ ಮರಕ್ಕೆ ಏಣಿ ಇಟ್ಟು ಸಂಪಿಗೆ ಕೊಯ್ದುಕೊಡುವಂತೆ ನಾದಿನಿ ಜೋಗೆತಿಯನ್ನು ಸಂಪಿಗೆ ಮರಕ್ಕೆ ಹತ್ತಿಸಿ ಆಕೆ ಮರದ ಮೇಲೇರುತ್ತಿದ್ದಂತೆ ಮೆಲ್ಲನೆ ಏಣಿಯನ್ನು ತೆಗೆದು ಮರದಲ್ಲೇ ಆಕೆಯನ್ನು ಬಿಟ್ಟು ಏಳೂ ಜನ-ಪತ್ನಿಯರು ಮನೆಗೆ ಹಿಂತಿರುಗುತ್ತಾರೆ.

ಹೀಗಾಗಿ ಜೋಗೆತಿ ನಾದಿನಿಗೆ ಮರದಿಂದ ಇಳಿಯಲಾಗದೆ ದುಃಖಿಸುತ್ತಿದ್ದ ವೇಳೆ ನಡುರಾತ್ರಿ ನಟ್ಟಿರುಳು ಅಳುವ ಶಬ್ದ ಕೇಳಿದ ಹುಲಿಗಳು ನರವಾಸನೆ ಹಿಡಿದು ಮರಕ್ಕೆ ಹತ್ತಿ ಜೋಗೆತಿ ನಾದಿನಿಯನ್ನು ಕೊಂದು ತಿಂದವು. ಹೀಗೆ ಜೋಗೆತಿಯನ್ನು ಹುಲಿಗಳು ತಿನ್ನುತ್ತಿರುವಾಗ ಈಕೆಯ ಬಲದ ಕೈಯ ಕಿರುಬೆರಳು ದೂರಕ್ಕೆ ಬಿದ್ದಿತ್ತು. ಒಂದು ದಿನ ಆ ದಾರಿಯಲ್ಲಿ ಬಂದ ಬಡಜ್ಜಿ ಈ ಒಣಗಿದ್ದ ಕಿರುಬೆರಳನ್ನು ಅರಶಿನದ ತುಂಡೆಂದು ತಿಳಿದು ಅದನ್ನು ತನ್ನ ಜೋಳಿಗೆಯಲ್ಲಿ ಹಾಕಿ ಮನೆಗೆ ತಂದು ಮಡಕೆಯೊಳಗಿದ್ದ ಅಕ್ಕಿಯೊಳಗೆ ಹಾಕಿಟ್ಟಳು. ಅಷ್ಟರಲ್ಲಿ ಯುದ್ಧದಿಂದ ಮನೆಗೆ ಮರಳಿದ ಏಳು ಜನ ಜೋಗಿ ಪುರುಷರು ತಮ್ಮ ಮುದ್ದಿನ ತಂಗಿಯ ಬಗ್ಗೆ ತಮ್ಮ ಪತ್ನಿಯರಲ್ಲಿ ಪ್ರಶ್ನಿಸಿದಾಗ ಅವರೆಲ್ಲರೂ ಪ್ರಾಯದ ಸೊಕ್ಕಿನಿಂದಾಗಿ ಮನೆಯಿಂದ ತಪ್ಪಿಸಿಹೋದ ಈಕೆಯನ್ನು ಹುಲಿ ಕೊಂಡುಹೋಗಿರಬಹುದೆಂದು ತಿಳಿಸಿದರು. ಚಿಂತೆಗೊಳಗಾದ ಏಳು ಜನ ಜೋಗಿ ಪುರುಷರು ಹುಡುಕುತ್ತಾ ಆ ಬಡ ಅಜ್ಜಿಮನೆಗೆ ಬಂದಾಗ, ಮಡಕೆಯೊಳಗಿನಿಂದ ಉದ್ಭವವಾದ ಜೋಗೆತಿತಂಗಿ ನಡೆದ ವೃತ್ತಾಂತವನ್ನೆಲ್ಲಾ ಅಣ್ಣಂದಿರಿಗೆ ತಿಳಿಸಿದಳು. ಇದರಿಂದ ಸಿಟ್ಟುಗೊಂಡ ಏಳು ಜನ ಅಣ್ಣ ತಮ್ಮಂದಿರು ತಮ್ಮ ಏಳೂ ಜನ ಪತ್ನಿಯರಿರುವ ಮನೆಗೆ ಬೆಂಕಿಕೊಟ್ಟು ಅವರನ್ನು ಕೊಂದು ತಂಗಿಯೊಡನೆ ಮಂಗಳೂರಿನ ಮಠಕ್ಕೆ ಬಂದು ಸೋಗ ಬಿಟ್ಟು ಮಾಯವಾದರೆಂಬ ಕಥನ ಕಾವ್ಯ ಸಂಧಿರೂಪದಲ್ಲಿದೆ. ತೆಂಬರೆ ಹಿಡಿದುಕೊಂಡಿದ್ದ ಹಿರಿಯ ವ್ಯಕ್ತಿ ಸಂಧಿ ಹೇಳುತ್ತಾ ತೆಂಬರೆ ಬಡಿಯುತ್ತಿದ್ದಂತೆ ಮಾಯಿದ ಜೋಗಿ ಪುರುಷರು ತಮ್ಮ ತಮ್ಮ ವೇಷಕ್ಕನುಗುಣವಾಗಿ ಕುಣಿಯುತ್ತಾರೆ. ನಂತರ

ಮನೆಮಂದಿ ಗೆರಸೆಯಲ್ಲಿ ನೀಡಿದ ಅಕ್ಕಿ, ಭತ್ತ, ತೆಂಗಿನ ಕಾಯಿ, ಎಲೆ ಅಡಿಕೆ, ವಸ್ತ್ರ ಮೆಣಸು, ಎಣ್ಣೆ, ಹುಳಿ ಹಣ ಇತ್ಯಾದಿ ವಸ್ತುಗಳನ್ನು ತಂಡ ಪಡೆದುಕೊಳ್ಳುತ್ತವೆ.

ತುಳುನಾಡಿನ ಸಂಸ್ಕೃತಿಯ ನಿರ್ಮಾತೃಗಳೂ ರೂವಾರಿಗಳೂ, ರಾಯಭಾರಿಗಳೂ ಆಗಿರುವ ನಲ್ಕೆ,ಅಜಿಲ ಅಥವಾ ಪಾಣಾರ ಸಮುದಾಯ ತುಳುನಾಡಿನ ಪ್ರತೀ ಹಬ್ಬ ಹರಿದಿನ ಋತುಮಾನ, ಹವಾಗುಣ, ಗದ್ದೆ, ಬೇಸಾಯ, ಕೃಷಿ ಚಟುವಟಿಕೆ ಹೀಗೆ ಸಂಸ್ಕೃತಿಯ ಪ್ರತಿಯೊಂದು ಅಂಶಗಳ ಬಗ್ಗೆಯೂ ಸೂಕ್ಷ್ಮ ಗ್ರಾಹಿಗಳಾಗಿ ಆಯಾ ಋತುಮಾನ, ಕಾಲ, ಸಮಯ, ಆರಾಧನೆ, ಆಚರಣೆ, ಚಟುವಟಿಕೆ, ಜವಾಬ್ದಾರಿಗಳ ಬಗ್ಗೆ ಎಲ್ಲರಿಗೂ ನಿರ್ದೇಶನಗಳನ್ನು ಕೊಡುತ್ತಾ ಹಬ್ಬ ಹರಿದಿನ, ಜಾತ್ರೆ, ಆಗಿ ನೇಮ ನಡವಳಿಗಳನ್ನು ಸ್ವಾಗತಿಸಿ ಅವುಗಳ ಮಹತ್ವವನ್ನು ಸಂವಹನ ಮಾಧ್ಯಮದಂತೆ ಸಾರುತ್ತಾ ಸರ್ವರನ್ನು ಎಚ್ಚರಿಸಿ, ಅವರವರ ಜವಾಬ್ದಾರಿ, ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಂತೆ ಪ್ರೇರೇಪಿಸುವ ಲೋಕ ಸಮಷ್ಟಿದೃಷ್ಟಿಯ ಇವರ ಸಮಾಜ ಸೇವೆ ಸ್ತುತ್ಯರ್ಹವಾದುದಾಗಿದೆ.



## ಅಧ್ಯಾಯ – ೭

### ೭. ಉಪ ಸಂಹಾರ :

ಮಲೆನಾಡಿನ ತಪ್ಪಲಿನಿಂದ ತುಳುನಾಡಿನ ಕಡಲ ತಡಿಯವರೆಗೆ ವಿಶಾಲವಾಗಿ ಹಬ್ಬಿರುವ ಭೂ ಪ್ರದೇಶವೇ ತುಳುನಾಡು. ಪ್ರಾಚೀನ ಕಾಲದಿಂದಲೂ ತುಳುನಾಡಿನಲ್ಲಿ ದುಡಿಮೆ, ಪ್ರಕೃತಿ, ನೀರು, ಬೆಳೆ, ಪ್ರಾಣಿ, ಪಕ್ಷಿಗಳನ್ನು ಪೂಜ್ಯ ಭಾವನೆಯಿಂದ ನೋಡಲಾಗುತ್ತಿತ್ತು. ಅದರಲ್ಲೂ ತುಳುನಾಡು ತಗ್ಗು ಪ್ರದೇಶವಾಗಿದ್ದರಿಂದ ಇಲ್ಲಿನ ಪ್ರಾಕೃತಿಕ, ಭೌಗೋಳಿಕ ವಾಯುಗುಣ, ಆಚಾರ ವಿಚಾರಗಳೇ ಮುಂತಾದ ಅಂಶಗಳು ಇತರೆಡೆಗಳ ಸಂಪರ್ಕ, ಸಂಸ್ಕೃತಿಗಳಿಂದ ಪ್ರತ್ಯೇಕಗೊಳಿಸಿದ್ದರಿಂದ ಪ್ರಾಚೀನ ಕಾಲದಿಂದಲೂ ತುಳುನಾಡು ಒಂದು ಪ್ರತ್ಯೇಕ ವಿಶಿಷ್ಟ ಸಂಸ್ಕೃತಿ, ಭಾಷೆ, ಆರಾಧನೆ, ನಂಬಿಕೆ, ನಡವಳಿಕೆಗಳನ್ನು ರೂಢಿಸಿಕೊಳ್ಳಲು ಕಾರಣವಾಯಿತು.

ತುಳುನಾಡಿನ ಇಂತಹಾ ವಿಶಿಷ್ಟ ಸಂಸ್ಕೃತಿಯ ಪ್ರತೀಕವಾಗಿ ಮೂಡಿಬಂದಿರುವುದೇ ದೈವಾರಾಧನೆಯೆಂಬ ವಿಶಿಷ್ಟ ಆರಾಧನಾ ಪದ್ಧತಿ. ತುಳುನಾಡಿನ ಈ ದೈವರಾಧನೆ ಜಗತ್ತಿನಲ್ಲೇ ತುಳುನಾಡ ಸಂಸ್ಕೃತಿ, ಪರಂಪರೆಗೆ ಮಹತ್ತರ ಸ್ಥಾನವನ್ನು ತಂದು ಕೊಟ್ಟಿತು. ಹೀಗೆ ತುಳುನಾಡ ಸಂಸ್ಕೃತಿಯ ಪ್ರತೀಕವಾಗಿರುವ ದೈವಾರಾಧನೆಯನ್ನು ಮೊತ್ತ ಮೊದಲ ಬಾರಿಗೆ ನೇಮ, ಕೋಲ, ಬಂಡಿ, ವಲಸರಿ, ದೊಂಪದ ಬಲಿ ಮುಂತಾದ ವಿವಿಧ ಪ್ರಕಾರಗಳ ಮೂಲಕ ಕೈಗೊಂಡು ತುಳುನಾಡಿನ ಭವ್ಯ ಸಂಸ್ಕೃತಿಯ ರಕ್ಷಕರಾಗಿ ವಾಹಕರಾಗಿ, ಪ್ರತಿನಿಧಿಗಳಾಗಿ, ರೂವಾರಿಗಳಾಗಿ, ರಾಯಭಾರಿಗಳಾಗಿ ತುಳುನಾಡ ಸಂಸ್ಕೃತಿಯ ಅನನ್ಯತೆಗೆ ಕಾರಣರಾದವರು ನಲ್ಕೆ,ಅಜಿಲ ಅಥವಾ ಪಾಣಾರ ಸಮುದಾಯದವರು ಮೊದಲಿಗರಾಗಿದ್ದಾರೆ.

ಮೂಲ ದ್ರಾವಿಡ ಜನಾಂಗದವರಾದ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಅತ್ಯಂತ ಪ್ರಾಚೀನ ಕಾಲದಿಂದಲೂ ಆರಾಧಿಸಲ್ಪಡುತ್ತಿದ್ದ ದೈವಾರಾಧನೆಯನ್ನು ದ್ರಾವಿಡ ಶೈಲಿಯಲ್ಲಿ ಆಚರಿಸಲ್ಪಡುತ್ತಾ ಕ್ರಮೇಣ ಈ ಆರಾಧನೆಗಳಿಗೆ ಹಂತ ಹಂತವಾಗಿ ಸಂಸ್ಕಾರ ರೂಪ ಕೊಡುತ್ತಾ ಬೇರೆ ಬೇರೆ ಭಾಗಗಳಿಗೆ ಚದುರಿ ಅಲ್ಲಿನ ಭೌಗೋಳಿಕತೆ, ನಂಬಿಕೆಗಳಿಗೆ ತಕ್ಕಂತೆ ದೈವರಾಧನೆಯಲ್ಲಿ ತೊಡಗಿಸಿಕೊಂಡಿತು. ಪ್ರಾಚೀನ ಕಾಲದಲ್ಲಿ ಶ್ರೀಲಂಕಾದ ಜಾಪ್ನಾದಲ್ಲಿ ಹೆಚ್ಚಾಗಿ ನೆಲೆ ಕಂಡುಕೊಂಡಿದ್ದ ಈ ಸಮುದಾಯ ನಂತರ ತಮಿಳುನಾಡು, ಆಂಧ್ರ ಪ್ರದೇಶಗಳಲ್ಲೂ ದೈವಾರಾಧನೆ, ಹಾಡು, ಕುಣಿತಗಳ ಮೂಲಕ ಅಲ್ಲಿ ರಾಜ ಮಹಾ ರಾಜರ ಆಸ್ಥಾನಗಳಲ್ಲಿ ಸ್ಥಾನಮಾನಗಳನ್ನು ಪಡೆದುಕೊಂಡಿತ್ತು. ಕ್ರಮೇಣ ರಾಜಕೀಯದ ಅರಾಜಕತೆಯ ಪರಿಣಾಮವಾಗಿ ಒಂದು ತಂಡ ಉತ್ತರ ಭಾರತದ ಕಡೆಗೂ ಇನ್ನೊಂದು ತಂಡ ತಮಿಳುನಾಡು, ಕೇರಳ, ಶೃಂಗೇರಿ ಕುಂದಾಪುರ, ಉಡುಪಿ ಮತ್ತು ತುಳುನಾಡಿನ ಹಲವು ಕಡೆಗಳಲ್ಲಿ ನೆಲೆ ಕಂಡುಕೊಂಡು ಬೇರೆ ಬೇರೆ ಹೆಸರುಗಳಿಂದ ಗುರುತಿಸಲ್ಪಟ್ಟಿತ್ತು. ಹೀಗಾಗಿ ತುಳುನಾಡಿನಲ್ಲಿ ಆವರೆಗೆ ಅಗೇಲು (ಎಡೆ ಬಿಡಿಸುವುದು) ತಂಬಿಲ, ಹರಕೆಗಳ ಮೂಲಕವಷ್ಟೇ ನಡೆಯುತ್ತಿದ್ದ ದೈವಾರಾಧನೆ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ತುಳುನಾಡು ಪ್ರವೇಶಿಸಿದ ಬಳಿಕ ಹೊಸ ರೂಪವನ್ನು ಪಡೆದುಕೊಳ್ಳುವಂತಾಯಿತು. ಕೇವಲ ದೈವಾರಾಧನೆಯನ್ನಷ್ಟೇ ನಂಬಿಕೊಂಡಿರದ ಈ ಜನಾಂಗ ತಮ್ಮ

ಮೂಲದಿಂದಲೇ ಬಂದಿರುವ ನಾಟಿ ಔಷಧಿ ನೀಡುವ ಮತ್ತು ಮಾಂತ್ರಿಕ ಜ್ಯೋತಿಷ್ಯ, ಹಾಳೆಯ ಮುಟ್ಟಾಳೆ ತಯಾರಿ, ಚಾಪೆ ಮುಂತಾದ ಗೃಹಕೈಗಾರಿಕೆಗಳನ್ನು ಸಹಾ ತಮ್ಮ ಉಪವೃತ್ತಿಯನ್ನಾಗಿ ಮಾಡಿಕೊಂಡು ಜೀವನ ಸಾಗಿಸುತ್ತಿದ್ದರು.

ಪ್ರಾಚೀನ ಕಾಲದಿಂದಲೇ ತುಳುನಾಡು ದೈವಾರಾಧನೆಯ ನೆಲೆವೀಡು. ಹಾಗಾಗಿ ಇಲ್ಲಿ ಪ್ರಾಚೀನ ಕಾಲದಿಂದಲೂ ದೇವರಿಗಿಂತಲೂ ದೈವ-ಭೂತಗಳನ್ನು ಮೊದಲು ಭಯ-ಭಕ್ತಿಯಿಂದ ನಂಬಿ ನಂತರವಷ್ಟೇ ದೇವರಿಗೆ ಪೂಜಾದಿ ಕಾರ್ಯವನ್ನು ಕೈಗೊಳ್ಳುವ ಕ್ರಮವಿದೆ. ಈ ಕಾರಣಕ್ಕಾಗಿಯೇ ಮೊತ್ತಮೊದಲು ತುಳುನಾಡಿನಲ್ಲಿ ಅತೀ ಪ್ರಾಚೀನ ಕಾಲದಿಂದಲೇ ಪ್ರತೀ ಊರು, ಗ್ರಾಮ, ಬೀಡು ಅರಮನೆಗಳಲ್ಲಿ ದೇವಸ್ಥಾನಗಳ ಬದಲು ದೈವದ ಗುಡಿ ಗುಂಡ, ತಾನ, ಆಲಡೆಗಳೇ ರಚನೆಗೊಂಡಿದ್ದವು, ತುಳುನಾಡಿನಲ್ಲಿ ಮೊತ್ತಮೊದಲು "ಬಿರ್ಮೆರ್" ಎಂಬ ದೈವವನ್ನು (ವೀರ ಮರಣ ಹೊಂದಿದ ಮಾಯಾ ಸ್ವರೂಪಿ) ಅಗೇಲು, ಪರ್ವ, ತಂಬಿಲಗಳ ಮೂಲಕವಷ್ಟೇ ಪೂಜಿಸಲಾಗುತ್ತಿದ್ದ ದೈವಾರಾಧನೆಯನ್ನು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರು ನೇಮ, ಕೋಲಗಳ ಮೂಲಕ ಅರಾಧಿಸತೊಡಗಿದರು.

ಆದರೆ ನಂತರ ತುಳುನಾಡಿಗೆ ಬಂದ ಬೌದ್ಧರು ಮತ್ತು ಜೈನರೂ ಸಹಾ ನಾಗ ಬ್ರಹ್ಮ, ಯಕ್ಷ, ಯಕ್ಷಿಣಿ ಗಂಧರ್ವ ಮುಂತಾದ ಮಾಯಾ ಶಕ್ತಿಗಳನ್ನು ಆರಾಧಿಸತೊಡಗಿದ್ದರು. ಆದರೆ ನಂತರ ಭಾರತವನ್ನು ಪ್ರವೇಶಿಸಿದ ಆರ್ಯರು ವೈದಿಕ ಆಚರಣೆ ಆರಾಧನೆಗಳನ್ನು ನಡೆಸುತ್ತಾ ತುಳುನಾಡಿನಲ್ಲಿ ಆರಾಧಿಸಲ್ಪಡುತ್ತಿದ್ದ "ಬಿರ್ಮೆರ್" ದೈವವನ್ನು ನಾಗಬ್ರಹ್ಮನೆಂದು ನಂಬಿಸಿದರು. ಅಲ್ಲದೆ ನಲ್ಕೆ ಸಮುದಾಯದವರು ನಾಗ ಕೋಲ, ಡಕ್ಕೆ ಬಲಿಯ ಮೂಲಕ ಕೈಗೊಳ್ಳುತ್ತಿದ್ದ ದೈವಾರಾಧನೆಯನ್ನು ವೈದಿಕರು ನಾಗ ಮಂಡಲೋತ್ಸವದಂತಹಾ ತಮ್ಮ ವೈದಿಕ ಆಚರಣೆಗಳಲ್ಲಿ ಕ್ರೋಢೀಕರಿಸಿಕೊಂಡರು. ಹೀಗೆ ತುಳುವರ ಬಿರ್ಮೆರ ದೈವದ ಆರಾಧನೆಯನ್ನು ಆರ್ಯರು ವೈದಿಕ ರೀತಿಯಲ್ಲಿ ಆಚರಣೆಗೆ ತೊಡಗಿದಾಗ ಮೊದಲಿಂದಲೇ ದೈವಾರಾಧನೆಯಲ್ಲಿ ತೊಡಗಿ ಪ್ರಸಿದ್ಧರಾಗಿದ್ದ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ತಾವೂ ಸಹಾ ದೈವಾರಾಧನೆ ಮತ್ತು ನಾಗಪೂಜೆಗಳ ಮೂಲಕ ವೈದಿಕರಿಗೆ ಪ್ರತಿಸ್ಪರ್ಧೆ ನೀಡಲು ದೈವಾರಾಧನೆಯಲ್ಲಿ ಹೆಚ್ಚಾಗಿ ತೊಡಗಿದರು. ಹೀಗಾಗಿ ಇಂದಿಗೂ ಸಹಾ ಬಿರ್ಮೆರೆ ಕೋಲ ಅಥವಾ ನಾಗ ಬಿರ್ಮೆರೆ ನೇಮ, ನಾಗಕೋಲ, ಕುದುರೆಕೋಲ ಮತ್ತು ಡಕ್ಕೆ ಬಲಿ ಸೇವೆಯನ್ನು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಲ್ಲದೆ ದೈವಾರಾಧನೆಯಲ್ಲಿ ತೊಡಗಿರುವ ಇತರ ಯಾವುದೇ ಜನಾಂಗಗಳು ಕೈಗೊಳ್ಳುವಂತಿಲ್ಲವೆಂಬ ಕಡ್ಡಾಯ ನಿಯಮವಿದೆ. ಇದು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ಮೊತ್ತಮೊದಲು ದೈವಾರಾಧನೆಯ ವೃತ್ತಿಯಲ್ಲಿ ತೊಡಗಿಸಿಕೊಂಡಿರುವುದರ ಪ್ರಾಚೀನತೆಯನ್ನು ತಿಳಿಸುತ್ತದೆ.

ಹೀಗೆ ಮೊತ್ತ ಮೊದಲು ದೈವಾರಾಧನೆಗೆ ನಿರ್ದಿಷ್ಟ ಸ್ವರೂಪವನ್ನು ನೀಡಿದ ಈ ಸಮುದಾಯ ತಾವು ಹುಟ್ಟು ಹಾಕಿದ ಹಲವಾರು ದೈವಗಳು ಮತ್ತು ಅವುಗಳ ಹುಟ್ಟಿಗೆ ಕಾರಣವಾದ ಅಂಶಗಳು, ಆಗಿನ ಸನ್ನಿವೇಶದ ಪರಿಸ್ಥಿತಿ, ರಾಜರ ಆಡಳಿತ-ಒಡೆತನ, ಅಧಿಕಾರ-ಅಂತಸ್ತು, ಆಚಾರ-ವಿಚಾರ-ಸಂಸ್ಕೃತಿ ಎಲ್ಲವೂ ಅವರೇ ಮೊತ್ತ ಮೊದಲು ಹೆಣೆದ ದೈವಾರಾಧನೆಯ ಕಥನ ಕಾವ್ಯವಾದ ಸಂಧಿಯಲ್ಲಿ ಅಂತರ್ಗತಗೊಂಡಿದೆ. ಅದೇ ರೀತಿ ತಾವು ಕೈಗೊಳ್ಳುವ ದೈವದ ಬಗ್ಗೆ ಸಮಾಜ ಮತ್ತು ಭಕ್ತರಿಗೆ ನಂಬಿಕೆ ಬರುವಂತೆ ತಾವೇ ರೂಢಿಸಿಕೊಂಡಿರುವ ವಿಶಿಷ್ಟ ಛಂದೋ ಶೈಲಿಯುಕ್ತ ಮಾತು, ನುಡಿಕಟ್ಟು, ಬೀರ, ಪಾರಿ, ಹದಿನಾರು ಅವತಾರ, ಕುಣಿತ, ಆರ್ಭಟ, ವೇಷಭೂಷಣ, ಅಲಂಕಾರ, ಮುಖ ವರ್ಣಿಕೆ, ಪ್ರಭಾವಳಿ (ಅಣಿ) ಗಗ್ಗರ (ಕಾಲ್ಗಡಗ), ದೀವಟಿಕೆ, ಬೆಂಕಿಯೊಡನೆ ಸರಸ, ಹಿಡಿದುಕೊಳ್ಳುವ ಸವಾಲೊ ಖಡ್ಗ, ಗುರಾಣಿ, ಬಿಲ್ಲು, ಬಾಣ, ತ್ರಿಶೂಲ, ಬಾರಣೆ ಇವೆಲ್ಲವೂ ಭ್ರಮಾತ್ಮಕ ದೈವಿಕನೆಲೆಯ ಪರಿಕಲ್ಪನೆಯನ್ನು ಮೂಡಿಸುತ್ತದೆ. ಕೇವಲ ದೈವಾರಾಧನೆಗೆ ಸಂಬಂಧಿಸಿದ

ಕುಣಿತಗಳನ್ನು ಮಾತ್ರ ರೂಢಿಸಿಕೊಂಡಿರದ ಈ ಸಮುದಾಯ ಕಾಲಬದ್ಧ ಆಚರಣಾತ್ಮಕ ಕುಣಿತಗಳನ್ನೂ, ಋತುಮಾನೀಯ, ವ್ಯವಸಾಯ ಸಂಬಂಧಿ ಕುಣಿತ, ಮನೋಚಿಕಿತ್ಸಕ, ಮಾಂತ್ರಿಕ ಕುಣಿತ ಇತ್ಯಾದಿ ಕುಣಿತಗಳನ್ನೂ ಸಹಾ ಮೊತ್ತ ಮೊದಲು ಸೃಷ್ಟಿಸಿದರು.

ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ಮೊತ್ತ ಮೊದಲು ತುಳುನಾಡಿಗೆ ಪ್ರವೇಶಿಸಿ ದೈವಾರಾಧನೆಯಲ್ಲಿ ತೊಡಗಿಸಿಕೊಂಡಾಗ ತುಳುನಾಡಿನೆಲ್ಲೆಡೆ ಬಹುತೇಕರು ಅದನ್ನು ಒಪ್ಪಿಕೊಂಡಿರದೆ, ವೈದಿಕರಂತೆಯೇ ಜನಾಂಗವನ್ನು ಅಸ್ಪೃಶ್ಯ ಭಾವನೆಯಿಂದ ದೂರವಿಟ್ಟರು. ಆದರೆ ಇದಾವುದಕ್ಕೂ ಮಣಿಯದ ಈ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ದೈವಾರಾನೆಯನ್ನೇ ತಮ್ಮ ಮೂಲ ವೃತ್ತಿ ಮತ್ತು ಬದುಕಿನ ಮೂಲವನ್ನಾಗಿಸಿ ಸತ್ಯ, ಪ್ರಮಾಣಿಕತೆಯಿಂದ ಅದರಲ್ಲಿ ತೊಡಗಿಸಿಕೊಂಡಾಗ ನಂತರ ತುಳುವರೆಲ್ಲರೂ ದೈವಾರಾಧನೆಯೇ ತುಳುವರ ಬದುಕು-ಭಾವನೆಗಳನ್ನು ನಿರ್ದೇಶಿಸಿ, ನಿಯಂತ್ರಿಸುವ ವ್ಯವಸ್ಥೆಯೆಂದು ನಂಬಿದರು. ಆದರೆ ಕ್ರಮೇಣ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದ ವಿರುದ್ಧ ಪಿತೂರಿ, ಷಡ್ಯಂತ್ರಗಳು ನಡೆಯತೊಡಗಿದಾಗ ಕಂಗೆಟ್ಟಿದ್ದ ಈ ಸಮುದಾಯಕ್ಕೆ ಇರುವ ಶಕ್ತಿ ಸಾಮರ್ಥ್ಯಗಳನ್ನು ಅರಿತ ಶೃಂಗೇರಿ ಮಠದವರು ಆಸರೆ ನೀಡಿ ಮತ್ತೆ ಈ ಸಮುದಾಯದ ಪುನರುಜ್ಜೀವನಕ್ಕೆ ಮುಂದಾದರು. ಆದರೆ ಅಲ್ಲಿಯೂ ಈ ಜನಾಂಗಕ್ಕೆ ಮತ್ತೆ ಶೋಷಣೆ ಹೆಚ್ಚಾದಾಗ ಅಲ್ಲಿಂದ ಹೊರಬರಬೇಕಾಯಿತು. ಇದೇವೇಳೆ ಧರ್ಮರಾಜಕಾರಣದ ವಿಪ್ಲವಗಳು ಘಟಿಸತೊಡಗಿ ಹಿಂದೂ ಮತ್ತು ಜೈನ ಧರ್ಮಗಳೊಳಗೆ ಭಿನ್ನಾಭಿಪ್ರಾಯಗಳು ಹೆಚ್ಚಾಗತೊಡಗಿ ಒಂದು ಹಂತದಲ್ಲಿ ಜೈನ ಮಠ, ಬಸದಿ, ಚೈತ್ಯಾಲಯಗಳಿಗೆ ಬೆಂಕಿ ಹಚ್ಚಿ ನಾಶ ಪಡಿಸುವ ಹಂತದವರೆಗೂ ಮುಂದುವರಿಯಿತು. ಇಂತಹಾ ಘಟನೆಗಳು ಉತ್ತರ ಕನ್ನಡದ ಹಲವೆಡೆಗಳಲ್ಲಿ ನಡೆಯಿತಾದರೂ ದಕ್ಷಿಣ ಕನ್ನಡ ಭಾಗದಲ್ಲಿ ಅದರಲ್ಲೂ ತುಳುನಾಡಿನಲ್ಲಿ ಈ ರೀತಿಯ ಘಟನೆಗಳು ಘಟಿಸಿರಲಿಲ್ಲ. ಆದರೂ ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಇಂತಹಾ ಘಟನೆಗಳು ನಡೆಯಬಹುದೆಂಬ ಸಂಶಯದಿಂದ ಆಗ ಪ್ರಾಬಲ್ಯತೆಯಲ್ಲಿದ್ದ ಜೈನ ಅರಸರು ತಮ್ಮ ಧರ್ಮ ಮತ್ತು ಬಸದಿ, ಮಠ, ಚೈತ್ಯಾಯಲಗಳ ರಕ್ಷಣೆಗಾಗಿ ಮಠ-ಮಾನ್ಯಗಳಲ್ಲಿ ದೈವ-ಭೂತಗಳನ್ನು ಪ್ರತಿಷ್ಠಾಪಿಸಿ, ಅವುಗಳಿಗೆ ಭೂತಬಲಿ, ಅಗೇಲು, ಪರ್ವ, ನೇಮ, ನಡಾವಳಿ ಮುಂತಾದ ದೈವಾರಾಧನಾ ವಿಧಿ ವಿಧಾನಗಳನ್ನು ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯದವರಿಂದ ಮಾಡಿಸಲು ಮುಂದಾದರು. ಅಲ್ಲದೆ ಈ ಸಮುದಾಯದ ಸೇವೆಯನ್ನು ಮನಗಂಡು ಈ ಸಮುದಾಯದವರಿಗೆ ಜೀವನ ನಿರ್ವಹಣೆಗಾಗಿ ಅಜಲುಭೂಮಿಯನ್ನು ನೀಡಿ ಸಮಾಜದಲ್ಲಿ ಗೌರವ ಸ್ಥಾನ ಮಾನಗಳು ದೊರಕುವಂತೆ ಮಾಡಿದರು.

ಅತ್ಯಂತ ಪ್ರಾಚೀನಕಾಲದಲ್ಲಿ ತುಳುನಾಡಿನಲ್ಲಿ ಸಂವಿಧಾನ, ಸರ್ಕಾರ, ಕಾನೂನು, ನೀತಿ ಇದ್ಯಾವ ವ್ಯವಸ್ಥೆಗಳೂ ರೂಪಿತವಾಗದಿದ್ದ ಕಾಲದಲ್ಲೂ ತುಳುನಾಡಿನಲ್ಲಿ ದೈವಾರಾಧನೆಯನ್ನು ಈ ಸಮುದಾಯ ತಮ್ಮ ಬದುಕಿನ ಮೂಲವನ್ನಾಗಿಸಿಕೊಂಡರು. ಆ ಮೂಲಕ ಶೋಷಿತರ ಪರ ನಿಂತು ಸಾಮಾಜಿಕ, ಧಾರ್ಮಿಕ, ಹೆಚ್ಚೇಕೆ ರಾಜ ಪ್ರಭುತ್ವದ ದರ್ಬಾರನ್ನೂ ಪ್ರಶ್ನಿಸಿದರು. ಮೇಲ್ವರ್ಗದ ಶ್ರೀಮಂತರ, ಅಧಿಕಾರ, ಅಂತಸ್ತು, ದಬ್ಬಾಳಿಕೆ, ಜಾತಿ ವೈಷಮ್ಯವನ್ನು ನಿಯಂತ್ರಿಸಿದರು. ಸತ್ಯ, ಧರ್ಮ, ನ್ಯಾಯ ನೀತಿಗೆ ತಪ್ಪಿದವರನ್ನು ಎಚ್ಚರಿಸುತ್ತಾ, ಸಮಾಜ ಮತ್ತು ಸಮುದಾಯಗಳ ಮಧ್ಯೆ ದೈವದ ಪ್ರತಿನಿಧಿಯಾಗಿ ನಿಂತು, ನ್ಯಾಯಾಧೀಶರಂತೆ ಧೈರ್ಯವಾಗಿ ತೀರ್ಮಾನಗಳನ್ನು ಕೈಗೊಂಡರು. ವಿಜ್ಞಾನಿಯಂತೆ ಭೂತ, ವರ್ತಮಾನ, ಭವಿಷ್ಯತ್ತಿನ ಕಾರಣ ಕಾರ್ಯಗಳ ಬಗ್ಗೆ ನಿಖರ ನಿರ್ಧಾರ, ಸಿದ್ಧಾಂತಗಳನ್ನೂ ರೂಪಿಸುತ್ತಾ, ರಾಜನೀತಿಜ್ಞನಂತೆ

ರಾಜಕೀಯ, ರಾಜಪ್ರಭುತ್ವ ಆಡಳಿತ, ಸನ್ನಿವೇಶಗಳ ಬಗ್ಗೆ ವಿಶ್ಲೇಷಿಸುತ್ತಾ, ಮನಶಾಸ್ತ್ರಜ್ಞನಂತೆ ಸಮಾಜ ಮತ್ತು ಸಮುದಾಯಗಳ ನೆಮ್ಮದಿ ಹಾಗೂ ಸ್ವಾಸ್ಥ್ಯ ಕಾಪಾಡಿದರು. ವೈದ್ಯನಂತೆ ಮದ್ದು ಮೂಲಿಕೆ ಚಿಕಿತ್ಸೆಗಳ ಮಾಹಿತಿ ನೀಡುತ್ತಾ, ಕವಿ, ಸಾಹಿತಿಯಂತೆ ವಿಶಿಷ್ಟಶೈಲಿಯ ಲಯಬದ್ಧ ಮಾತಿನ ಅಭಯ ಕೊಡುತ್ತಾ, ಸಂಗೀತಗಾರನಂತೆ ಸಂಧಿ ಹೇಳುತ್ತಾ ಕುಣಿಯುವ ಮೂಲಕವೇ ಭಕ್ತಿಯನ್ನು ದೈವಕ್ಕೆ ಅರ್ಪಿಸಿದರು. ಹೀಗೆ ತುಳುನಾಡಿನ ಎಲ್ಲ ಅಧಿಕಾರ, ಅಂತಸ್ತು ಸಮಾಜವನ್ನು ಪ್ರತಿನಿಧಿಸಿ ನಿರ್ದೇಶಿಸಿ ಮುನ್ನಡೆಸುವ ಹೊಣೆಗಾರಿಕೆಯನ್ನು ತುಳುನಾಡಿನಲ್ಲಿ ಮೊತ್ತಮೊದಲ ಬಾರಿಗೆ ನಿರ್ವಹಿಸಿದವರು ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯದವರು. ಊರವರು ತಮಗೆ ಒಪ್ಪಿಸಿದಕಾರ್ಯವನ್ನು ಚಾಚೂ ತಪ್ಪದೆ ಮಾಡಿಮುಗಿಸುವ ನಿಷ್ಣಾತರಾದ ಇವರು ಅನಕ್ಷರಸ್ಥರಾದರು ಯಾವತ್ತೂ ಸಂಯಮ, ಸಭ್ಯತೆ, ಶಿಷ್ಟಾಚಾರ ಮೀರುವವರಲ್ಲ. ಶುದ್ಧಾಚಾರಿಗಳಾಗಿ ಸದಾ ಶುಭ್ರ ವಸ್ತ್ರಗಳನ್ನು ಧರಿಸುತ್ತಾರೆ. ತಿನ್ನುವ ಆಹಾರದಲ್ಲೂ ಮಡಿವಂತಿಕೆ ಮೆರೆಯುವ ಇವರು ಹಳಸಿದ ವಸ್ತು, ತಂಗಳನ್ನ, ಎಂಜಲು ವಸ್ತುಗಳನ್ನು ತಿನ್ನುವುದು ನಿಷಿದ್ಧ. ಮಾಂಸಾಹಾರಿಗಳಾದರೂ ದನ, ಹಂದಿ, ಕೋಣ ಮುಂತಾದ ಪ್ರಾಣಿಗಳ ಮಾಂಸ ತಿನ್ನುವುದು ನಿಷಿದ್ಧ. ಒಂದು ವೇಳೆ ಅಪ್ಪಿ ತಪ್ಪಿ ಅವುಗಳ ಮಾಂಸ ಸ್ಪರ್ಶಿಸಿದರೂ ಸಹಾ ತಮ್ಮ ಮೂಲದ ಕುಲದೇವರಾದ ಶೃಂಗೇರಿ ಶಾರದೆಗೆ ಕಡ್ಡಾಯವಾಗಿ ತಪ್ಪು ಕಾಣಿಕೆಯನ್ನೊಪ್ಪಿಸಲೇಬೇಕೆಂಬ ಕಡ್ಡಾಯ ನಿಯಮವಿದೆ. ಯಾರಲ್ಲೂ ಧ್ವನಿಎತ್ತಿ ಮಾತನಾಡದೆ ನಯವಿನಯ ಮಾತಿನಿಂದ ಎಲ್ಲರನ್ನೂ ಗೌರವದಿಂದ ಕಾಣುವ ಸ್ವಭಾವದವರಾದ ಈ ಸಮುದಾಯ ಎದುರಿಗೆ ಸಿಕ್ಕಿದ ಹಿರಿಯರು, ಗೌರವಸ್ಥ ಮನೆತನದವರು, ಹಾಗೂ ತಮಗೆ ಪ್ರೀತಿಪಾತ್ರರಾದವರನ್ನು ಪ್ರಾಚೀನಕಾಲದಲ್ಲಿ "ಅಡ್ಡ ಬೂರುಯೆ ಉಳ್ಳಯ" (ಅಡ್ಡ ಬಿದ್ದಿದ್ದೇನೆ ಬುದ್ದಿ) ಎಂದು ಕೈಮುಗಿದು ಕೃತಜ್ಞತೆಯನ್ನು ತೋರ್ಪಡಿಸುತ್ತಿದ್ದರು.

ಸ್ತ್ರೀಯರನ್ನು ಅಬಲೆಯರೆಂದು ತಿಳಿದಿದ್ದ ಅತ್ಯಂತ ಪ್ರಾಚೀನಕಾಲದಲ್ಲೇ ಮೊತ್ತ ಮೊದಲ ಬಾರಿಗೆ ಸ್ತ್ರೀಯರಿಗೆ ಸ್ವಾತಂತ್ರ್ಯವನ್ನು ಕೊಟ್ಟವರು ದ್ರಾವಿಡ ಜನಾಂಗದವರು. ಹೀಗಾಗಿ ಮೂಲದ್ರಾವಿಡರಾದ ಆದ ನಲ್ಕೆ ಅಜಿಲ ಅಥವಾ ಪಾಣಾರ ಸಮುದಾಯ ತುಳುನಾಡಿನಲ್ಲಿ ಮೊತ್ತ ಬಾರಿಗೆ ದೈವಾರಾಧನೆಯ ಶಾಸ್ತ್ರೋಕ್ತ ಧಾರ್ಮಿಕ ವ್ಯವಸ್ಥೆಯಲ್ಲೂ ಸ್ತ್ರೀಯರಿಗೆ ತೆಂಬರೆ ಬಡಿದು ಸಂಧಿ ಹೇಳಿಸಿ ನೃತ್ಯ, ಕುಣಿತಗಳಲ್ಲಿ ತೊಡಗಿಸಿಕೊಳ್ಳುವಂತಹ ಕ್ರಾಂತಿಕಾರೀ ದಿಟ್ಟ ಹೆಜ್ಜೆ ಇಡುವ ಮೂಲಕ ಸ್ತ್ರೀ ಸ್ವಾತಂತ್ರ್ಯಕ್ಕೆ ಪ್ರಾಧಾನ್ಯತೆ ನೀಡಿದ್ದಾರೆ. ಈ ಸಮುದಾಯದ ಸ್ತ್ರೀಯರು ಕೇವಲ ದೈವಾರಾಧನೆ ಸಂದರ್ಭ ಸಂಧಿ ಹೇಳುವುದಕ್ಕಷ್ಟೇ ಸೀಮಿತಗೊಳ್ಳದೆ ಸ್ವತಃ ತಾವೇ ಹಲವು ರೋಗಗಳಿಗೆ ಗಿಡಮೂಲಿಕೆಗಳ ಔಷಧಿ ನೀಡುವುದರಲ್ಲಿಯೂ, ಹೆರಿಗೆ ಮಾಡಿಸುವುದರಲ್ಲಿಯೂ,ಪ್ರಾವಿಣ್ಯರಾಗಿದ್ದರು. ಮಾತ್ರವಲ್ಲ ತಮ್ಮ ಉಪಕಸುಬುಗಳಾದ ಮುಟ್ಟಾಳೆ ತಯಾರಿಯ ವೇಳೆ ಮುಟ್ಟಾಳೆಗೆ ಕಲಾತ್ಮಕ ಹೆಣಿಗೆ ಹಾಕುವುದರಲ್ಲೂ, ಚಾಪೆ ತಯಾರಿ, ಬುಟ್ಟಿ ಹೆಣಿಗೆ, ಮುಂತಾದ ಪ್ರವೃತ್ತಿಯಲ್ಲೂ ಹೆಚ್ಚು ನಿಪುಣರಾಗಿದ್ದಾರೆ. ಹೀಗೆ ನಲ್ಕೆ, ಅಜಿಲ ಅಥವಾ ಪಾಣಾರ ಸಮುದಾಯ ತುಳುನಾಡಿನಲ್ಲಿ ಮೊತ್ತಮೊದಲ ಬಾರಿಗೆ ದೈವಾರಾಧನೆಯಲ್ಲಿ ತೊಡಗಿಸಿಕೊಂಡು ತುಳುನಾಡ ಸಂಸ್ಕೃತಿಗೆ ವಿಶಿಷ್ಟ ಮೆರುಗನ್ನು ನೀಡುವ ಮೂಲಕ ತುಳುನಾಡಿನ ದೈವಾರಾಧನೆಗೆ ಇಡೀ ಜಗತ್ತಿನಲ್ಲೇ ಅತ್ಯಂತ ವೈಶಿಷ್ಟ್ಯತೆ ಬರಲು ಕಾರಣರಾಗಿದ್ದಾರೆ. ಹಾಗೆಯೇ ತುಳುನಾಡ ಸಂಸ್ಕೃತಿಯ ಸಂರಚನೆಯಲ್ಲಿ ಮತ್ತು ಅದರ ರಕ್ಷಣೆಯಲ್ಲಿ ಪ್ರಧಾನ ಪಾತ್ರ ವಹಿಸಿದ ಇವರು ತುಳುನಾಡಿನಲ್ಲಿ ತನ್ನ ಸಾಂಸ್ಕೃತಿಕ ಅನನ್ಯತೆಯಿಂದಲೂ ವಿಶಿಷ್ಟ ಸ್ಥಾನವನ್ನು ಪಡೆದುಕೊಳ್ಳುವಂತಾಗಿದೆ.



**ಪರಾಮರ್ಶನಾ ಗ್ರಂಥಗಳು :**


೧. ಡಾ. ಅಭಯ ಕುಮಾರ್ ೧೯೯೭, ಮೊಗೇರರ ಆಚರಣೆಗಳು ಮತ್ತು ಕುಣಿತಗಳು
* ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ – ಮಂಗಳೂರು

೨. ಡಾ. ಅರವಿಂದ ಮಾಲಗತ್ತಿ ೧೯೯೧ ಭೂತಾರಾಧನೆಯ ಸಾಂಸ್ಕೃತಿಕ ಮತ್ತು ಸಾಮಾಜಿಕ ಚಿಂತನೆ
* ಶೈಲ ಪ್ರಕಾಶನ ಮುದ್ದೇಬಿಹಾಳ

೩. ಗಣಪತಿ ರಾವ್ ಐಗಳ್ ಎಂ. ೧೯೯೨ ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ

೪. ಡಾ. ಚಿನ್ನಪ್ಪ ಗೌಡ, ೧೯೮೩ ಭೂತಾರಾಧನೆ ಕೆಲವು ಅಧ್ಯಯನಗಳು
* ತುಳುವ ಪ್ರಕಾಶನ ಮಂಗಳೂರು

೫. ಡಾ. ಚಿನ್ನಪ್ಪ ಗೌಡ, ೧೯೯೦, ಭೂತಾರಾಧನೆ ಜಾನಪದೀಯ ಅಧ್ಯಯನ
* ಮದಿಪು ಪ್ರಕಾಶನ ಮಂಗಳ ಗಂಗೋತ್ರಿ

೬. ಡಾ. ಪಾಲಾಡಿ ರಾಮಕೃಷ್ಣಾಚಾರ್ ೧೯೯೨ ಜನಪದ ಕುಣಿತಗಳು
* ಕರ್ನಾಟಕ ಸಂಘ ಪುತ್ತೂರು

೭. ಡಾ. ಪಾಲ್ತಾಡಿ ರಾಮಕೃಷ್ಣಚಾರ್ ೧೯೯೯ ತುಳುನಾಡು ನುಡಿ
* ಕರ್ನಾಟಕ ಸಂಘ ಪುತ್ತೂರು

೮. ಡಾ. ಪಾಲ್ತಾಡಿ ರಾಮಕೃಷ್ಣಚಾರ್ ೧೯೯೯ ಸಂವಹನ ಮಾಧ್ಯಮವಾಗಿ ಜನಪದ ಕುಣಿತಗಳು
* ಮಂಗಳೂರು ವಿ.ವಿ. ಮಂಗಳಗಂಗೋತ್ರಿ

೯. ಡಾ. ರಮೇಶ್ ಕೆ.ವಿ. ೧೯೬೯ ತುಳುನಾಡಿನ ಇತಿಹಾಸ
* ಗೀತಾ ಬುಕ್ ಹೌಸ್ ಮೈಸೂರು

೧೦. ಪ್ರೊ. ವರದರಾಜ್ ಮಂ. ೧೯೮೦ ತಮಿಳು ಸಾಹಿತ್ಯ ಚರಿತ್ರೆ
* ಕೇಂದ್ರ ಸಾಹಿತ್ಯ ಅಕಾಡೆಮಿ ನವದೆಹಲಿ


**ವಕ್ತೃಗಳು**

ಶ್ರೀ ನಾರ್ಣ ನಲ್ಕೆ – ಶಿಶಿಲ, ಬೆಳ್ತಂಗಡಿ ತಾಲೂಕು, ದ.ಕ.
ಶ್ರೀ ಲಿಂಗಪ್ಪ ಅಜಿಲ – ಪುತ್ತೂರು, ಪುತ್ತೂರು ತಾಲೂಕು, ದ.ಕ.
ಶ್ರೀಮತಿ ಸೇಸಮ್ಮ – ಏಮಾಜೆ, ಬಂಟ್ವಾಳ ತಾಲೂಕು, ದ.ಕ.
ಶ್ರೀ ವಾಸು ಅಜಿಲ – ಚೊಕ್ಕಾಡಿ, ಸುಳ್ಯ ತಾಲೂಕು, ದ.ಕ.
ಶ್ರೀ ಪುತ್ತ ಅಜಿಲ – ಕಾಂತುಬೈಲು, ಮಡಿಕೇರಿ ತಾಲೂಕು
ಶ್ರೀ ರವಿ – ಕಾಸರಗೋಡು, ಕಾಸರಗೋಡು
ಶ್ರೀಮತಿ ಧರ್ಣಮ್ಮ – ಕಾಂತಾವರ, ಉಡುಪಿ ಜಿಲ್ಲೆ